# ಪ್ರತಿಮೆ X ವಿಗ್ರಹ
# ದೈವ X ದೆವ್ವ



ಪ್ರತಿಮೆ



ವಿಗ್ರಹ


ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ಪ್ರತಿಮೆ x ವಿಗ್ರಹ
# ದೈವ x ದೆವ್ವ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್‌–2016

ಪ್ರತಿಗಳು : 1000 **ಬೆಲೆ. 100/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ - ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

**ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)**

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ (ಮಂ), ಅನಂತಪುರ (ಜಿಲ್ಲಾ)
ಸೆಲ್:9620193341, 9739226839

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ಪ್ರಪಂಚದಲ್ಲಿ ಯಾರ ಊಹೆಗು ತಿಳಿಯದ ದೇವರು ಆತನ ಬಿರುದಿಗೆ ತಕ್ಕಂತೆ ಯಾರಿಗೂ ತಿಳಿಯದವನಾಗಿ ಇದ್ದಾನೆ. ಆದ್ದರಿಂದ ಆತನನ್ನು **"ದೇವಲ್ಪಡುವವನು ದೇವರು"** ಎಂದು ಹೇಳುತ್ತಿದ್ದೇವೆ. ದೇವಟಜಿಠಿಡುವುದು ಎಂದರೇ ಹುಡುಕುವುದು ಎಂದು ಅರ್ಥ. ಹುಡುಕಿದರೂ ತಿಳಿಯುವು ದಿಲ್ಲವಾದ್ದರಿಂದ ಆತನನ್ನು ಅರ್ಥಕ್ಕೆ ತಕ್ಕಂತೆ 'ದೇವರು' ಎಂದು ಹೇಳಿದ್ದಾರೆ. ದೇವರಿಗೆ ಹೆಸರಿಲ್ಲ ಆದ್ದರಿಂದ ದೇವರು ಎನ್ನುವುದು ಹೆಸರಲ್ಲವೆಂದೂ, ಅದು ಅರ್ಥದಿಂದ ಕೂಡಿಕೊಂಡಿರುವ ಬಿರುದು ಮಾತ್ರವೇ ಎಂದು ತಿಳಿಯಬೇಕು. ಹೆಸರು ಎಲ್ಲರಿಗೂ ಸರ್ವ ಸಾಧಾರಣವಾಗಿರುತ್ತದೆ. ಬಿರುದು ಎಲ್ಲರಿಗೂ ಇರುವಂಥದಲ್ಲ. ಇರುವ ಪ್ರತ್ಯೇಕತೆಯನ್ನು ಗುರುತಿಸಿ ಅದಕ್ಕೆ ತಕ್ಕಂತೆ ಆ ಪ್ರತ್ಯೇಕತೆಯನ್ನು ಸೂಚಿಸುವಂತೆ ಹೇಳಲ್ಪಟ್ಟಿರುವುದನ್ನು ಬಿರುದು ಎನ್ನುತ್ತಾರೆ ಆದರೇ ಹೆಸರೆನ್ನುವುದಿಲ್ಲ. ಹೆಸರು ಮನುಷ್ಯನಲ್ಲಿನ ಪ್ರತ್ಯೇಕತೆಯನ್ನು ತೋರಿಸುವಂಥದ್ದಲ್ಲ. 'ರಾಮ' ಎಂಬ ಎರಡಕ್ಷರಗಳ ಹೆಸರು 'ಕರ್ಮವನ್ನು ನಾಶಮಾಡುವವನು' ಎಂಬ ಅರ್ಥದಿಂದ ಕೂಡಿಕೊಂಡಿದೆ. ಆದರೇ ರಾಮ ಎಂಬ ಹೆಸರು ಇಟ್ಟುಕೊಂಡವನು ಅಷ್ಟು ಸಾಮರ್ಥ್ಯ ಇಲ್ಲದವನಾಗಿರುತ್ತಾನೆ. ಆದ್ದರಿಂದ ಮನುಷ್ಯರಿಗಿರುವ ಹೆಸರುಗಳು ಅವರಲ್ಲಿನ ಪ್ರತ್ಯೇಕತೆಯನ್ನು ತೋರಿಸಲಾರವು. ಬಿರುದು ಆದರೇ ಪ್ರತ್ಯೇಕತೆಯನ್ನು ಅನುಸರಿಸಿ ಇಟ್ಟಿರುವು ದಾಗಿರುತ್ತದೆ. ಆಟ ಆಡುವವನನ್ನು 'ಪ್ಲೇಯರ್' ಎಂದು ಕರೆಯುತ್ತಾರೆ. ಪ್ಲೇಯರ್ ಎಂದರೇ ಆತನ ಪ್ರತ್ಯೇಕತೆಯನ್ನು ಅನುಸರಿಸಿ, ಆತನು ಆಡುವವನೆಂದು ಅರ್ಥವನ್ನು ಕೊಡುತ್ತಾ ಹೇಳುವುದಾಗಿ ಇದೆ. ಆದ್ದರಿಂದ ಪ್ಲೇಯರ್ ಎನ್ನುವುದು ಹೆಸರಲ್ಲ. ಪ್ಲೇಯರ್ ಎನ್ನುವುದು ಬಿರುದು ಮಾತ್ರವೇ. ಹಾಗೆಯೇ ದೇವರೆನ್ನುವುದು ಹೆಸರಲ್ಲ, ಅದು ಆತನು ಇರುವ ವಿಧಾನವನ್ನು ತಿಳಿಸುವ ಶಬ್ಧವು ಮಾತ್ರವೇ.

ದೇವರಿಗೆ ಹೆಸರು ಮಾತ್ರವಿಲ್ಲ. ಯಾರಾದರೂ ಹೆಸರು ಯಾಕಿಲ್ಲ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೇ! ರೂಪವಿರುವ ಯಾವುದಕ್ಕಾದರೂ ಹೆಸರಿರುತ್ತದೆ. ದೇವರಿಗೆ ರೂಪವಿಲ್ಲವಲ್ಲ! ಅದಕ್ಕೆ ಹೆಸರಿಲ್ಲ. ರೂಪಕ್ಕು ಹೆಸರಿಗು ಅವಿನಾಭಾವ ಸಂಬಂಧವಿರುತ್ತದೆ. ರೂಪವಿದ್ದರೇ

ಹೆಸರಿರುತ್ತದೆ, ಹೆಸರಿದ್ದರೇ ರೂಪವಿರುತ್ತದೆ ಎರಡೂ ಇಲ್ಲದವನು ಈ ಪ್ರಪಂಚದಲ್ಲಿ ಒಬ್ಬನೇ ಒಬ್ಬನಿದ್ದಾನೆ, ಅವನೇ ದೇವರು. ರೂಪ, ಹೆಸರು ಎರಡೂ ಇಲ್ಲದವನು ಹೊರಗೆ ತಿಳಿಯುವ ಹಾಗೆ ಸ್ಥೂಲವಾಗಿರುವುದಿಲ್ಲ. ಆದ್ದರಿಂದ ದೇವರು ಮಾಡುವ ಕೆಲಸಗಳು ಕೂಡಾ ಸ್ಥೂಲವಾಗಿರುವುದಿಲ್ಲ. ಆದ್ದರಿಂದ ದೇವರಿಗೆ ಕೆಲಸವಿಲ್ಲ ಎಂದು ಹೇಳಬಹುದು. ದೇವರು ತಿಳಿಯಲ್ಪಡುವುದಿಲ್ಲ ಎಂದು ಹೇಳುತ್ತಿದ್ದೇವೆ ಆದರೇ ಆತನು (ದೇವರು) ಅಸಲಿಗೆ ಇಲ್ಲವೆಂದು ನಾವು ಹೇಳಲಿಲ್ಲ. ಹಾಗೆಯೇ ಆತನ ಕೆಲಸ ಕಾಣಿಸುವುದಿಲ್ಲ ಆದಕಾರಣ ಆತನಿಗೆ ಕೆಲಸವಿಲ್ಲ ಎನ್ನುತ್ತಿದ್ದೇವೆ. ಈ ವಿಧವಾಗಿ ದೇವರನ್ನು ರೂಪ, ನಾಮ, ಕ್ರಿಯಾ ರಹಿತನೆಂದು ಹೇಳಿದ್ದಾರೆ. ದೇವರ ರೂಪ ಕಾಣಿಸುವುದಿಲ್ಲ, ದೇವರ ಹೆಸರು ಕೇಳಿಸುವುದಿಲ್ಲ. ದೇವರ ಕೆಲಸ(ಕಾರ್ಯ) ತಿಳಿದಿಲ್ಲ. ಇದನ್ನನುಸರಿಸಿ ದೇವರು ಸ್ಥೂಲವಾಗಿಲ್ಲ, ಸೂಕ್ಷ್ಮವಾಗಿದ್ದಾನೆ ಎಂದು ತಿಳಿಯಬಲ್ಲದು. ಇದು ದೇವರ ಪ್ರಾಥಮಿಕ ಧರ್ಮ. ಅದೇ ಶಾಸನ, ಇದನ್ನು ಯಾರೂ ಬದಲಾಯಿಸುವುದಕ್ಕೆ ಸಾಧ್ಯವಿಲ್ಲ. ಯಾರಾದರೂ ನಾನು ದೇವರನ್ನು ನೋಡಿದ್ದೇನೆ ಎಂದು ಹೇಳಿದರೇ ಅದು ಪೂರ್ತಿ ಅಸತ್ಯ.

ದೇವರು ಸೂಕ್ಷ್ಮವಾಗಿದ್ದು ಸ್ಥೂಲವಾದ ಪ್ರಪಂಚವನ್ನು ನಿರ್ಮಿಸಿದ್ದಾನೆ. ಸ್ಥೂಲವಾದ ಪ್ರಪಂಚಕ್ಕೆ ಸೂಕ್ಷ್ಮವಾದ ಪ್ರಪಂಚವನ್ನು ಕೂಡಾ ಜೋಡಿಸಿದ್ದಾನೆ. ಕಾಣಿಸುವ ಮನುಷ್ಯರನ್ನು ಸೃಷ್ಠಿಸಿರುವಹಾಗೆ, ಕಾಣಿಸದ ಭೂತಗಳನ್ನು, ಗ್ರಹಗಳನ್ನು ದೇವರು ಸೃಷ್ಠಿಸಿದ್ದಾನೆ. ದೇವರು ಸೃಷ್ಠಿಸಿರುವ ತನ್ನ ಸೃಷ್ಠಿ ಎಲ್ಲವೂ ಸ್ಥೂಲ, ಸೂಕ್ಷ್ಮವೆಂದು ಎರಡು ಭಾಗಗಳಾಗಿದೆ. ಕಾಣಿಸದ ಸೂಕ್ಷ್ಮ ಭಾಗಕ್ಕೆ ತಾನು ಕಾಣಿಸದವನಾಗಿದ್ದು ಅವುಗಳನ್ನು ನಡೆಸುತ್ತಿದ್ದಾನೆ. ಅದೇ ವಿಧವಾಗಿ ಕಾಣಿಸುವವುಗಳೊಂದಿಗೆ ಕೂಡಾ ದೇವರು ಕಾಣಿಸುವವನಾಗಿಯೇ ಸಂಬಂಧ ಪಟ್ಟು ಅವುಗಳಿಗೆ ತನ್ನ ಜ್ಞಾನವನ್ನು ತಿಳಿಸಬೇಕಾಗಿರುತ್ತದೆ. ದೇವರ ಸೃಷ್ಠಿ ಎರಡು ವಿಧಗಳಾಗಿ ಇರುವುದರಿಂದ ದೇವರು ಕೂಡಾ ಸ್ಥೂಲ, ಸೂಕ್ಷ್ಮ ಎಂಬ ಎರಡು ವಿಧಗಳಾಗಿದ್ದಾನೆ. ದೇವರು ಸೂಕ್ಷ್ಮವಾಗಿ ರೂಪ, ನಾಮ, ಕ್ರಿಯಾ ರಹಿತನಾಗಿ ಇದ್ದಾನೆ. ಹಾಗೆಯೇ ಸ್ಥೂಲವಾಗಿ ರೂಪ, ನಾಮ, ಕ್ರಿಯಾ

ಸಹಿತನಾಗಿ ಕೂಡಾ ಇರಬೇಕಾದ ಅವಶ್ಯವಿದೆ. ಇಲ್ಲಿ ದೇವರು ನಾಮ ರೂಪ ಕ್ರಿಯಾರಹಿತನೆಂದು ಹೇಳಿ ಕೆಳಗೇ ನಾಮ ರೂಪ ಕ್ರಿಯಾ ಸಹಿತನೆಂದು ಏಕೆ ಹೇಳುತ್ತೀರಾ? ಎಂದು ಯಾರಾದರೂ ಪ್ರಶ್ನಿಸಬಹುದು. ಹಾಗೆ ಹೇಳುವುದರಿಂದ ವಾಕ್ಯದಲ್ಲಿ ಶಾಸ್ತ್ರ ಬದ್ಧತೆ ಇಲ್ಲದೇ ಹೋಗಿ ಅಸತ್ಯವಾಗಿ ಕಾಣಿಸುತ್ತದೆ ಅಲ್ಲವೇ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ.

ದೇವರು ಸೂಕ್ಷ್ಮವಾದವನು, ನಾಮ, ರೂಪ, ಕ್ರಿಯಾರಹಿತನು ಎಂದು ಹೇಳಿ ಇದು ಶಾಸನ, ದೇವರ ಪ್ರಾಥಮಿಕ ಧರ್ಮವೆಂದು ಹೇಳಿದ ನಂತರ ಅದಕ್ಕೆ ವಿರುದ್ಧವಾಗಿ ಏನು ಹೇಳಿದರೂ ಅದು ಅಸತ್ಯವಾಗುತ್ತದೆ, ಅಶಾಸ್ತ್ರೀಯ ವಾಗುತ್ತದೆ. ಆದ್ದರಿಂದ ದೇವರು ಹಾಗೆ ನಾಮ, ರೂಪ, ಕ್ರಿಯೆಗಳು ಹೊಂದಿರುವವನೆಂದು ಹೇಳುವುದು ಪೂರ್ತಿ ತಪ್ಪಾಗುವುದು. ಆದ್ದರಿಂದ ಈ ಸಮಸ್ಯೆಯನ್ನು ದೇವರೇ ಪರಿಹರಿಸುತ್ತಾ ಆತನೇ ತನ್ನ ಸ್ಥೂಲ, ಸೂಕ್ಷ್ಮಗಳ ವಿವರವನ್ನು ಕುರಿತು ತಿಳಿಸಿದ್ದಾನೆ. ದೇವರು ಯಾವಾಗಲೂ ಸೂಕ್ಷ್ಮವಾಗಿಯೇ ಇರುತ್ತಾನೆ. ಸ್ಥೂಲವಾಗಿ ಎಂದಾದರೂ ಸ್ವಲ್ಪ ಸಮಯದಲ್ಲಿ ಇರುವ ಆತನನ್ನು ಆಗ ದೇವರು ಎಂದು ಹೇಳಬಾರದು. ಸ್ಥೂಲವಾಗಿ ಬಂದಿರುವವನು ದೇವರೇ ಆದರೂ, ಆಗ ಆತನನ್ನು ದೇವರು ಎಂದು ಹೇಳಬಾರದು. ದೇವರು ಎಂದಿಗೂ ಸೂಕ್ಷ್ಮವಾದವನೇ ಆದಕಾರಣ ದೇವರ ಸ್ಥೂಲರೂಪಕ್ಕೆ ದೇವರೆಂಬ ಮಾತು ಅನ್ವಯಿಸುವುದಿಲ್ಲ. ಸ್ಥೂಲವಾಗಿರುವ ಸಮಯದಲ್ಲಿ ಭಗವಂತನೆಂದು ಹೇಳಬಹುದು ಅಥವಾ 'ಗುರು' ಎಂದು ಹೇಳಬಹುದು. ದೇವರೇ ಆ ವಿಧವಾಗಿ ತನ್ನ ವಿಧಾನವನ್ನು ನಿರ್ಣಯಿಸಿಕೊಂಡಿದ್ದಾನೆ. ಈಗ ಸ್ಥೂಲವಾಗಿರುವ ದೇವರನ್ನು ಭಗವಂತನು ಅಥವಾ ಗುರುವು ಎಂದು ಹೇಳುವುದೇ ಅಲ್ಲದೇ, ಸೂಕ್ಷ್ಮ ವಾಗಿರುವವನನ್ನು ದೇವರೆಂದು ಕರೆಯಬಹುದು ಎಂದು ತಿಳಿದುಹೋಗಿದೆ. ಈ ವಿಧವಾಗಿ ದೇವರು ಎರಡು ವಿಧಗಳಾಗಿ ಇದ್ದಾನೆ. ಸೂಕ್ಷ್ಮವಾಗಿರುವಾಗ ದೇವರು ಎಂದು ಹೇಳಲ್ಪಟ್ಟಿರುವವನು ಸ್ಥೂಲವಾಗಿರುವಾಗ ಭಗವಂತನಾಗಿ ಹೇಳಲ್ಪಡುತ್ತಿದ್ದಾನೆ. ಇದನ್ನನುಸರಿಸಿ ಯಾವ ರೀತಿಯಾಗಿ ಸ್ಥೂಲ, ಸೂಕ್ಷ್ಮಗಳು ಎರಡು ಬೇರೆಬೇರೆಯಾಗಿ ಇವೆಯೋ, ಅದೇ ರೀತಿ ದೇವರು, ಭಗವಂತನು

ಬೇರೆಬೇರೆಯಾಗಿ ಕರೆಯಲ್ಪಡುತ್ತಿದ್ದಾರೆ. ಸೂತ್ರದ ಪ್ರಕಾರ ದೇವರನ್ನು ಭಗವಂತನೆಂದು ಅನ್ನಬಾರದು. ಹಾಗೆಯೇ ಭಗವಂತನನ್ನು ದೇವರೆಂದು ಅನ್ನಬಾರದು. ದೇವರ ಪ್ರಾಥಮಿಕ ಜ್ಞಾನದ ಪ್ರಕಾರ ದೇವರು ಬೇರೆ, ಭಗವಂತನು ಬೇರೆಯಾಗಿ ಇದ್ದಾರೆಂದು ತಿಳಿಯುತ್ತಿದೆ.

ದೇವರು 'ಏಕಸ್ವರೂಪದವನು' ಎಂದು ಕೆಲವರು ಹೇಳುವುದನ್ನು ಕೇಳಿದ್ದೇವೆ. ಹಾಗಿರುವಾಗ ಸ್ಥೂಲ, ಸೂಕ್ಷ್ಮವೆಂದು ಎರಡು ವಿಧಗಳಾಗಿ ಸೀಳಿಸಿ ದೇವರು, ಭಗವಂತನು ಎಂದು ಅನ್ನುತ್ತಿದ್ದಾರೆ. ದೇವರು, ಭಗವಂತನು ಎಂಬ ಎರಡು ವಿಧಗಳಾಗಿರುವವನನ್ನು ಏಕಸ್ವರೂಪದವನೆಂದು ಹೇಗೆ ಕರೆಯಬೇಕು? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ! ದೇವರು ಒಬ್ಬನೇ ಆದರೂ ಆತನು ನಮಗೆ ತಿಳಿದು ಒಂದು ವಿಧವಾಗಿ, ತಿಳಿಯದೆ ಒಂದು ವಿಧವಾಗಿ ಇದ್ದಾನೆ. ತಿಳಿದು ಭಗವಂತನಾಗಿ, ತಿಳಿಯದೆ ದೇವರಾಗಿ ಇದ್ದಾನೆಂದು ಇಲ್ಲಿಯವರೆಗು ತಿಳಿದುಕೊಂಡಿದ್ದೇವೆ. ಆದರೇ ದೇವರನ್ನು ಕುರಿತು ಇನ್ನೂ ಎಷ್ಟೋ ತಿಳಿಯಬೇಕಾಗಿರುವುದು ಇದೆ. ದೇವರು ಸುಲಭವಾಗಿ ಅರ್ಥವಾಗುವವನಲ್ಲ. ಏಕೆಂದರೇ! ರೂಪ, ನಾಮ, ಕ್ರಿಯೆಗಳು ಇಲ್ಲದ ದೇವರು ಸರ್ವಜೀವರಾಶಿಗಳನ್ನು ಹೇಗೆ ಸೃಷ್ಟಿಸಿದ್ದಾನೆ? ಎಂಬ ಪ್ರಶ್ನೆ ಬರಬಹುದು. ದೇವರು ಕೆಲಸಮಾಡದವನಾದರೇ ಇಷ್ಟುಜನ ಮಾನವರನ್ನು, ಇಷ್ಟು ಜೀವರಾಶಿಗಳನ್ನು ಹೇಗೆ ಸೃಷ್ಟಿಸಿದ್ದಾನೆ? ಸೃಷ್ಟಿಸಿದ್ದಾನೆ ಎಂದರೇ ಕೆಲಸ ಮಾಡಿದಂತೆಯೇ ಅಲ್ಲವೇ! ಎಂದು ಪ್ರಶ್ನಿಸುವುದಕ್ಕೆ ಅವಕಾಶವಿದೆ. ಆಗ ಅದಕ್ಕೆ ಉತ್ತರ ಇಲ್ಲದೇ ಹೋಗುವ ಅವಕಾಶವಿದೆ. ಜ್ಞಾನವೆಂದರೇ ಪ್ರತಿ ಪ್ರಶ್ನೆಗೆ ಉತ್ತರ ಇರುವುದೆಂದು ಅರ್ಥ. ನಿಜವಾದ ಜ್ಞಾನದಲ್ಲಿ ಉತ್ತರವಿಲ್ಲದ ಪ್ರಶ್ನೆ ಇರುವುದಿಲ್ಲ. ಆದ್ದರಿಂದ ದೇವರು ನಾಮ, ರೂಪ, ಕ್ರಿಯೆಗಳು ಇಲ್ಲದವನು ಎಂದು ಹೇಳುವ ಮೊದಲಾಗಲೀ ಅಥವಾ ನಂತರವಾಗಲೀ ಯಾವುದೋ ನಮಗೆ ತಿಳಿಯದ ರಹಸ್ಯವಿದೆಯೆಂದು, ಆಳವಾಗಿ ನೋಡುವುದಾದರೇ ದೇವರ ವಿಧಾನದಲ್ಲಿ ಸ್ವಲ್ಪ ನಮಗೆ ತಿಳಿಯದ ವಿಷಯವು ತಿಳಿಯುತ್ತಿದೆ, ಅದೇನೆಂದರೇ!

ದೇವರು ಎರಡು ವಿಧಗಳಾಗಿ ಇದ್ದಾನೆಂದೂ ಒಂದು ರೂಪ, ನಾಮ, ಕ್ರಿಯೆಗಳು ಇಲ್ಲದ ಸೂಕ್ಷ್ಮವಾಗಿ ಇದ್ದಾನೆಂದು, ಎರಡು ರೂಪ, ನಾಮ, ಕ್ರಿಯೆಗಳಿರುವ ಸ್ಥೂಲವಾಗಿ ಇದ್ದಾನೆಂದು ಹೇಳಿಕೊಂಡಿದ್ದೇವೆ. ಆದರೇ ನಮ್ಮ ಊಹೆಗು ಸಹ ತಿಳಿಯದ ವಿಧಾನವಂತು ಒಂದಿದೆ, ಅದೇ ಮೂರನೆಯ ವಿಧಾನ. ಮೂರನೆಯ ವಿಧಾನದಲ್ಲಿ ದೇವರನ್ನು ದೇವರೆಂದು ಸಹ ಹೇಳಲಾರೆವು. ಆ ವಿಧಾನವು ಇತ್ತ ಸ್ಥೂಲವಾಗಾಗಲೀ, ಅತ್ತ ಸೂಕ್ಷ್ಮವಾಗಾಗಲೀ ಇಲ್ಲದಿರುವುದಾಗಿದೆ. ದೇವರು, ಭಗವಂತನು ಎರಡೂ ಅಲ್ಲದ ವಿಧಾನವಾಗಿ ಮೂರನೆಯ ವಿಧಾನವಿದೆ. ಇದು ಯಾವಕಡೆಯು ಹೇಳಲಾರದ ವಿಧಾನವಾಗಿ ಇರುವುದೇ ಅಲ್ಲದೇ, ಯಾವಕಡೆಯೂ ಅರ್ಥವಾಗದ ವಿಧಾನವಾಗಿದೆಯೆಂದು ಹೇಳಬಹುದು. ಮೂರನೆಯ ವಿಧಾನದಲ್ಲಿ ಸ್ಥೂಲದಲ್ಲಿನಹಾಗೆ ಕ್ರಿಯೆಗಳು ಇರುವವನಾಗಿ ಇದ್ದಾನೆ, ಸೂಕ್ಷ್ಮದಲ್ಲಿನಹಾಗೆ ಆಕಾರವಿಲ್ಲದವನಾಗಿ ಇದ್ದಾನೆ. ಸೂಕ್ಷ್ಮದಲ್ಲಿನ ಹಾಗೆ ಆಕಾರ ಇಲ್ಲದವನಾಗಿದ್ದಾನೆ. ಹೆಸರನ್ನು ನೋಡಿದರೇ ದೇವರು, ಭಗವಂತನು ಎಂದಲ್ಲದೇ 'ಸ್ಥಿರಾಸ್ಥಿರನಾಗಿ' ಇದ್ದಾನೆ. **'ಸ್ಥಿರಾಸ್ಥಿರನು'** ಎಂಬ ಪದವನ್ನು ಬಿಡಿಸಿ ನೋಡಿದರೇ ಸ್ಥಿರ+ಅಸ್ಥಿರ ಎಂದು ಇದೆ. ಸ್ಥಿರ ಎಂದರೇ ಶಾಶ್ವತವಾದುದೆಂದು, ಅಸ್ಥಿರ ಎಂದರೇ ಅಶಾಶ್ವತವಾದುದೆಂದು ಅರ್ಥ. ಶಾಶ್ವತ, ಅಶಾಶ್ವತಗಳು ಇರುವವನೆಂದು ಅದರ ಅರ್ಥ. ಇದು ಯಾವಕಡೆಯಲ್ಲದ ಎರಡುಕಡೆಯಿಂದ ಹೇಳುವುದಾಗಿದೆ. ಇದನ್ನು ಹೆಸರು ಎಂದು ಹೇಳಲಾರೆವು, ಹೆಸರಿಲ್ಲದಿರುವುದೆಂದು ಸಹ ಹೇಳಲಾರೆವು, ಮೂರನೆಯ ವಿಧಾನದಲ್ಲಿ ರೂಪವಿಲ್ಲ ಆದರೇ ಕೆಲಸವಿದೆ. ಕೆಲಸವಿದೆ ಆದರೇ ರೂಪ ವಿಲ್ಲವೆಂದೇ ಹೇಳಬಹುದು. ಸ್ಥಿರಾಸ್ಥಿರನೆಂದರೇ ಒಂದು ಅರ್ಥಕ್ಕು ಕೂಡಾ ತಿಳಿಯದವನು. ದೇವರು ಎಂದರೇ ಸಿಗದವನು, ತಿಳಿಯದವನು ಎಂದು ಹೇಳಬಹುದು. ಆದರೇ ಸ್ಥಿರಾಸ್ಥಿರನು ಎಂದರೇ ಯಾವಕಡೆಯು ಹೇಳಲಾರೆವು. ಆದ್ದರಿಂದ ಹೆಸರಿದ್ದರೂ ಇಲ್ಲದವನೆಂದು ಹೇಳಬಹುದು. ಇದನ್ನನುಸರಿಸಿ ಮೂರನೆಯ ವಿಧಾನದಲ್ಲಿ ಆಕಾರವಿಲ್ಲ ಕಾರ್ಯವಿದೆ. ಹಾಗೆಯೇ ಹೆಸರಿದೆ ಆದರೇ ಅರ್ಥವಿಲ್ಲದಿರುವುದಾಗಿ ಇದೆ.

ಮೂರನೆಯ ವಿಧಾನವು ಸ್ವಲ್ಪ ವಿಚಿತ್ರವಾಗಿದೆ. ದೇವರು ಸ್ಥೂಲವಾಗಿ ಭಗವಂತನಾದರೇ, ಸೂಕ್ಷ್ಮವಾಗಿ ದೇವರಾದರೇ, ಸ್ಥಿರಾಸ್ಥಿರನಾಗಿ ಸ್ವಲ್ಪ ಸ್ಥೂಲ, ಸ್ವಲ್ಪ ಸೂಕ್ಷ್ಮವಾಗಿ ಇದ್ದಾನೆ. ಆಕಾರದಲ್ಲಿ ಸೂಕ್ಷ್ಮವಾಗಿ, ಕಾರ್ಯದಲ್ಲಿ ಸ್ಥೂಲವಾಗಿ ಇದ್ದಾನೆಂದು ಹೇಳಬಹುದು. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೇ! ಇಲ್ಲಿಯವರೆಗು ಎಷ್ಟೋಜನ ಭೂಮಿಮೇಲೆ ಜ್ಞಾನವನ್ನು ತಿಳಿಸುವ ಸ್ವಾಮೀಜಿಗಳು, ಮತಹಿರಿಯರು, ಬೋಧಕರು ಇದ್ದಾರೆ. ಆದರೂ ಒಬ್ಬರೂ ಕೂಡಾ ನೀವು ಹೇಳಿರುವ ಮೂರನೆಯ ವಿಧಾನವನ್ನು ಕುರಿತು ಯಾರೂ ಹೇಳಲಿಲ್ಲ. ಭೂಮಿಮೇಲೆ ಮುಖ್ಯವಾಗಿ ಮೂರು ದೈವಗ್ರಂಥಗಳಿವೆ. ಅದರಲ್ಲಿ ಭಗವದ್ಗೀತೆಯಲ್ಲಾಗಲೀ, ಬೈಬಲ್‌ನಲ್ಲಾಗಲೀ, ಅಂತಿಮ ದೈವಗ್ರಂಥ ಖುರಾನ್‌ನಲ್ಲಾಗಲೀ ನೀವು ಹೇಳಿರುವ ಮೂರನೆಯ ವಿಧಾನವಿಲ್ಲ. ಆ ಮೂರು ಗ್ರಂಥಗಳಲ್ಲಿ ಸ್ಥೂಲ, ಸೂಕ್ಷ್ಮ ಎಂಬ ಎರಡು ವಿಧಾನಗಳು ಕೂಡಾ ಪೂರ್ತಿಯಾಗಲ್ಲದೇ ಅಸ್ಪಷ್ಟವಾಗಿ ಕಾಣಿಸುತ್ತಿವೆ. ಅದುಕೂಡಾ ಬುದ್ಧಿ ಗ್ರಹಿಸಿಕೊಳ್ಳುವ ಶಕ್ತಿಯಿರುವವರಿಗೆ ಮಾತ್ರವೇ ಆ ಗ್ರಂಥಗಳಲ್ಲಿ ಸ್ಥೂಲ, ಸೂಕ್ಷ್ಮ ಎರಡು ವಿಧಾನಗಳು ಕಾಣಿಸುತ್ತಿವೆ. ನೀವು ಹೇಳುವ ಮೂರನೆಯ ವಿಧಾನವು ಎಲ್ಲಿಯು ಇಲ್ಲ ಇದಕ್ಕೆ ನೀವೇನು ಹೇಳುವಿರಿ? ಗ್ರಹಿಸುವಶಕ್ತಿ ಇಲ್ಲದವರಿಗೆ ಸ್ಥೂಲ ಹೊರತು ಸೂಕ್ಷ್ಮವು ಕಾಣಿಸುವುದಿಲ್ಲ. ಮುಸ್ಲಿಮ್‌ರಿಗೆ ಖುರಾನ್ ಗ್ರಂಥದಲ್ಲಿ ಸ್ಥೂಲ ಮಾತ್ರ ಕಾಣಿಸುತ್ತಿದೆ, ದೇವರ ಒಂದು ಸೂಕ್ಷ್ಮತೆ ಸ್ವಲ್ಪವೂ ಕಾಣಿಸುತ್ತಿಲ್ಲ. ಮೂರು ಗ್ರಂಥಗಳಲ್ಲಿ ದೇವರ ಎರಡು ವಿಧಾನಗಳು ಬರೆಯಲ್ಪಟ್ಟಿರುವಾಗ ಮೂರನೆಯ ವಿಧಾನವು ಬುದ್ಧಿಯಿರುವವನು ಗ್ರಹಿಸಿಕೊಳ್ಳುವುದಾಗಿದೆ. ಆದರೂ ಇಲ್ಲಿಯವರೆಗು ಎರಡು ವಿಧಾನಗಳನ್ನೇ ಮನುಷ್ಯ ಸರಿಯಾಗಿ ಗ್ರಹಿಸಲಾರದೇ ಇದ್ದಾನೆ. ಮೂರನೆಯ ವಿಧಾನವು ಗ್ರಂಥಗಳಲ್ಲಿ ಪ್ರತ್ಯೇಕಿಸಿ ಹೇಳದೇ ಇರುವುದರಿಂದ, ಸ್ಪಷ್ಟವಾಗಿಲ್ಲದೇ ಅಸ್ಪಷ್ಟವಾಗಿ ಇರುವುದರಿಂದ, ಮೂಟೆಯಲ್ಲಿ ಮುಡಿಹಾಕಿ ಇಟ್ಟಿರುವ ಗಂಟಿನಹಾಗೆ ಇರುವುದರಿಂದ ಮೂರನೆಯ ವಿಧಾನವು ಕೆಲವರಿಗೆ ಕೂಡಾ ಅವಗಾಹನೆಗೆ ಬರದೆಹೋಗಿದೆ. ಈಗ ಕೆಲವರು ಮತ್ತೊಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೇ! ಭೂಮಿಮೇಲೆ ಎಲ್ಲರಿಗೂ

ಅರ್ಥವಾಗದ ಜ್ಞಾನವು ಅಂದರೇ ದೇವರ ಮೂರನೆಯ ವಿಧಾನವು ನಿಮಗೆ ಹೇಗೆ ತಿಳಿಯಿತೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗಿರುವುದು ನೋಡಿರಿ!

ಯಾರಿಗೂ ತಿಳಿಯದಿರುವುದನ್ನು ಗ್ರಂಥದಿಂದ ನಾನು ಗ್ರಹಿಸಿಕೊಂಡಿದ್ದೇನೆ. ಎಲ್ಲರ ಬುದ್ಧಿಗಿಂತಲೂ ನನ್ನ ಬುದ್ಧಿ ದೊಡ್ಡದೆಂದು ನಾನು ಯಾವಾಗಲೂ ಹೇಳಲಿಲ್ಲ. ನನಗೆ ಹುಟ್ಟುವಿಕೆಯಿಂದ ಇರುವ ಭಾವವೇ ಗ್ರಂಥದಲ್ಲಿದೆ ಆದರೇ ಗ್ರಂಥದೊಳಗಿನಿಂದ ನಾನು ಗ್ರಹಿಸಿಕೊಂಡಿರುವುದು ಏನೂ ಇಲ್ಲ. **ನನ್ನ ಭಾವನೆಗಳೇ ಮೂರು ಗ್ರಂಥಗಳಲ್ಲಿರುವುದರಿಂದ ಅದರಲ್ಲಿ ನನಗೆ ರಹಸ್ಯಗಳಂತೂ ಏನೂ ಇಲ್ಲ.** ಅವುಗಳಿಂದ ನಾನು ಕಲಿತಿರುವುದು ಕೂಡಾ ಏನೂ ಇಲ್ಲ. ಕಲಿತುಕೊಳ್ಳುವವನು ಒಂದು ಗ್ರಂಥಕ್ಕೇ ಪರಿಮಿತಿ ಆಗಬಲ್ಲನು. ಇತರ ಗ್ರಂಥಗಳನ್ನು, ಇತರ ಮತಗಳನ್ನು ದ್ವೇಷಿಸುವನು. ಇಂತಹ ಮತದವನೆಂದು ಗುರುತು ತಂದುಕೊಳ್ಳುವನು. ಸತ್ಯವನ್ನು ಹೇಳಿದರೇ ಈದಿನ ಒಂದು ಗ್ರಂಥದಲ್ಲಿನ ವಿಷಯವನ್ನು (ಜ್ಞಾನವನ್ನು) ಕೂಡಾ ಸರಿಯಾಗಿ ತಿಳಿದುಕೊಂಡಿರುವವನು ಇಲ್ಲ. ಮೂರು ಗ್ರಂಥಗಳಲ್ಲಿನ ವಾಸ್ತವ ಜ್ಞಾನವನ್ನು ನಾನು ಹೇಳುತ್ತಿದ್ದೇನೆಂದರೇ ಅದು ಕಲಿತಿರುವುದಾದರೇ ಅಲ್ಲ. ಮನುಷ್ಯರಲ್ಲಿ ಒಂದನ್ನು ಕೂಡಾ ಸರಿಯಾಗಿ ತಿಳಿಯದವನು ಮೂರನ್ನೂ ಹೇಗೆ ತಿಳಿಯಬಲ್ಲನು? ಆದ್ದರಿಂದ ಈದಿನ ಲೋಕದಲ್ಲಿ ದೇವರ ಜ್ಞಾನವು ಅಸಂಪೂರ್ಣವಾಗಿಯೇ ಮನುಷ್ಯರಿಗೆ ತಿಳಿದಿದೆ ಎಂದು ಹೇಳಬಹುದು ಜ್ಞಾನ ತಿಳಿಯದಿರುವುದರಿಂದ ನಾನು ಸುಲಭವಾಗಿ ಹೇಳುವ ದೇವರ ಜ್ಞಾನವನ್ನು ಮನುಷ್ಯ ಗುರುತು ಹಿಡಿಯಲಾರದೆ ಹೋಗುತ್ತಿದ್ದಾನೆ.

ದೇವರು ತನ್ನ ಜ್ಞಾನವನ್ನು ಸ್ಥೂಲ, ಸೂಕ್ಷ್ಮಗಳೆಂದು ಹೇಳುವುದಾಗಿದೆ, ಅಷ್ಟೇ ಹೊರತು ಸ್ಥಿರಾಸ್ಥಿರಗಳೆಂದು ಎಲ್ಲೂ ಪ್ರತ್ಯೇಕವಾಗಿ ಹೇಳಲಿಲ್ಲ. ತನ್ನ ಜ್ಞಾನದಮೇಲೆ ಆಸಕ್ತಿಯಿರುವವನಿಗೆ ಮಾತ್ರ ತಿಳಿಯುವಂತೆ ತನ್ನ ಮೂರನೆಯ ವಿಧಾನವನ್ನು ತನ್ನ ಗ್ರಂಥಗಳಲ್ಲಿ ಇರುವಂತೆ ಮಾಡಿದ್ದಾನೆ. ದೇವರ ಮೂರನೆಯ ವಿಧಾನವಾದ ಸ್ಥಿರಾಸ್ಥಿರವು, ಎರಡು ವಿಧಾನಗಳನ್ನು ಚೆನ್ನಾಗಿ ಗ್ರಹಿಸಿದಾಗ

ಮೂರನೆಯ ವಿಧಾನವು ತಿಳಿಯಬಲ್ಲದು. ಎರಡು ವಿಧಾನಗಳು ತಿಳಿಯದವರಿಗೆ ಮೂರನೆಯ ವಿಧಾನದ ಮೇಲೆ ಆಸಕ್ತಿ ಸ್ವಲ್ಪವೂ ಇರುವುದಿಲ್ಲ. ದೇವರು ಮೂರು ವಿಧಗಳಾಗಿ ಇರುವನೆಂದು ಗುರುತಿಸುವುದಕ್ಕೆ ತನ್ನ ಆತ್ಮವನ್ನು ಮೂರು ವಿಧಗಳಾಗಿ ಕ್ಷರನು, ಅಕ್ಷರನು, ಪುರುಷೋತ್ತಮನು ಎಂದು ವಿಭಜಿಸಿ ಹೇಳಿದ್ದಾನೆ. ಇಲ್ಲಿ ನಾವು ಸ್ವಲ್ಪ ಪಕ್ಕಕ್ಕೆ ಸರಿದು ಹೇಳಿಕೊಂಡರೇ ದೇವರು ಎಂದು ಕೆಲವರಿಗೆ, ಅಲ್ಲಾಹ್ ಎಂದು ಕೆಲವರಿಗೆ ಯೆಹೋವಾ ಎಂದು ಕೆಲವರಿಗೆ ಪರಿಚಯ ವಿರುವವನು ಒಬ್ಬನೇ ದೇವರು. ಆಧ್ಯಾತ್ಮಿಕ ಪರಿಭಾಷೆಯಲ್ಲಿ ದೇವರನ್ನು ಪುರುಷನೆಂದೂ, ಸರ್ವ ಪ್ರಪಂಚವನ್ನು ಪ್ರಕೃತಿಯೆಂದು ಹೇಳುತ್ತಿದ್ದೇವೆ. ಕಾಣಿಸುವ ಪ್ರಪಂಚವೆಲ್ಲವೂ ಪ್ರಕೃತಿಯೆಂದೂ, ಕಾಣಿಸದ ದೇವರನ್ನು ಪುರುಷನೆಂದು ಹೇಳುತ್ತಿದ್ದೇವೆ. ಪ್ರಕೃತಿಯನ್ನು ವಿಭಜಿಸಿದರೇ ಐದು ಭಾಗಗಳಾಗಿರುವುದು. ಪ್ರಕೃತಿ ಐದು ಭಾಗಗಳಾಗಿ ಇರುವುದರಿಂದ 'ಮುತ್ತೈದೆ' ಎನ್ನುತ್ತಾರೆ. ಮುತ್ತೈದೆ ಎಂದರೇ ಐದು ಲಕ್ಷಣಗಳು ಇರುವುದೆಂದು ಅರ್ಥ. ಐದು ಲಕ್ಷಣಗಳಿರುವ ಶರೀರವನ್ನು ತಯಾರು ಮಾಡುವುದು ಸ್ತ್ರೀ ಎಂದು ಅರ್ಥ. ಒಟ್ಟಾರೆ ಪ್ರಕೃತಿಯನ್ನು ಸ್ತ್ರೀ ಎಂದು ಹೇಳುತ್ತಿದ್ದೇವೆ. ದೇವರನ್ನು ಪುರುಷನೆಂದು ಹೇಳುತ್ತಿದ್ದೇವೆ. ಪ್ರಕೃತಿ ಪರಮಾತ್ಮರಿಗೆ ಸ್ತ್ರೀ, ಪುರುಷನು ಎಂದು ಹೆಸರಿಡುವುದಕ್ಕಿಂತ ಮೊದಲು ಪುರುಷನನ್ನು ಆತ್ಮ ಎಂದೂ, ಸ್ತ್ರೀಯನ್ನು ಪ್ರಕೃತಿಯೆಂದೂ ಆಧ್ಯಾತ್ಮಿಕ ಪ್ರಕಾರ ಹೇಳುತ್ತಿದ್ದೆವು. ಅದರ ಪ್ರಕಾರವೇ ಪ್ರಕೃತಿ ಐದು ಭಾಗಗಳೆಂದು ಮುತ್ತೈದೆ ಎಂದು, ಪುರುಷನಾದ ದೇವರನ್ನು ಆತ್ಮ ಎಂದು, ಆತ್ಮ ಮೂರು ಭಾಗಗಳೆಂದು ತ್ರೈತಾತ್ಮ ಎಂದು ಹೇಳುತ್ತಿದ್ದೇವೆ. ಪ್ರಕೃತಿಯನ್ನು ಐದು ಭಾಗಗಳಾಗಿ ವಿಭಜಿಸದೇ ಹೋದರೇ ಪ್ರಕೃತಿ ಒಂದೇ ಸ್ತ್ರೀಯಾಗಿ ಉಳಿದು ಹೋಗುತ್ತದೆ. ಎಂದರೇ ಉತ್ಪತ್ತಿ ಮಾಡುವ ಸಾಧನೆಯಾಗಿ ಉಳಿದು ಹೋಗುತ್ತದೆ. ಹಾಗೆಯೇ ದೇವರನ್ನು ಮೂರು ಭಾಗಗಳಾಗಿ ವಿಭಜಿಸದೆ ಹೋದರೇ ಒಂದೇ ಪುರುಷನಾಗಿ ಉಳಿದುಹೋಗ ಬಲ್ಲನು. ಎಂದರೇ ಉತ್ಪತ್ತಿ ಮಾಡುವ ಬೀಜವಾಗಿ ಉಳಿದುಹೋಗುವನು.

ಪುರುಷನ ವಿಷಯವನ್ನೇ ಗ್ರಹಿಸಿದರೆ ಪುರುಷನು ಮೂರು ವಿಧಗಳಾಗಿ ಇದ್ದಾನೆಂದು ಮೂರು ದೈವಗ್ರಂಥಗಳು ಕಂಠವನ್ನೆತ್ತಿ ಸಾರುತ್ತಿವೆ. ಮೂವರು ಪುರುಷರ ವಿಷಯವು ಮೂರು ದೈವಗ್ರಂಥಗಳಲ್ಲಿ ಹೇಳುತ್ತಿದ್ದರೂ, ಮನುಷ್ಯರಿಗೆ ಮಾತ್ರ ಪುರುಷರು ಮೂವರಾಗಿ ಹೇಗೆ ಇರುವನೆಂದು ತಿಳಿದಿಲ್ಲ. ಮೂವರು ಪುರುಷರ ವಿಷಯ ಮೊದಲು ನಮ್ಮಿಂದಲೇ ಪ್ರಚಾರದೊಳಗೆ ಬಂದಿದೆಯೆಂದು, ಅದು ನಮ್ಮಲ್ಲಿನ ಭಾವವೆಂದು ಹೇಳಬಲ್ಲೆವು. ನಮ್ಮ ಭಾವನೆಗೆ ಸರಿಸಮಾನವಾಗಿ ಮೂವರು ಪುರುಷರ ಸಮಾಚಾರವು ಮೂರು ಗ್ರಂಥಗಳಲ್ಲಿ ಇದೆ. ಪ್ರಪಂಚವೆಲ್ಲದಕ್ಕೂ ಒಬ್ಬನೇ ದೇವರು ಅಥವಾ ಒಬ್ಬನೇ ಪುರುಷನು ಇರುವಾಗ ಆತನು ಹೇಗೆ ಮೂರು ಭಾಗಗಳಾಗಿದ್ದಾನೆಂದು ಯಾರಾದರೂ ಪ್ರಶ್ನಿಸಬಹುದು. ಆದರೇ ಇಲ್ಲಿ ಮೂರು ಭಾಗಗಳನ್ನು ತುಂಡುಗಳಾಗಿ ಸೀಳಿ ಮಾಡಲಿಲ್ಲ. ಒಂದೇ ಗೊಂಬೆ ಮೂರು ಕಡೆಗಳಲ್ಲಿ ಮೂರು ನೆರಳಿನಂತೆ ಪ್ರತಿಬಿಂಬಿಸಿದಹಾಗೆ ಒಂದೇ ಆತ್ಮ ಮೂರು ಛಾಯೆಗಳಾಗಿ ಬದಲಾಗಿ ಹೋಗಿದೆ. ಒಂದೇ ಪೇಪರ್‌ನಲ್ಲಿನ ಸಮಾಚಾರವನ್ನು ಮೂರು ಕಾಪೀಗಳಾಗಿ ಜೆರಾಕ್ಸ್ ತೆಗದಹಾಗೆ ಒಬ್ಬನೇ ಪುರುಷನು ಮೂವರು ಪುರುಷರಾಗಿ ಬದಲಾಗಿಹೋಗಿದ್ದಾನೆ. ಒಂದು ಪೇಪರ್ ಮೇಲೆ ಸಮಾಚಾರವನ್ನು ಜೆರಾಕ್ಸ್ ಮೂಲಕ ಮೂರು ಪೇಪರ್‌ಗಳ ಮೇಲೆ ಸಮಾಚಾರವಾಗಿ ಬದಲಾಯಿಸಿ ಹಾಕುತ್ತಿದ್ದೇವೆ ಅಲ್ಲವೇ! ಆ ಮೂರು ಪೇಪರ್‌ಗಳಲ್ಲಿ ಒಂದು ಒರಿಜಿನಲ್ (ಅಸಲಾದ) ಸಮಾಚಾರವಾದಾಗ, ಎರಡು ಜೆರಾಕ್ಸ್ ಪೇಪರ್‌ಗಳಲ್ಲಿನ ಸಮಾಚಾರವು ಡೂಪ್ಲಿಕೇಟ್ (ಮೊದಲನೆಯದನ್ನು ಹೋಲಿರುವ) ಸಮಾಚಾರವಾಗಿ ಇದೆ. ಜೆರಾಕ್ಸ್ ಕಾಪಿ ಮೊದಲನೆ ಪೇಪರ್‌ನ ಸಮಾಚಾರವೇ ಎರಡನೆಯ, ಮೂರನೆಯ ಪೇಪರ್ ಮೇಲಿರುವುದನ್ನು ಒರಿಜಿನಲ್ ಪೇಪರ್ ಎನ್ನುವುದಿಲ್ಲ. ಹಾಗೆಯೇ ಮೊದಲ ಆತ್ಮನನ್ನು ಹೋಲಿರುವ ಎರಡು ಆತ್ಮಗಳು ತಯಾರಾದರೂ, ಅವು ಮೊದಲನೆ ಆತ್ಮ ಹೋಲಿಕೆಯೇ ಇದ್ದರೂ, ಅವು ಮಾತ್ರ ಮೊದಲ ಆತ್ಮ ಅಲ್ಲ. ಒಂದೇ ಪುರುಷನು ಅಥವಾ ಒಂದೇ ಆತ್ಮದಿಂದ ಉಳಿದ ಎರಡು ಆತ್ಮಗಳು ತಯಾರಾದರೂ, ಅವು ಮೊದಲ ಆತ್ಮನನ್ನು ಹೋಲಿದ್ದರೂ ವಾಸ್ತವವಾಗಿ ಮೊದಲ ಆತ್ಮ ಅಲ್ಲ.

ಈ ವಿಧವಾಗಿ ಒಬ್ಬ ಪುರುಷನಾದರೂ ಆತ್ಮ ಮೊದಲ ಪುರುಷನಿಂದ ಇನ್ನೂ ಎರಡಾಗಿ ಬೇರ್ಪಟ್ಟು ಒಟ್ಟು ಮೂವರು ಪುರುಷರಾಗಿ ಉಳಿದಿದೆ. ಮೊದಲ ಪುರುಷನಿಂದ ಎರಡನೆಯ ಪುರುಷನು ಬೇರೆಯಾಗಿರುವಾಗ, ಎರಡನೆಯ ಪುರುಷನಿಂದ ಮೂರನೆಯ ಪುರುಷನು ಬೇರೆಯಾಗಿ ಮೊದಲ ಪುರಿಷನೊಂದಿಗೆ ಸಹ ಮೂವರು ಪುರುಷರಾಗಿ ಹೇಳಲ್ಪಡುತ್ತಿವೆ. ಅದರಲ್ಲಿ **ಮೊದಲನೆಯದು ಉತ್ತಮ ಪುರುಷನಾಗಿರುವಾಗ, ಎರಡನೆಯದು ಅಕ್ಷರ ಪುರುಷನು, ಮೂರನೆಯದು ಕ್ಷರ ಪುರುಷನಾಗಿ** ಚಲಾವಣೆ ಯಾಗುತ್ತಿದ್ದಾರೆ. ಮೂವರು ಪುರುಷರನ್ನು ಮೂರು ಆತ್ಮಗಳಾಗಿ ಹೇಳಿದರೇ ಮೊದಲ ಆತ್ಮ ಪರಮಾತ್ಮಯೆಂದೂ, ಎರಡನೆಯ ಆತ್ಮ ಆತ್ಮವೆಂದೂ, ಮೂರನೆಯ ಆತ್ಮ ಜೀವಾತ್ಮವೆಂದು ಕರೆಯಲ್ಪಡುತ್ತಿವೆ. ಈ ಮೂವರನ್ನು ಮತ್ತೊಂದು ವಿಧವಾಗಿ ದೇವರು, ಪಕ್ಕದವನು, ಜೀವಿಯು ಎಂದು ಕೂಡಾ ಹೇಳುತ್ತಿದ್ದಾರೆ.

| | | |
|---|---|---|
| **1) ಉತ್ತಮ ಪುರುಷ** | **2) ಅಕ್ಷರ ಪುರುಷ** | **3) ಕ್ಷರ ಪುರುಷ** |
| **1) ಪರಮಾತ್ಮ** | **2) ಆತ್ಮ** | **3) ಜೀವಾತ್ಮ** |
| **1) ದೇವರು** | **2) ಪಕ್ಕದವನು** | **3) ಜೀವಿಯು** |

ಈ ವಿಧವಾಗಿರುವ ಮೂವರನ್ನು ಮೂರು ಗ್ರಂಥಗಳಲ್ಲಿ ಮುಖ್ಯವಾಗಿ ಹೇಳಿದ್ದರೂ, ಯಾರೂ ಈ ಮೂವರನ್ನು ಗುರುತಿಸಲಿಲ್ಲ, ದೈವಗ್ರಂಥದಲ್ಲಿ ಹೇಳಿರುವ ಮೂರು ಆತ್ಮಗಳ ವಿಷಯದಲ್ಲಿ ಮಧ್ಯ ಆತ್ಮ ವಿಷಯವು ಯಾರಿಗೂ ತಿಳಿಯದೆಂದೇ ಹೇಳಬಹುದು. ಇಲ್ಲಿಯವರೆಗು ಆಧ್ಯಾತ್ಮಿಕ ಬೋಧಕರು ಎನ್ನುವವರಿಗೆ ಮಧ್ಯ ಆತ್ಮವಾದ ಅಕ್ಷರ ಪುರುಷನ ಕುರಿತು ಸ್ವಲ್ಪವಾದರೂ ತಿಳಿಯದೆಂದೇ ಹೇಳಬಹುದು. ಆತ್ಮವೆಂಬ ಹೆಸರು ಎಲ್ಲರ ಬಾಯಲ್ಲಿ ಮಾತನಾಡುತ್ತಿದ್ದರೂ, ಆತ್ಮವೆಂದರೇ ಏನೋ ಯಾರಿಗೂ ತಿಳಿಯದೇ ಹೋಗಿದೆ. ಆತ್ಮ ವಿಷಯದಲ್ಲಿ ಎಂಥವನಾದರೂ ಹಿಂದುಳಿದಿದ್ದಾನೆಂದು ತಿಳಿಯಬಲ್ಲದು. ಆಧ್ಯಾತ್ಮಿಕದಲ್ಲಿ ಮಧ್ಯಾತ್ಮ, ಅಥವಾ ಅಕ್ಷರ ಪುರುಷನು, ಅಥವಾ ಪಕ್ಕದವನು ಎಂದು ಹೇಳಲ್ಪಡುತ್ತಿರುವವನ ಪಾತ್ರವೇ ಹೆಚ್ಚಾಗಿದೆ. ಆದ್ದರಿಂದ ಮಧ್ಯ ಆತ್ಮ

ವಿಷಯವು ತಿಳಿಯದವನನ್ನು ಪೂರ್ತಿಜ್ಞಾನಿ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಈ ಮೂರು ಆತ್ಮಗಳನ್ನು ಒಂದೊಂದನ್ನು ಸಂಪೂರ್ಣವಾಗಿ ವಿವರಿಸಿಕೊಂಡು ಅರ್ಥ ಹೇಳಿಕೊಳ್ಳೋಣ.

ಇದಕ್ಕುಮೊದಲು ನಾವು ಆಧ್ಯಾತ್ಮಿಕ ವಿದ್ಯೆಯಲ್ಲಿ ಎಂದರೇ ಬ್ರಹ್ಮವಿದ್ಯೆಯಲ್ಲಿ ಬಹಳ ಸಲ ಮೊದಲ ಆತ್ಮನನ್ನು ಕುರಿತು ಹೇಳಿದಾಗ ದೇವರು ಎಂದು ಹೇಳುತ್ತಾ ಬಂದಿದ್ದೇವೆ. ಮೊದಲ ಆತ್ಮನನ್ನು ಎಂದರೇ ಉತ್ತಮ ಪುರುಷನನ್ನು ಕುರಿತು ಹೇಳಿಕೊಳ್ಳುವುದಕ್ಕೆ ಅದಕ್ಕಿಂತಲೂ ಮೀರಿದ ಪದವಾಗಲೀ, ಒಳ್ಳೆಯ ಪದವಾಗಲೀ ಇಲ್ಲದಿರುವುದರಿಂದ ಹಾಗೆಯೇ ಹೇಳಿಕೊಂಡು ಬಂದಿದ್ದೇವೆ. ಆತ್ಮ ಎಂಬ ವಿಷಯಕ್ಕೆ ಬಂದರೇ ಅದರ ಅರ್ಥ ಪ್ರಕಾರ ಆತ್ಮ ಎಂದರೇ ಅಡಗಿರುವುದೆಂದೂ, ತಿಳಿಯದೇ ಇರುವುದೆಂದು ಅರ್ಥವಿರುವುದು. ತಿಳಿಯದೇ ಇರುವುದರಿಂದ ಮಧ್ಯ ಆತ್ಮವನ್ನು ಕೂಡಾ 'ದೇವರು' ಎಂದು ಹೇಳಬಹುದು. ದೇವರು ಎಂದರೇ ತಿಳಿಯಲ್ಪಡದೆ ಇರುವವನೆಂದೇ ಅಲ್ಲವೇ ಅರ್ಥ. ಹಾಗೆಯೇ ಆತ್ಮ ಕೂಡಾ ಯಾರಿಗೂ ತಿಳಿಯದೆ ಶರೀರದಲ್ಲಿ ಅಡಗಿರುವುದರಿಂದ ಆತ್ಮವನ್ನು ಶರೀರದಲ್ಲಿನ ದೇವರೆಂದು ಹೇಳಬಹುದು. ಮೊದಲ ಪುರುಷನಾದ ಪುರುಷೋತ್ತಮನನ್ನು ಶರೀರ ಬಾಹ್ಯದಲ್ಲಿ ಕೂಡಾ ದೇವರೆಂದು ಹೇಳಬಹುದು. ಪ್ರಪಂಚವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿ ಯಾರಿಗೂ ತಿಳಿಯದಂತೆ ಪ್ರಪಂಚವೆಲ್ಲಾ ಇರುವ ಮೊದಲ ಪುರುಷನನ್ನು 'ಬಾಹ್ಯ ದೇವರು' ಎಂದು ಹೇಳಬಹುದು. ಶರೀರದೊಳಗೆ ಇರುವ ಆತ್ಮ ತಿಳಿಯುವುದಿಲ್ಲವಾದ್ದರಿಂದ 'ಆತ್ಮ ಶರೀರದಲ್ಲಿನ ದೇವರಾಗಿ ಇದೆ. ಹೀಗೆ ದೇವರು ಎಂಬ ಪದವನ್ನು ಎರಡು ವಿಧಗಳಾಗಿ ಬಳಸಬಹುದು. ಮಾತುಗಳ ಸಂದರ್ಭದಲ್ಲಿ 'ದೇವರು ಬುದ್ಧಿ ಹುಟ್ಟಿಸಿದರೇ' ಎಂದು ಆಗಾಗ ಹೇಳುತ್ತಿರುತ್ತೇವೆ. ದೇವರು ಕೆಲಸಮಾಡದವನೆಂದು ಒಂದುಕಡೆ ಹೇಳುತ್ತಾ, ಮತ್ತೊಂದುಕಡೆ ದೇವರು ಬುದ್ಧಿ ಹುಟ್ಟಿಸಿದರೇ ಎನ್ನುವುದರಲ್ಲಿ ದೇವರು ಕೆಲಸಮಾಡಿದಂತೆಯೆ ಅಲ್ಲವೇ! ಆದ್ದರಿಂದ ದೈವಜ್ಞಾನವನ್ನು ಮಾತನಾಡುವಾಗ ಪೂರ್ತಿ ಎಚ್ಚರವಹಿಸಿ ಮಾತನಾಡಬೇಕು. ಶರೀರಾಂತರ್ಗತದಲ್ಲಿ ಎಲ್ಲಾ ಮಾಡುವವನು ಮಧ್ಯ ಆತ್ಮವೇ

ಆದ್ದರಿಂದ, ಮಧ್ಯಾತ್ಮನನ್ನು ದೇವರು ಎಂದು ಉಚ್ಚರಿಸುತ್ತಾ ಮಧ್ಯ ಆತ್ಮ ಮಾಡುವ ಕೆಲಸಗಳನ್ನು ದೇವರು ಮಾಡುತ್ತಿದ್ದಾನೆಂದು ಹೇಳಬಹುದು. ನಮಗೆ ಮಧ್ಯ ಆತ್ಮ ವಿಷಯವು ತಿಳಿಯದೆ ಹೋದರೂ **'ದೇವರು ನನ್ನನ್ನು ಹೇಗೆ ಆಡಿಸಿದರೇ ಹಾಗೆ ಆಡಬಲ್ಲೆನು'** ಎಂದು ಒಬ್ಬನು ಅನ್ನುತ್ತಿದ್ದಾನೆ. **'ದೇವರು ಮಾಡಿಸಿದರೇ ನಾನು ಮಾಡಿದ್ದೇನೆ'** ಎಂದು ಮತ್ತೊಬ್ಬನು ಅನ್ನುತ್ತಿದ್ದಾನೆ. **'ದೇವರು ನನ್ನ ಬುದ್ಧಿಗೆ ತಿಳಿಸಿದರೇ ಹೇಳಬಲ್ಲೆನು'** ಎಂದು ಇನ್ನೊಬ್ಬನು ಅನ್ನುತ್ತಿದ್ದಾನೆ. ದೇವರು ಕೆಲಸ ಮಾಡದವನೆಂದು, ದೇವರು ತನ್ನ ಪ್ರಾಥಮಿಕ ಧರ್ಮದ ಪ್ರಕಾರ ಕಾರ್ಯ ರಹಿತನೆಂದು ನಾವು ಜ್ಞಾನದಲ್ಲಿ ಹೇಳಿಕೊಂಡರೂ, ಕೆಲವು ಸಂದರ್ಭಗಳಲ್ಲಿ ನಮಗೆ ತಿಳಿಯದೇನೇ ದೇವರು ಕೆಲಸಮಾಡುವವನಾಗಿ ಹೇಳುತ್ತಿದ್ದೇವೆ.

ಮೊದಲ ಪುರುಷನಾದ ದೇವರು ಪ್ರಪಂಚ ಹುಟ್ಟುವ ಪೂರ್ವದಲ್ಲಿ ಸ್ಥಿರಾಸ್ಥಿರನೆಂದು ಹೇಳಲ್ಪಡುತ್ತಿರುವುದರಿಂದ ಆತನನ್ನು ಊಹಿಸುವುದಕ್ಕು ಕೂಡಾ ಸಾಧ್ಯವಾಗುವುದಿಲ್ಲ. ಪ್ರಪಂಚವು ಸೃಷ್ಟಿಸಲ್ಪಡದ ಪೂರ್ವದಲ್ಲಿ ದೇವರು ಯಾವುದಕ್ಕೂ ಸಂಬಂಧ ಇಲ್ಲದವನಾಗಿ ಇರುತ್ತಿದ್ದನು. ಆಗ ದೇವರು ಎಂಬ ಪದವು ಕೂಡಾ ಆತನಿಗೆ ಅನ್ವಯಿಸುವುದಿಲ್ಲ. ಹುಡುಕುವವನೇ ಇಲ್ಲದಿರುವಾಗ ಹುಡುಕಲ್ಪಡುವವನನ್ನು ಕುರಿತು ಏನೂ ಹೇಳಲಾರೆವು. ಅಂತಹ ಶೂನ್ಯಸ್ಥಿತಿಯಲ್ಲಿ ಎಂದರೇ ಸೃಷ್ಟಿಗೆ ಪೂರ್ವ **'ನಿರಾಮಯನು, ನಿರ್ವಿಕಾರನು, ನಿರಾಧಾರನು, ಯಾವುದಕ್ಕೂ ಸಂಬಂಧವಿಲ್ಲದವನು'**, ಆತನನ್ನು ಕುರಿತು ಯಾವಕಡೆಯು ಹೇಳಲಾರೆವು. ಆದ್ದರಿಂದ ಸೃಷ್ಟಿಗಿಂತಲೂ ಪೂರ್ವವಿರುವವನನ್ನು ಯಾವಕಡೆಯು ಹೇಳಲಾರದೆ ಆತನು ಎಲ್ಲದಕ್ಕೂ ಸಂಬಂಧ ಇಲ್ಲದವನೆಂದು ಹೇಳಿದ್ದೇವೆ. ಇದೇ ವಿಷಯವನ್ನೇ ಅಂತಿಮ ದೈವಗ್ರಂಥದಲ್ಲಿ ಅಲ್‌ಇಖ್ಲಾಸ್ ಎನ್ನುವ 112ನೇ ಸುರಾದಲ್ಲಿ ನಾಲ್ಕು ವಾಕ್ಯಗಳಾಗಿ ಹೇಳಿದ್ದಾರೆ ನೋಡಿರಿ. **(112–1, 2, 3, 4) "1) ಆತನು ಒಬ್ಬನೇ ಇರುವನು. 2) ಆತನಿಗೆ ಯಾರ ಅಕ್ಕರೆಯೂ ಇಲ್ಲ. 3) ಆತನಿಗೆ ಸಂತಾನವಿಲ್ಲ, ಆತನು ಯಾರಿಗೂ ಸಂತಾನವಲ್ಲ 4) ಆತನಿಗೆ ಸಮಾನ ಯಾವುದೂ ಇಲ್ಲ."**

ಒಂದು ದೈವಗ್ರಂಥದಲ್ಲಿ ಹೇಳಿರುವ ನಾಲ್ಕು ವಿಧಾನಗಳನ್ನು ಬಹಳಜನ ಓದಿದ್ದಾರೆ. ಹಿಂದೂಗಳು, ಕ್ರೈಸ್ತರು ಈ ವಾಕ್ಯಗಳನ್ನು ಓದಿರುವುದಿಲ್ಲ. ಏಕೆಂದರೇ! ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಕೊನೆಯ 112ನೇ ಸುರಾದಲ್ಲಿ ಹೇಳಿರುವುದರಿಂದ, ಖುರಾನ್ ಗ್ರಂಥವನ್ನು ಮುಸ್ಲಿಮ್‌ರು ತಮ್ಮ ಗ್ರಂಥವೆಂದು ಹೇಳಿಕೊಳ್ಳುವುದರಿಂದ, ಮತಬೇಧವಿರುವವರೆಲ್ಲರೂ ಅವರದು ನಾವೇಕೆ ಓದಬೇಕೆಂದು ಹಿಂದೂಗಳು, ಕ್ರೈಸ್ತರು ಓದದೇ ಬಿಟ್ಟುಹಾಕುವುದು ನಡೆದಿದೆ. ಅಂತಿಮ ದೈವಗ್ರಂಥದಲ್ಲಿ 112ನೇ ಸುರಾದಲ್ಲಿನ ನಾಲಕ್ಕು ವಾಕ್ಯಗಳು ನನಗೆ ಬಹಳ ಇಷ್ಟವಾದವೆಂದು ನಾನು ಎಷ್ಟೋ ಸಲ ಹೇಳಿರುವುದೂ ಕೆಲವರಿಗೆ ತಿಳಿದಿದೆ. ಈ ವಾಕ್ಯಗಳು ನನಗೆ ಯಾಕೆ ಇಷ್ಟವೋ ಬಹಳ ಜನರಿಗೆ ತಿಳಿದಿಲ್ಲ. ಈ ವಾಕ್ಯಗಳನ್ನು ಓದಿರುವ ಮುಸ್ಲಿಮ್‌ರು ಬಹಳಜನರಿದ್ದಾರೆ. ಆದರೇ ಅವರಲ್ಲಿ ಕನಿಷ್ಟ ಒಬ್ಬರಿಗಾದರೂ ಈ ಸುರಾ ಅರ್ಥವಾಗಿದೆಯೆಂದು ಹೇಳಲಾರೆವು. ಈ ಸುರಾದಲ್ಲಿನ ನಾಲ್ಕು ವಾಕ್ಯಗಳಲ್ಲಿ ಒಂದು ವಾಕ್ಯಕ್ಕೂ ಸಹ ಸರಿಯಾದ ಉತ್ತರವನ್ನು ಹೇಳಲಾರರು. ಯಾಕೆ ಹೇಳಲಾರರು ಎಂದರೇ! 112ನೇ ಸೂರಾ ಒಟ್ಟು ನಾಲ್ಕು ವಾಕ್ಯಗಳು ಸೃಷ್ಠಿ ಪೂರ್ವವಿರುವ ದೇವರನ್ನು ಕುರಿತು ಹೇಳಿರುವ ವಾಕ್ಯಗಳು. ಆದರೇ ಮನುಷ್ಯನಿಗೆ ಜ್ಞಾನದ ಮೂಲಕ ತಿಳಿದಿರುವುದು ಸೃಷ್ಠಿ ನಂತರ ಇರುವ ದೇವರ ವಿಷಯ. ಸೃಷ್ಠಿ ನಂತರ ಇರುವ ದೇವರನ್ನು ಕುರಿತು ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗದಲ್ಲಿ ಹೇಳಿರುವ 3,4 ಶ್ಲೋಕಗಳ ಪ್ರಕಾರ **"ಸರ್ವ ಮಾನವರಿಗು ತಂದೆ ದೇವರು"** ಎಂದು ಇದೆ. ಈ ಮಾತು ಮನುಷ್ಯರೆಲ್ಲರಿಗೂ ಸಂಬಂಧಿಸಿರುವುದಾಗಿ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿದೆ. ದ್ವಿತೀಯ ದೈವಗ್ರಂಥ ಬೈಬಲ್‌ನಲ್ಲಿ ಕೂಡಾ ದೇವರನ್ನು ತಂದೆಯೆಂದು ಹೇಳಿದ್ದಾರೆ. ಅಂತಿಮ ದೈವಗ್ರಂಥ ಖುರಾನ್‌ನಲ್ಲಿ **'ಸಮಸ್ತವನ್ನು ದೇವರು ಸೃಷ್ಠಿಸಿದನು'** ಎಂದು ಹೇಳುವುದೇ ಅಲ್ಲದೇ, **'ದೇವರನ್ನು ಸೃಷ್ಠಿಕರ್ತ ಎಂದು', 'ಸಮಸ್ತ ಮನುಷ್ಯರನ್ನು ಸೃಷ್ಠಿಸಿರುವವನು ಅಲ್ಲಾಹ್ ಎಂದು'** ಹೇಳಿದ್ದಾರೆ. ಹಾಗೆ ಹೇಳುವುದರಿಂದ ದೇವರು ಎಲ್ಲರಿಗೂ ತಂದೆಯೆಂದು ತಿಳಿಯಲ್ಪಡುತ್ತಿದೆ.

ತಂದೆಯಾದ ದೇವರು ಎಂದು ಬೈಬಲ್ ಗ್ರಂಥದಲ್ಲಿ ಯೋಹಾನ್ ಸುವಾರ್ತೆ 6ನೇ ಅಧ್ಯಾಯ 27ನೇ ವಚನದಲ್ಲಿ ಇದೆ. **(ಯೋಹಾನ್ 6–27) "ಕ್ಷಯವಾದ ಆಹಾರಕ್ಕಾಗಿ ಕಷ್ಟಪಡಬೇಡಿ ಆದರೇ ನಿತ್ಯಜೀವವು ಉಂಟುಮಾಡುವ ಅಕ್ಷಯವಾದ ಆಹಾರಕ್ಕಾಗಿಯೇ ಕಷ್ಟಪಡಿ. ಮನುಷ್ಯ ಕುಮಾರನು ಅದನ್ನು ನಿಮಗೆ ಕೊಡುವನು. ಇದಕ್ಕಾಗಿಯೆ "ತಂದೆಯಾದ ದೇವರು" ಆತನಿಗೆ ಮುದ್ರೆಹಾಕಿದ್ದಾನೆ"** ಎಂದು ಇದೆ. ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗ ಯೋಗದಲ್ಲಿ 4ನೇ ಶ್ಲೋಕದಲ್ಲಿ "ಅಹಂ ಬೀಜ ಪ್ರದಃ ಪಿತಾ" **'ಬೀಜದಾತನಾದ ನಾನು ತಂದೆ'** ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೇ ಅದೇ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 17ನೇ ಶ್ಲೋಕದಲ್ಲಿ "ಪಿತಾಹ ಮಸ್ಯ ಜಗತ್" ಎಂದು ಇದೆ. ಅದರ ಅರ್ಥ **"ಸರ್ವ ಜಗತ್ತಿಗೆ ತಂದೆ ನಾನೇ"** ಎಂದು ಇದೆ. ಅದೇ ಖುರಾನ್ ಗ್ರಂಥದಲ್ಲಿ ಕೂಡಾ ಸೂರಾ 10, ಆಯತ್ 56ನಲ್ಲಿ **(10–56) "ದೇವರೇ ಪ್ರಾಣ ಕೊಡುತ್ತಾನೆ, ದೇವರೇ ಪ್ರಾಣ ತೆಗೆಯುತ್ತಾನೆ. ನೀವೆಲ್ಲಾ ಆತನ ಬಳಿಗೇ ಮರಳಿಸಲ್ಪಡುತ್ತೀರ"** ಎಂದು ಸಹ ಇರುವುದು. ಅಷ್ಟೇ ಅಲ್ಲದೆ **'ಎಲ್ಲರಿಗೂ ಸೃಷ್ಠಿಕರ್ತನಾದ ದೇವರು'** ಎಂದು ಬಹಳ ಸಲ ಖುರಾನ್ ಗ್ರಂಥದಲ್ಲಿಯೇ ಹೇಳಲ್ಪಟ್ಟಿದೆ. ಈ ವಿಧವಾಗಿ ಮೂರು ದೈವ ಗ್ರಂಥಗಳಲ್ಲಿ **"ದೇವರು ಎಲ್ಲರಿಗೂ ತಂದೆ"** ಎಂದು ಹೇಳಿದ್ದಾರೆ. ಆದರೇ ಖುರಾನ್ ಗ್ರಂಥದಲ್ಲಿ **112ನೇ ಸೂರಾದಲ್ಲಿ 3ನೇ ಆಯತ್‌ನಲ್ಲಿ "ಆತನಿಗೆ ಸಂತಾನವಿಲ್ಲ, ಆತನು ಯಾರಿಗೂ ಸಂತಾನವಲ್ಲ"** ಎಂದು ಇದೆ. ದೈವಗ್ರಂಥದಲ್ಲಿ ಒಂದು ಸಲ ದೇವರು ಹೇಳಿರುವ ಮಾತಿಗೆ ವಿರುದ್ಧವಾಗಿ ಎರಡನೆಯ ಬಾರಿ ದೇವರು ಹೇಳಲಿಲ್ಲ ಎಂಬ ಮಾತಿನ ಪ್ರಕಾರ ನೋಡಿದರೇ, ಮೂರು ಗ್ರಂಥಗಳಲ್ಲಿಯೂ ದೇವರಿಗೆ ಸಂತಾನವಿದೆ, ಸರ್ವ ಜೀವಿಗಳು ಆತನ ಸಂತಾನವೇ, ಎಲ್ಲರಿಗೂ ಆತನೇ ತಂದೆಯೆಂದು ಹೇಳಿದ್ದಾನೆ. ಹಾಗೆ ಹೇಳಿದವನು ಅಂತಿಮ ದೈವಗ್ರಂಥದಲ್ಲಿ ಕೊನೆಯಲ್ಲಿ 112ನೇ ಸೂರಾದಲ್ಲಿ ಮೂರನೆಯ ವಾಕ್ಯದಲ್ಲಿ **"ನನಗೆ ಸಂತಾನವೇ ಇಲ್ಲ"** ಎಂದು ಮೊದಲ ಮಾತುಗಳೆಲ್ಲಾ ವಿರುದ್ಧವಾಗಿ ಹೇಳಿದ್ದಾನೆ. **'ದೇವರು ಸತ್ಯಬದ್ಧನು, ಸತ್ಯಸಮೇತವಾಗಿ ತನ್ನ ಜ್ಞಾನವನ್ನು ಪ್ರಜೆಗಳಿಗೆ ತಿಳಿಸಿದ್ದಾನೆ'** ಎಂದು ಹೇಳಿರುವವರ ಮಾತಿಗೆ

ವಿರುದ್ಧವಾಗಿ 'ನನಗೆ ಸಂತತಿ ಇಲ್ಲ' ಎಂದು ಹೇಳಿದ್ದಾನೆ ಈ ಮಾತನ್ನು ಬಹಳಜನ ಮುಸ್ಲಿಮ್‌ರು ಕೂಡಾ ಹೇಳುವುದು ಕೇಳಿದ್ದೇವೆ. ಮೂರು ಗ್ರಂಥಗಳಲ್ಲಿ ಹೇಳಿರುವ ಮಾತಿಗೆ ಪೂರ್ತಿ ವಿರುದ್ಧವಾಗಿ 112ನೇ ಸೂರಾದಲ್ಲಿ ವಾಕ್ಯವಿದೆ. ದೇವರು ಯಾಕೆ ಹಾಗೆ ಒಂದುಕಡೆ ಒಂದುವಿಧವಾಗಿ ಮತ್ತೊಂದುಕಡೆ ಮತ್ತೊಂದು ವಿಧವಾಗಿ ಹೇಳಿದ್ದಾನೆ? ಎಂದು ಕೇಳಿದ್ದೇವೆ. ಅದಕ್ಕೆ ಬಹಳಜನ ಮುಸ್ಲಿಮ್‌ರು ದೇವರು ಹೇಳಿರುವ ಮಾತನ್ನು ಪ್ರಶ್ನಿಸಬಾರದು. ದೇವರು ಯಾವುದನ್ನು ಹೇಳಿದರೇ ಅದನ್ನೇ ನಂಬಬೇಕು, ಅದನ್ನೇ ಕೇಳಿಸಿಕೊಳ್ಳಬೇಕು. ಅಷ್ಟೇ ಹೊರತು ಅದುಹೇಗೆ ಎಂದು ಪ್ರಶ್ನಿಸಬಾರದು ಎಂದು ಹೇಳುತ್ತಿದ್ದಾರೆ.

ದೇವರು **'ಎಲ್ಲರಿಗೂ ತಂದೆ ನಾನೇ'**ಯೆಂದು ಒಂದುಕಡೆ ಹೇಳಿ, ಮತ್ತೊಂದುಕಡೆ **'ಯಾರಿಗೂ ನಾನು ತಂದೆ ಅಲ್ಲ'** ಎಂದರೇ, ಆಗ ಎರಡು ಮಾತುಗಳಾಗುವುದು ಅಲ್ಲವೇ! ಆ ಎರಡು ಮಾತುಗಳಲ್ಲಿ ಯಾವುದನ್ನು ನಂಬಬೇಕು? ಎಂದು ಪ್ರಶ್ನಿಸಿದರೇ ದೇವರು ಏನು ಹೇಳಿದರೂ ಕೇಳಬೇಕು, ನಂಬಬೇಕು ಅಷ್ಟೇ ಹೊರತು ತಿರುಗಿ ಪ್ರಶ್ನಿಸಬಾರದು ಎಂದು ಒಂದು ಕಥೆ ಹೇಳುತ್ತಿದ್ದಾರೆ. ದೇವರು ನಮ್ಮ ಎದುರೇ ಒಂದು ಪಕ್ಷಿಯನ್ನು ಕೊಂದು ನಾಲ್ಕು ತುಂಡುಗಳಾಗಿ ಕಡಿದು, ನಾಲ್ಕು ತುಂಡುಗಳನ್ನು ನಾಲ್ಕು ಕಡೆ ಬಿಸಾಡಿ ನಂತರ ಆ ಪಕ್ಷಿಯನ್ನು ಕರೆದರೇ ಅದು ಬದುಕಿ ಬಂದಿದೆ. ಇಲ್ಲಿ ಪಕ್ಷಿ ಸತ್ತುಹೋಗಿದೆ ಅಲ್ಲವೇ! ಎಂದು ಪ್ರಶ್ನಿಸಬಾರದು. ದೇವರು ಏನಾದರೂ ಮಾಡಬಲ್ಲನು. ಆತನು ಅಂದುಕೊಂಡರೇ ಏನಾದರೂ ಸಾಧ್ಯವೇ. ಆದ್ದರಿಂದ ದೇವರ ವಿಷಯದಲ್ಲಿ ಪ್ರಶ್ನೆ ಇರಬಾರದು ಎಂದು ಹೇಳುತ್ತಿದ್ದಾರೆ. ಒಂದು ವಿಧವಾಗಿ ಈ ವಾದ ಸರಿಯಾದುದೆಂದು ದೇವರು ಸಹ ಒಪ್ಪಿಕೊಳ್ಳುವುದಿಲ್ಲ. ಪ್ರಶ್ನೆ ಇದ್ದಾಗಲೇ ಉತ್ತರ ಇರುತ್ತದೆ. ಹಸಿವು ಇಲ್ಲದಿರುವಾಗ ಆಹಾರದೊಂದಿಗೆ ಅವಶ್ಯವೇ ಇಲ್ಲ. ತಿಳಿದುಕೊಳ್ಳಬೇಕೆಂಬ ಆಸಕ್ತಿ ಇರುವಾಗಲೇ ಹೇಳುವುದನ್ನು ಕೇಳಬಲ್ಲನು. ಮೊದಲಿಗೆ ಕೇಳುವ ಆಸಕ್ತಿ, ತಿಳಿದುಕೊಳ್ಳಬೇಕೆಂಬ ಶ್ರದ್ಧೆ ಇಲ್ಲದಿರುವಾಗ ಮನುಷ್ಯನಿಗೆ ಕೇಳುವ ಅವಶ್ಯವೇ ಇರುವುದಿಲ್ಲ. ತಿಳಿದು ಕೊಳ್ಳಬೇಕೆಂಬ ಆಸಕ್ತಿಯನ್ನೇ **'ಶ್ರದ್ಧೆ'** ಎನ್ನುತ್ತಿದ್ದೇವೆ. ಶ್ರದ್ಧೆ ಇರುವಾಗಲೇ ಮನುಷ್ಯ

ಯಾವುದನ್ನಾದರೂ ಸಹನೆಯಿಂದ ತಿಳಿದುಕೊಳ್ಳಬಲ್ಲನು. ಶ್ರದ್ಧೆ ಇಲ್ಲದಿರುವವನಿಗೆ ಏನು ಹೇಳಿದರೂ ಅದು ಅವನ ತಲೆಗೆ ಏರುವುದಿಲ್ಲ. **ಭಗವದ್ಗೀತೆಯಲ್ಲಿ ಅರ್ಜುನನ ಪ್ರಶ್ನೆಗಳಿವೆ, ಕೃಷ್ಣನ ಉತ್ತರಗಳಿವೆ.** ಹಾಗೆಯೇ **ಬೈಬಲ್‌ನಲ್ಲಿ ಶಿಷ್ಯರ ಪ್ರಶ್ನೆಗಳಿಗೆ ಯೇಸು ಉತ್ತರ ನೀಡಿದ್ದಾನೆ. ಖುರಾನ್ ಗ್ರಂಥದಲ್ಲಿ ಸಹ ದೇವರು ತನ್ನ ಜ್ಞಾನವನ್ನು ಸತ್ಯಸಮೇತವಾಗಿ ಹೇಳಿದ್ದಾನೆ ಆದರೇ, ಎಲ್ಲೂ ಅನುಮಾನವಿರುವಂತೆ ಹೇಳಲಿಲ್ಲ. ಬಹಳ ಕಡೆ 'ಬಿಡಿಸಿ ಹೇಳುತ್ತಿದ್ದೇನೆ', 'ವಿವರವಾಗಿ ಹೇಳುತ್ತಿದ್ದೇನೆ'** ಎಂದು ಸಹ ಹೇಳಿದ್ದಾನೆ.

ಅಷ್ಟೇ ಅಲ್ಲದೇ ತನ್ನದು ದೈವಗ್ರಂಥವಾದುದರಿಂದ ಅದು ಎಲ್ಲದಕ್ಕು **'ಒರೆಗಲ್ಲು'** ಎಂದು ಹೇಳಿದ್ದಾನೆ. ಈಗ ಒಂದು ಉದಾಹರಣೆಯನ್ನು ಹೇಳಿಕೊಳ್ಳೋಣ. ಒಂದು ಬಂಗಾರದ ಅಂಗಡಿಗೆ ಒಬ್ಬ ರೈತ ತನ್ನ ಬಂಗಾರವನ್ನು ಮಾರಿಕೊಳ್ಳುವುದಕ್ಕೆ ತಂದುಕೊಂಡಿದ್ದಾನೆ. ಬಂಗಾರದ ಅಂಗಡಿಯ ಯಜಮಾನ ಪ್ರತಿ ದಿನವು ಬಂಗಾರವನ್ನು ನೋಡುತ್ತಿದ್ದರೂ, ಆಗ ರೈತ ತಂದಿರುವ ಬಂಗಾರ ಸ್ವಚ್ಛವಾದುದೋ ಅಲ್ಲವೋ ಎಂದು, ಆತನು ತಂದಿರುವುದು ಬಂಗಾರವೋ ಅಲ್ಲವೋ ನಿರ್ಣಯಿಸಿ ನೋಡಿಕೊಳ್ಳುವುದಕ್ಕೆ ತನ್ನಬಳಿ ಒಂದು ಕಲ್ಲನ್ನು ಉಪಯೋಗಿಸಿ ನೋಡಿದ್ದಾನೆ. ರೈತ ತಂದಿರುವ ಬಂಗಾರವನ್ನು ಆ ಕಲ್ಲಿನಿಂದ ಗೀಚಿ ನೋಡಿ ಅದು ಬಂಗಾರವೋ ಅಲ್ಲವೋ ನಿರ್ಣಯಿಸಿಕೊಂಡನು. ಹಾಗೆಯೇ ಅದು ಸ್ವಚ್ಛವಾದ ಬಂಗಾರವಾ! ಅಲ್ಲವಾ! ಎಂಬ ವಿಷಯವು ಸಹ ತಿಳಿದುಹೋಯಿತು. ಕಲ್ಲಿನಿಂದ ಗೀಚಿ ನೋಡುವುದರಿಂದ ಬಂಗಾರದ ಒಂದು ಬಂಡಾರ ಹೊರಬೀಳುತ್ತಿದೆ. ಆದ್ದರಿಂದ ಬಂಗಾರವನ್ನು ಪರೀಕ್ಷಿಸುವುದಕ್ಕೆ ಇಟ್ಟುಕೊಂಡ ಕಲ್ಲನ್ನು **"ಒರೆಗಲ್ಲು"** ಎನ್ನುತ್ತಿದ್ದೇವೆ. ಯಾವ ವಿಧವಾಗಿ ಬಂಗಾರದ ಸ್ವಚ್ಛತೆಯನ್ನು ತಿಳಿಯುವುದಕ್ಕೆ ಒರೆಗಲ್ಲನ್ನು ಉಪಯೋಗಿಸುತ್ತಿದ್ದೇವೊ, ಹಾಗೆಯೇ ದೇವರ ಜ್ಞಾನ ವಿಷಯವು ಬಂಗಾರದಂತದ್ದೇ ಆದಕಾರಣ ಇದನ್ನು ಕೂಡಾ ಗೀಚಿ ನೋಡಿಕೊಳ್ಳುವುದಕ್ಕೆ ದೇವರು **'ಒರೆಗಲ್ಲು'** ತಪ್ಪದೇ ಅವಶ್ಯವಾದುದು ಎನ್ನುತ್ತಿದ್ದಾನೆ.

ಯಾವ ವಿಷಯದಲ್ಲಾದರೂ, ಯಾವ ಜ್ಞಾನದಲ್ಲಾದರೂ ಅದರಲ್ಲಿನ ಸ್ವಚ್ಛತೆ, ಅದರಲ್ಲಿನ ಸತ್ಯಾಸತ್ಯವನ್ನು ತಿಳಿದುಕೊಳ್ಳುವುದಕ್ಕೆ ತನ್ನ ಗ್ರಂಥವೇ ಒರೆಗಲ್ಲಿನಂತೆ ಇದೆಯೆಂದು ಹೇಳಿರುವ ದೇವರು ತನ್ನ ಜ್ಞಾನ ವಿಷಯದಲ್ಲಿ ಪ್ರಶ್ನಿಸಬೇಡವೆಂದು, ಪ್ರಶ್ನಿಸಬಾರದೆಂದು ಹೇಳುವನಾ? ಹಾಗೆ ಎಲ್ಲಿಯು ಹೇಳಲಿಲ್ಲ. ಹಾಗೆ ಹೇಳಿರುವನೆಂದು, ಜ್ಞಾನ ವಿಷಯದಲ್ಲಿ ಹೇಳಿರುವುದನ್ನೇ ಕೇಳಬೇಕೆ ಹೊರತು ಪ್ರಶ್ನಿಸಬಾರದೆಂದೂ, ಹೇಳುವವರು ಕೇಳುವವರನ್ನು ಮೋಸ ಮಾಡುವುದಕ್ಕೇ ಹೊರತು ಬೇರೆ ಏನೂ ಇಲ್ಲವೆಂದು ತಿಳಿಯುತ್ತಿದೆ. ಅಲ್ಲಾಹ್ ಮಾತನ್ನು ಪ್ರಶ್ನಿಸಬಾರದೆಂದು ಹಾಗೆ ಪ್ರಶ್ನಿಸುವುದು ಅವಿಶ್ವಾಸವಾಗುತ್ತದೆ ಎಂದು ಹೇಳುವುದು ಮೋಸವೇ ಹೊರತು ಬೇರೆ ಅಲ್ಲ. ಬಂಗಾರವನ್ನು ಎಷ್ಟೋ ಕಾಲದಿಂದ ನೋಡುತ್ತಿದ್ದರೂ ಬಂಗಾರ ವ್ಯಾಪಾರಿ ಕೂಡಾ ಕೊಂಡು ಕೊಳ್ಳುವ ಪ್ರತಿ ಬಂಗಾರವನ್ನು ಒರೆಗಲ್ಲಿನಿಂದ ಗೀಚಿ ನೋಡಿ ಅದು ಸ್ವಚ್ಛವಾದುದೋ ಅಲ್ಲವೋ, ಅದರಲ್ಲಿನ ಸ್ವಚ್ಛತೆ ಎಷ್ಟೋ ನಿರ್ಧಾರಿಸಿ ನೋಡಿಕೊಳ್ಳುವನು. ಹಾಗೆಯೇ ದೇವರು ಜ್ಞಾನ ವಿಷಯಗಳಲ್ಲಿ ಸ್ವಚ್ಛತೆ ತಿಳಿದುಕೊಳ್ಳುವ ನಿಮಿತ್ತ ತನ್ನ ಗ್ರಂಥವನ್ನೇ ಒರೆಗಲ್ಲಾಗಿ ಕೊಟ್ಟಿದ್ದಾನೆ. ಯಾರೂ ಮೋಸಹೋಗದೇ ನಿರ್ಧಾರಿಸಿಕೊಳ್ಳುವುದಕ್ಕೆ, ತಿಳಿದುಕೊಳ್ಳುವುದಕ್ಕೆ ತನ್ನ ಗ್ರಂಥವನ್ನು ಕೊಟ್ಟು ತಾನೇ ಪ್ರಶ್ನಿಸಬೇಡವೆಂದು ಹೇಳುತ್ತಾನಾ? ಬಂಗಾರವನ್ನು ಕಣ್ಣಿನಿಂದ ನೋಡು ಕಲ್ಲಿನಿಂದ ಪರೀಕ್ಷಿಸಬೇಡವೆಂದು ಹೇಳುವನಾ? ದೇವರು ಹಾಗೆ ಎಲ್ಲೂ ಹೇಳಲಿಲ್ಲ. ಇತರರನ್ನು ಮೋಸ ಮಾಡಬೇಕೆಂದುಕೊಂಡವನು ತನ್ನ ಬಂಗಾರ ಸ್ವಚ್ಛವಾದುದೆಂದು, ಅದನ್ನು ಪರೀಕ್ಷಿಸಿ ನೋಡಬೇಡವೆಂದು ಹೇಳುವನು. ಹಾಗೆಯೇ ಕೆಲವರು ಬೋಧಕರಾಗಿರುವ ಮುಸ್ಲಿಮ್‌ರು ಇತರರನ್ನು ಪ್ರಶ್ನಿಸಬಾರದೆಂದು ನಿಯಮವನ್ನು ಇಟ್ಟು ಅಮಾಯಕರಾದ ಮುಸ್ಲಿಮ್‌ರನ್ನು ಎಷ್ಟೋ ಜನರನ್ನು ಅವರು ಹೇಳಿದ್ದನ್ನು ಕೇಳುವಂತೆ ಮಾಡಿಕೊಳ್ಳುತ್ತಿದ್ದಾರೆ. ಅವಶ್ಯವಾದರೇ ಪಕ್ಷಿ, ಪರ್ವತಗಳ ಕಥೆಯನ್ನು ಹೇಳಿ ದೇವರು ಕರೆದರೇ ಸತ್ತುಹೋಗಿರುವ ಪಕ್ಷಿ ಬಂದಿದೆ ಅಲ್ಲವೇ! ಎಂದು ನಂಬಿಸುತ್ತಿದ್ದಾರೆ.

ಇಂತಹ ಮೋಸಗಳು ಮಾಡುವುದರಲ್ಲಿ ಮಾನವನು ಎತ್ತಿದ ಕೈ ಎಂದು ತಿಳಿದಿರುವ ದೇವರು ಮೊದಲೇ ತನ್ನ ಕೊನೆಯ ಗ್ರಂಥದಲ್ಲಿ ಒರೆಗಲ್ಲನ್ನು ಕುರಿತು ಹೇಳಿದ್ದಾನೆ. "ದಿವ್ಯಖುರಾನ್ ಸಂದೇಶ" ಎಂಬ ಗ್ರಂಥದಲ್ಲಿ ಸೂರಾ 2, ಆಯತ್ 53ರಲ್ಲಿ (2–53) **"ಮತ್ತು (ಜ್ಞಾಪಕ ಮಾಡಿಕೊಳ್ಳಿ!) ನೀವು ಸನ್ಮಾರ್ಗದವರಾಗುತ್ತೀರೇನೋ ಎಂದು ನಾವು ಮೂಸಾಗೆ ಗ್ರಂಥವನ್ನು ಮತ್ತು (ಸತ್ಯಾಸತ್ಯಗಳನ್ನು ಬೇರೆ ಮಾಡುವ) ಒರೆಗಲ್ಲನ್ನು ಪ್ರಸಾದಿಸಿದ್ದೇವೆ"** ಎಂದು ಹೇಳಿದ್ದಾನೆ. ಅಷ್ಟೇಅಲ್ಲದೆ ಮತ್ತೊಂದು ಕಡೆ ಹೀಗಿದೆ (3–4) **"ಇದಕ್ಕು ಮೊದಲು ಪ್ರಜೆಗಳಿಗೆ ಸನ್ಮಾರ್ಗ ತೋರಿಸುವುದಕ್ಕೆ ಮತ್ತು (ಸತ್ಯಾಸತ್ಯಗಳನ್ನು ವಿಶದೀಕರಿಸುವ) ಈ ಒರೆಗಲ್ಲನ್ನು ಕೂಡಾ ಅವತರಿಸುವಂತೆ ಮಾಡಿದ್ದಾನೆ. ನಿಶ್ಚಯವಾಗಿ ಯಾರಾದರೇ ಅಲ್ಲಾಹ್ ಆಜ್ಞೆಗಳನ್ನು ತಿರಸ್ಕರಿಸುತ್ತಾರೋ ಅವರಿಗೆ ಕಠಿಣ ಶಿಕ್ಷೆ ಇರುತ್ತದೆ. ಮತ್ತು ಅಲ್ಲಾಹ್ (ದೇವರು) ಸರ್ವಶಕ್ತಿವಂತನು, ಪ್ರತೀಕಾರವನ್ನು ತೀರಿಸಿಕೊಳ್ಳುವವನು"** ಎಂದು ಇದೆ. ಅಷ್ಟೇ ಅಲ್ಲದೆ ಮತ್ತೊಂದುಕಡೆ ಹೀಗಿರುವುದು ನೋಡಿರಿ.

**(21–48) "ನಾವು ಮೂಸಾ ಮತ್ತು ಹಾರೂನರಿಗೆ ತೀರ್ಪುಗಳು ಮಾಡುವ ಒರೆಗಲ್ಲನ್ನು, ಜ್ಯೋತಿಯನ್ನು ಭಯಭಕ್ತಿ ಇರುವವರಿಗೆ ಹಿತೋಪದೇಶದಿಂದ ಕೂಡಿರುವ ಗ್ರಂಥವನ್ನು ಕೊಟ್ಟಿದ್ದೇವೆ"** ಎಂದು ಇದೆ. ಇನ್ನೂ **(25–1) ಸರ್ವಲೋಕಗಳಿಗೂ ಎಚ್ಚರಿಕೆ ಮಾಡುವುದಾಗಿ ಈ ಒರೆಗಲ್ಲನ್ನು ತನ್ನ ದಾಸನ ಮೇಲೆ ಹಂತ ಹಂತವಾಗಿ ಅವತರಿಸಿರುವಂತೆ ಮಾಡಿದ ಆತನು (ದೇವರು) ಎಷ್ಟೋ ಶುಭದಾಯಕನು"** ಎಂದು ಹೇಳಿದ್ದಾರೆ. ಈ ವಿಧವಾಗಿ ಇಷ್ಟು ವಾಕ್ಯಗಳಲ್ಲಿ ದೇವರು ತನ್ನ ಗ್ರಂಥರೂಪವಾಗಿ, ಜ್ಞಾನರೂಪವಾಗಿ ಕೊಟ್ಟಿರುವ ಒರೆಗಲ್ಲನ್ನು ಕುರಿತು ಹೇಳಿದ್ದಾನೆ. ದೇವರು ಕೊಟ್ಟ ಒರೆಗಲ್ಲನ್ನು ತಿಳಿಯದವನು ಯಾವುದು ಸತ್ಯವಾದ ಜ್ಞಾನವೋ, ಯಾವುದು ಅಸತ್ಯವಾದ ಜ್ಞಾನವೋ ತಿಳಿಯಲಾರನು. ಹಾಗಿರುವಾಗ ಜ್ಞಾನವಿಷಯದಲ್ಲಿ ಮೋಸಹೋಗುವ ಅವಕಾಶವಿದೆ. ಈಗ ದೇವರ ಸಂತಾನ ವಿಷಯದಲ್ಲಿ ಸಂದಿಗ್ಧತೆ ಬಂದಿದೆ. ಯಾವುದು ಸತ್ಯವೋ, ಯಾವುದು ಅಸತ್ಯವೋ ತಿಳಿಯದ ಪರಿಸ್ಥಿತಿ ಏರ್ಪಟ್ಟಿದೆ. ಸತ್ಯಾಸತ್ಯಗಳನ್ನು ನಿರ್ಧಾರಿಸಿ ಕೊಳ್ಳುವುದಕ್ಕೆ ಮೊದಲೇ ಮೂಸಾ ಪ್ರವಕ್ತಗೆ

**'ತೌರಾತ್ ಗ್ರಂಥ'** ವನ್ನು ಕೊಟ್ಟಿದ್ದೇನೆಂದು 2-53ರಲ್ಲಿ ಹೇಳಿದ್ದಾರೆ. ಅರಬ್ಬೀ ಭಾಷೆಯಲ್ಲಿ 'ತೌರಾ' ಎಂದರೇ ಮೂರು ಎಂದು ಅರ್ಥ. **'ತೌರಾತ್'** ಎಂದರೇ **'ಮೂರು ರಾತ್ರಿಗಳೆಂದು'** ಅರ್ಥ. **ತೌರಾತ್** ಎಂಬ ಹೆಸರಿನೊಂದಿಗೆ ಮೂರು ಆತ್ಮಗಳ ವಿವರಗಳಿರುವ **ಭಗವದ್ಗೀತೆ** ಗ್ರಂಥವನ್ನು ಕೊಡುವುದು ನಡೆದಿದೆ.

ಬಂಗಾರದ ವಿಷಯದಲ್ಲಿ ಒರೆಗಲ್ಲನ್ನು ಉಪಯೋಗಿಸಿದಂತೆಯೆ ಬಂಗಾರ ಹೋಲಿಕೆಯಿರುವ ದೇವರ ಜ್ಞಾನದಲ್ಲಿ ಇದು ನಿಜವಾದುದಾ! ಅಲ್ಲವಾ! ಎಂಬ ಅನುಮಾನ ಬಂದಿದೆ. ಆದ್ದರಿಂದ ಇಲ್ಲಿ ಒರೆಗಲ್ಲನ್ನು ಉಪಯೋಗಿಸಿ ಉತ್ತರವನ್ನು ನಿರ್ಣಯಿಸಿಕೊಳ್ಳಬೇಕಾಗಿದೆ. ಈಗ ಈ ವಿಷಯವು ಸುಲಭವಾಗಿ ಅರ್ಥವಾಗುವುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು ತೆಗೆದುಕೊಂಡು ನೋಡೋಣ. 20 ವರ್ಷಗಳ ವಯಸ್ಸಿರುವ ಒಬ್ಬ ಯುವಕನನ್ನು ನಿನಗೆ ಮಕ್ಕಳೆಷ್ಟುಜನ? ಎಂದು ಪ್ರಶ್ನಿಸಿದರೇ ಅಯ್ಯೋ! ನನಗೆ ಮದುವೇನೇ ಆಗಿಲ್ಲ, ಹೆಂಡತಿಯಿಲ್ಲದೆ ಮಕ್ಕಳು ಹೇಗೆ ಹುಟ್ಟಬಲ್ಲರು. ನನಗೆ ಸಂತಾನವಿಲ್ಲ ರೀ! ಎಂದು ಹೇಳಿದನು. ಆಗ ಆ ಯುವಕನು ಸೈಕಲ್ ಮೇಲೆ ಪ್ಲಾಸ್ಟಿಕ್ ಬಿಂದಿಗೆಗಳನ್ನು ಮಾರಿಕೊಂಡು ವ್ಯಾಪಾರ ಮಾಡಿಕೊಳ್ಳುತ್ತಿದ್ದನು. ಒಂದು ಬಿಂದಿಗೆಯನ್ನು ಕೊಂಡುಕೊಳ್ಳುವ ಸಮಯದಲ್ಲಿ ಬಿಂದಿಗೆ ರೇಟು ಕಡಿಮೆ ಮಾಡಿಕೊಯೆಂದು ಕೇಳುವುದಕ್ಕಾಗಿ ಮಾತಿನ ಪರಿಚಯ ಇರಬೇಕಲ್ಲವೇ! ಎಂದು ಬಿಂದಿಗೆಯನ್ನು ಕೊಂಡುಕೊಳ್ಳುವವನು ಆ ವಿಧವಾಗಿ ಮಾರುವವನನ್ನು ಕೇಳಿದನು. ನಂತರ ಐದು ವರ್ಷಗಳು ಕಳೆದಿವೆ. ಬಿಂದಿಗೆಗಳನ್ನು ಮಾರುವವನು ಮಾರುಕಟ್ಟೆಯಲ್ಲಿ ಒಂದು ಷಾಪ್ ಇಟ್ಟುಕೊಂಡು ಅದರಲ್ಲಿ ಸ್ಟೀಲ್ ಪಾತ್ರೆ ಸಾಮಾನುಗಳ ವ್ಯಾಪಾರ ಮಾಡುತ್ತಿದ್ದನು. ಆ ಸಮಯದಲ್ಲಿ ಐದು ವರ್ಷಗಳ ಕೆಳಗೆ ಬಿಂದಿಗೆಯನ್ನು ಕೊಂಡವನು, ಸ್ಟೀಲ್‌ಸಾವಾನುಗಳ ಅಂಗಡಿಗೆ ಬಂದು ಪೂರ್ವವು ಬಿಂದಿಗೆಯನ್ನು ಮಾರಿದವನನ್ನು ಗುರುತಿಸಿದನು. ಆಗ ಮಾತುಗಳ ಸಂದರ್ಭದಲ್ಲಿ ಬಿಂದಿಗೆಗಳ ವ್ಯಾಪಾರವನ್ನು ತೆಗೆದುಹಾಕಿ ಪಾತ್ರೆಗಳ ವ್ಯಾಪಾರವನ್ನು ದೊಡ್ಡದಾಗಿ ಇಟ್ಟಿದ್ದಿಯೇ! ಎಂದು ಕೇಳಿದನು. ಆಗ ಸ್ಟೀಲ್ ಪಾತ್ರೆಗಳ ವ್ಯಾಪಾರದವನು "ಮೂವರು ಮಕ್ಕಳಿದ್ದಾರೆ ಅವರ ವರದಕ್ಷಿಣೆಗಾಗಿ ಹಣ ಸಂಪಾದಿಸಬೇಕೆಂದರೇ

ಹೀಗೆ ವ್ಯಾಪಾರವನ್ನು ದೊಡ್ಡದಾಗಿ ಮಾಡಿಕೊಳ್ಳಬೇಕಾಗಿ ಬಂದಿದೆ” ಎಂದು ಹೇಳಿದನು. ಆಗ ಕೊಂಡುಕೊಳ್ಳಲು ಬಂದವನು “ಇದಕ್ಕು ಮೊದಲು ಮಕ್ಕಳೇ ಇಲ್ಲ ಎಂದು ಹೇಳಿದ್ದೆ, ಈಗೇನೋ ಮೂವರು ಮಕ್ಕಳು ಎಂದು ಸುಳ್ಳು ಹೇಳುತ್ತಿದ್ದೀಯಾ” ಎಂದು ಕೇಳಿದನು. ಆಗ ಇಲ್ಲ ಈಗ ಇದ್ದಾರೆಂದು ಅಂಗಡಿ ಯಜಮಾನ ಹೇಳಿದರೂ ಈತ ನಂಬಲಿಲ್ಲ. ಮೊದಲು ಹೇಳಿರುವ ಮಾತನ್ನೇ ಬಲವಾಗಿ ನಂಬಿದ್ದಾನೆ. ನಾನು ಐದು ವರ್ಷಗಳ ಹಿಂದೆ ಕೇಳಿದ್ದೆನು ಆಗ ಸಂತಾನವೇ ಇಲ್ಲ ಎಂದು ಹೇಳಿರುವವನು ಐದು ವರ್ಷಗಳಲ್ಲಿ ಮೂವರು ಮಕ್ಕಳಿಗೆ ಹೇಗೆ ತಂದೆ ಆಗಿರುವನೆಂಬ ಪ್ರಶ್ನೆ ಉಳಿದುಕೊಂಡಿದೆ. ನಂತರ ಆ ವಿಷಯದಲ್ಲಿನ ಸತ್ಯಾಸತ್ಯವನ್ನು ತಿಳಿಯುವ ನಿಮಿತ್ತ ಮಾರುವವನೊಂದಿಗೆ, ಕೊಂಡುಕೊಳ್ಳುವವನೊಂದಿಗೆ ಪರಿಚಯವಿರುವ ಒಬ್ಬ ವ್ಯಕ್ತಿ ಹತ್ತಿರಕ್ಕೆ ಹೋಗಿ ತನ್ನ ಸಂದಿಗ್ಧವನ್ನು ಕೇಳಿದನು.

“ಅಯ್ಯಾ! ನನಗೆ ಒಂದು ಅನುಮಾನ ಬಂದಿದೆ. ಐದು ವರ್ಷಗಳ ಕೆಳಗೆ ನಾನು ಒಬ್ಬ ವ್ಯಕ್ತಿಯನ್ನು ಆತನ ಸಂತತಿಯನ್ನು ಕುರಿತು ಕೇಳಿದ್ದೆನು. ಆಗ ಆತನು ನನಗೆ ಹೆಂಡತಿಯಿಲ್ಲ, ಸಂತಾನ ಹೇಗೆ ಆಗುತ್ತದೆ ಎಂದು ತಿರುಗಿ ಪ್ರಶ್ನಿಸಿ ನನಗೆ ಯಾರು ಹುಟ್ಟಲಿಲ್ಲ, ಯಾರೂ ಮಕ್ಕಳಿಲ್ಲ ಎಂದು ಹೇಳಿದ್ದಾನೆ ಈಗಲೂ ಸಹ ಅದೇ ಮನುಷ್ಯನನ್ನು ಸಂತಾನವನ್ನು ಕುರಿತು ಕೇಳಿದೆನು, ಮೂವರು ಮಕ್ಕಳೆಂದು ಹೇಳಿದನು. ನಂತರ ಹೆಂಡತಿ ಏನು ಮಾಡುತ್ತಾಳೆ ಎಂದು ಕೇಳಿದೆನು, ನನಗೆ ಹೆಂಡತಿಯಿಲ್ಲ ಎಂದು ಹೇಳಿದನು. ಆ ಮಾತು ಕೇಳಿದ ನನಗೆ ದೊಡ್ಡ ಸಂಶಯ ಬಂದಿದೆ ಆಗಲೂ ಹೆಂಡತಿಯಿಲ್ಲ, ಈಗಲೂ ಹೆಂಡತಿಯಿಲ್ಲ. ಆಗ ಸಂತಾನವಿಲ್ಲ. ಆದರೇ ಈಗ ಸಂತಾನವಿದೆ ಎನ್ನುತ್ತಿದ್ದಾನೆ. ಆತನ ಮಾತುಗಳನ್ನು ಹೇಗೆ ನಂಬಬೇಕು?” ಎಂದು ಕೇಳಿದನು. ಈಗ ಮೂರನೆಯ ವ್ಯಕ್ತಿಯನ್ನು ಎರಡನೆಯ ವ್ಯಕ್ತಿ ಒರೆಗಲ್ಲಿನ ಹಾಗೆ ಉಪಯೋಗಿಸಿ ಕೊಂಡಿದ್ದಾನೆ. ಸತ್ಯಾಸತ್ಯಗಳನ್ನು ನಿರ್ಧಾರಿಸಿ ಹೇಳುವುದು ಒರೆಗಲ್ಲೇ, ಆದಕಾರಣ ಮೂರನೆಯ ವ್ಯಕ್ತಿ ಹೀಗೆ ಹೇಳಿದನು. “ಆತನಿಗೆ ಹೆಂಡತಿ ಮೊದಲು ಇಲ್ಲ ಈಗಲು ಇಲ್ಲ. ಆದರೇ ಮಧ್ಯದಲ್ಲಿ ಇರಬಹುದು ಅಲ್ಲವೇ! ನೀನು ಕೇಳಿದಾಗ

ಮದುವೆ ಆಗಿಲ್ಲ, ಹೆಂಡತಿ ಇಲ್ಲ. ಈಗ ಕೇಳಿದಾಗ ಮಕ್ಕಳಿದ್ದಾರೆ ಹೆಂಡತಿ ಇಲ್ಲ. ಆದರೇ ಮೂವರು ಮಕ್ಕಳು ಹುಟ್ಟಿದ ಕೂಡಲೇ ಹೆಂಡತಿ ಸತ್ತುಹೋಗಿರಬಹುದಲ್ಲವೇ! ಆ ಆಲೋಚನೆ ನಿನಗೆ ಯಾಕೆ ಬರಲಿಲಲ್ಲ. ಆತನು ಹೇಳಿರುವುದರಲ್ಲಿ ಸತ್ಯವಿದೆ ಆದರೇ ನೀನು ಕೇಳಿಸಿಕೊಂಡಿರುವುದರಲ್ಲಿ ಅನುಮಾನವಿದೆ. ನನಗೆ ತಿಳಿದಿರುವ ವಾಸ್ತವದ ಪ್ರಕಾರ ಆತನಿಗೆ ಹೆಂಡತಿ ಇದ್ದರೂ, ಈಗ ಆಕೆ ಆತನಿಗೆ ಬಹಳ ದೂರವಾಗಿದ್ದಾಳೆ. ಅಷ್ಟೇ ಅಲ್ಲದೇ ಈತನ ಮೇಲೆ (ಗಂಡನ ಮೇಲೆ) ಆಧಾರಪಡದೆ ಸ್ವಂತವಾಗಿ ಬದುಕುತ್ತಿದ್ದಾಳೆ. ಆಕೆ ಗಂಡನನ್ನು ಬಿಟ್ಟು ದೂರವಾಗಿ ಇರುವುದರಿಂದ ಈತ ತನಗೆ ಹೆಂಡತಿ ಇಲ್ಲವೆಂದು" ಹೇಳುತ್ತಿದ್ದಾನೆ. ವಿವರ ತಿಳಿಯದೆ ಹೋದರೇ ಹೆಂಡತಿ ಇಲ್ಲದೆ ಐದು ವರ್ಷಗಳಲ್ಲಿ ಮೂವರು ಮಕ್ಕಳು ಹೇಗೆ ಹುಟ್ಟಬಲ್ಲರೆಂದು ಪ್ರಶ್ನೆಬರಬಹುದು.

ಇಲ್ಲಿ ಪಾತ್ರೆಗಳ ವ್ಯಾಪಾರಿ ಎರಡು ಸಲ ಸತ್ಯವೇ ಹೇಳಿದ್ದಾನೆ. ಆದರೇ ಆ ವಿಷಯವನ್ನು ಮತ್ತೊಬ್ಬನು ಅನುಮಾನದಿಂದ ಮತ್ತು ತಿಳುವಳಿಕೆ ಇಲ್ಲದೆ ನಂಬಲಾರದೇ ಹೋದನು. ಹಾಗೆಯೇ ದೇವರ ವಿಷಯದಲ್ಲಿ ಕೂಡಾ ನಡೆದಿದೆ. ದೇವರು ಒಂದು ಸಲ ಸಂತಾನವಿಲ್ಲ ಎಂದೂ ಮತ್ತೊಂದು ಸಲ ಸಂತಾನವಿದೆಯೆಂದು ದೇವರು ಹೇಳಿದರೇ ನಾವು ಸಹ ನಂಬಲಾರದೆ ಹೋಗಿದ್ದೇವೆ. ದೇವರು ಮೊದಲು ಹೇಳಿರುವ ಮಾತೇ ನಿಜವೆಂದು ಆತನಿಗೆ ಸಂತಾನವಿಲ್ಲವೆಂದು ಮುಸ್ಲಿಮ್‌ರು ಅನ್ನುತ್ತಿರುವಾಗ, ಇಲ್ಲ ಆತನಿಗೆ ಸಂತಾನವಿದೆ. ನಾವೆಲ್ಲಾ ಆತನ ಸಂತಾನವೆ ಅಲ್ಲವೇ! ಎಂದು ಹಿಂದೂಗಳು ಅನ್ನುತ್ತಿದ್ದಾರೆ. ಕೆಲವರೇನೋ ಎರಡೂ ಸತ್ಯವೇಯೆಂದು ಹೇಳುತ್ತಿದ್ದಾರೆ. ಕೆಲವರೇನೊ ಎರಡೂ ಅಸತ್ಯವೇ ಎಂದು ಅನ್ನುತ್ತಿದ್ದಾರೆ. ಈ ವಿಧವಾಗಿ ಯಾವಕಡೆಯು ನಿರ್ಣಯಿಸಲಾರದ ಪರಿಸ್ಥಿತಿ ಈದಿನ ಮನುಷ್ಯರಲ್ಲಿ ಇದೆ. ಈ ಸಮಸ್ಯೆಯನ್ನು ನಿರ್ಧಾರಿಸಿ ಹೇಳುವುದಕ್ಕೆ, ಯಾವುದು ನಿಜವೋ ಯಾವುದು ಸುಳ್ಳೋ ನಿರ್ಣಯ ಮಾಡಿ ಹೇಳುವುದಕ್ಕೆ ಒರೆಗಲ್ಲು ಅವಶ್ಯ. ಒರೆಗಲ್ಲು ಎನ್ನುವುದು ತಾನು ಮೊದಲು ಕೊಟ್ಟಿರುವ ತೌರಾತ್ ಗ್ರಂಥವೇಯೆಂದು ದೇವರು ಖುರಾನ್ ಗ್ರಂಥದಲ್ಲಿ

ಸೂರಾ 2, ಆಯತ್ 53 ರಲ್ಲಿ ಹೇಳಿರುವುದಾಗಿದೆ. ದೇವರು ಕೊಟ್ಟ ಒರೆಗಲ್ಲನ್ನು ಉಪಯೋಗಿಸಿಕೊಂಡು ಇದರಲ್ಲಿನ ಸತ್ಯವನ್ನು ನಾವು ತಿಳಿಯಬಹುದು.

ದೇವರು ಅಂತಿಮ ದೈವ ಗ್ರಂಥವಾದ ಖುರಾನ್‌ನಲ್ಲಿ 112ನೆ ಸೂರಾದಲ್ಲಿ 3ನೆ ಆಯತ್‌ನಲ್ಲಿ 'ನನಗೆ ಸಂತಾನವಿಲ್ಲ' ಎಂದು ಹೇಳಿದ್ದಾನೆ. ಅಷ್ಟೇಅಲ್ಲದೆ 6ನೆ ಸೂರಾದಲ್ಲಿ 101ನೆ ಆಯತ್‌ನಲ್ಲಿ ಹೀಗೆ ಹೇಳಿದ್ದಾನೆ. (6–101) **"ಆಕಾಶವನ್ನು ಭೂಮಿಯನ್ನು ತಯಾರು ಮಾಡಿದವನು ಆತನೇ. ದೇವರಿಗೆ ಹೆಂಡತಿಯೇ ಇಲ್ಲದಿರುವಾಗ ಆತನಿಗೆ ಸಂತಾನ ಹೇಗೆ ಆಗುತ್ತದೆ? ಆತನು ಪ್ರತಿ ವಸ್ತುವನ್ನು ಸೃಷ್ಠಿಸಿದ್ದಾನೆ. ಪ್ರತಿ ಜೀವರಾಶಿಯನ್ನು ಸೃಷ್ಠಿಸಿದ್ದಾನೆ. ಆತನಿಗೆ ಪ್ರತಿಯೊಂದು ಚೆನ್ನಾಗಿ ತಿಳಿದಿದೆ"** ಎಂದು ಇದೆ. ಒರೆಗಲ್ಲಿನ ಪ್ರಕಾರ ದೇವರು ಸೃಷ್ಠಿಗೆ ಪೂರ್ವ 112ನೇ ಸೂರಾದಲ್ಲಿ ಹೇಳಿದಂತೆ ಸಂತಾನ ಇಲ್ಲದವನಾಗಿ ಇದ್ದಾನೆ. ಸ್ಥಿರಾಸ್ಥಿರನಾಗಿರುವಾಗ ಆತನು ಯಾವುದನ್ನು ಸೃಷ್ಠಿಸಲಿಲ್ಲ. ಆದ್ದರಿಂದ ಆತನು ಯಾವುದಕ್ಕೂ ತಂದೆ ಅಲ್ಲ, ಆತನು ತಂದೆ ಆಗದಿರುವಾಗ ಆತನಿಗೆ ಸಂತಾನ ಇಲ್ಲದಹಾಗೆಯೇ ಅಲ್ಲವೇ! ಆಗ ಪ್ರಕೃತಿಯೇ ಇಲ್ಲ. ಅಲ್ಲಿಗೆ ಆ ಮಾತು ಸತ್ಯ ಪ್ರಕೃತಿ ದೇವರಿಗೆ ಪತ್ನಿಯಾಗಿ ಇರುವುದರಿಂದ ಸೃಷ್ಠಿಗೆ ಪೂರ್ವದಲ್ಲಿ ಪ್ರಕೃತಿ ಇಲ್ಲದಿರುವುದರಿಂದ ಆತನಿಗೆ ಆಗ ಪತ್ನಿ ಇಲ್ಲ. ಪತ್ನಿಯೇ ಇಲ್ಲದಿರುವಾಗ ಸಂತಾನ ಹೇಗೆ ಉಂಟಾಗುತ್ತದೆ? ಪ್ರಕೃತಿ ಇರುವಾಗಲೇ ಜೀವರಾಶಿಗಳ ಶರೀರಗಳು ತಯಾರಾಗುತ್ತಿವೆ. ಪ್ರಕೃತಿ ಇರುವಾಗ ಜೀವರಾಶಿಗಳು ಹುಟ್ಟುವುದಕ್ಕೆ ಅವಕಾಶವಿದೆ. ಆದ್ದರಿಂದ ಹೆಂಡತಿಯೇ ಇಲ್ಲದಿರುವಾಗ ಸಂತಾನ ಹೇಗೆ ಉಂಟಾಗುತ್ತದೆ ಎಂದು (6–101) ರಲ್ಲಿ ಹೇಳಿರುವುದಾಗಿದೆ. ಇಲ್ಲಿಗೆ ಈ ಮಾತು ಸತ್ಯವೇ! ಆದರೇ ಅದೇ ದೇವರೇ ಕೆಲವು ಸಂದರ್ಭಗಳಲ್ಲಿ **'ತಂದೆಯಾದ ನಾನು'** ಎಂದೂ, **'ಸಕಲ ಜೀವಿಗಳಿಗೆ ನಾನೇ ತಂದೆ'** ಎಂದೂ ಹೇಳುವುದು ನಡೆದಿದೆ. ಸೃಷ್ಠಿ ನಡೆದ ನಂತರ ಪ್ರಕೃತಿ ಏರ್ಪಟ್ಟು ಪ್ರಕೃತಿಗೆ ದೈವ ಬೀಜದಿಂದ ಅನೇಕ ಜೀವರಾಶಿಗಳು ಹುಟ್ಟುವುದು ನಡೆದಿದೆ. ಆಗ ಆತನು ಸರ್ವ ಜೀವರಾಶಿಗಳಿಗೆ ತಂದೆಯೆಂದು ಹೇಳುವುದು ಸತ್ಯವಾದುದು. ಇಲ್ಲಿ ಸೃಷ್ಠಿ ನಂತರ ಆತನಿಗೆ ಹೆಂಡತಿಇದ್ದಾಳೆ. ಸಂತಾನವಿದೆ. "ಪಿತಾಹಮಸ್ಯ ಜಗತೋ"

ಎಂಬ ಭಗವದ್ಗೀತೆ ವಾಕ್ಯದ ಪ್ರಕಾರ 'ಎಲ್ಲರಿಗೂ ತಂದೆ' ಎಂಬ ಮಾತು ಸತ್ಯ. ಒಂದೇ ಸಮಯದಲ್ಲಿ ಎರಡು ಮಾತುಗಳು ಸತ್ಯವಾಗುವುದಿಲ್ಲ. ಬೇರೆಬೇರೆ ಸಂದರ್ಭಗಳಲ್ಲಿ ಸಂತಾನವಿಲ್ಲ, ಸಂತಾನವಿದೆ ಎಂಬ ಎರಡು ವಿಧಗಳ ಮಾತುಗಳು ಪರಸ್ಪರ ವಿರುದ್ಧವಾಗಿದ್ದರೂ ಸತ್ಯವೇ ಆಗಿವೆ.

ಇದನ್ನನುಸರಿಸಿ ಸೃಷ್ಠಿಗೆ ಪೂರ್ವವಿರುವವನೇ ಸೃಷ್ಠಿ ನಂತರ ಕೂಡಾ ಇದ್ದರೂ ಆಗ ಮದುವೆ ಆಗದವನು, ಈಗ ಮದುವೆ ಆಗಿರುವವನಾಗಿ ಗುರುತಿಸಬೇಕು. ಸೃಷ್ಠಿಗೆ ಪೂರ್ವದಲ್ಲಿ ಸ್ಥಿರಾಸ್ಥಿರನಾಗಿರುವ ದೇವರು ಸೃಷ್ಠಿ ನಂತರ ಸ್ಥಿರನಾಗಿದ್ದಾನೆ. ಸೃಷ್ಠಿಗೆ ಮೊದಲಿರುವ ದೇವರನ್ನು ಸೃಷ್ಠಿಗೆ ನಂತರವಿರುವ ದೇವರನ್ನು ವಿವರವಾಗಿ ತಿಳಿದುಕೊಂಡರೇ ಒರೆಗಲ್ಲಿನ ಮೂಲಕ ಸತ್ಯಾಸತ್ಯಗಳನ್ನು ತಿಳಿದಂತಾಗುವುದು. ದೇವರು ಮೊದಲೇ ತನ್ನ ಮೊದಲ ದೈವ ಗ್ರಂಥ ಭಗವದ್ಗೀತೆಯನ್ನು ಕೊಟ್ಟು ಅದರಲ್ಲಿ ಜ್ಞಾನವನ್ನು ಒರೆಗಲ್ಲಿನ ಹಾಗೆ ಮಾಡಿ ಕೊಟ್ಟಿದ್ದಾನೆ. ಪುರುಷರು ಮೂವರೆಂದು ಸೃಷ್ಠಿ ನಂತರ ಹೇಳಿಕೊಂಡರೂ, ಸೃಷ್ಠಿಗೆ ಪೂರ್ವದಲ್ಲಿ ಒಂದೇ ಪುರುಷನು ಇರುತ್ತಿದ್ದನು. ಸೃಷ್ಠಿಗೆ ಪೂರ್ವದಲ್ಲಿ ವಿಭಜಿಸಲ್ಪಡದ ಪುರುಷನು ಇರುತ್ತಿದ್ದನು. ಸೃಷ್ಠಿಗೆ ಪೂರ್ವದಲ್ಲಿ ಇರುವವನನ್ನು ಪುರುಷನೆಂದು ಸಹ ಹೇಳಲಾರೆವು. ಆದ್ದರಿಂದ ಮೊದಲೇ ಯಾವ ನಿರ್ಣಯವೂ ಮಾಡಲಾರದ ವಿಧದಲ್ಲಿ ಇರುತ್ತದೆಂದು ಒಂದು ಮಾತನ್ನು ಹೇಳಿದ್ದೇವೆ. ಸೃಷ್ಠಿಗೆ ಮೊದಲಿರುವ ದೇವರನ್ನು ದೇವರೆಂದು ಕೂಡಾ ಹೇಳುವುದಕ್ಕೆ ಆಧಾರವಾಗಲೀ, ಅವಕಾಶವಾಗಲೀ ಇಲ್ಲ. ಆದ್ದರಿಂದ ಆಗಿರುವವನನ್ನು **"ಸ್ಥಿರಾಸ್ಥಿರನು"** ಎಂದಿದ್ದೇವೆ. ಸ್ಥಿರನು ಅಸ್ಥಿರನು ಎಂಬ ಎರಡು ಮಾತುಗಳಲ್ಲಿ ನಿಜವನ್ನು ಸುಳ್ಳನ್ನು, ತಪ್ಪನ್ನು ಒಪ್ಪನ್ನು, ಒಳ್ಳೆಯದನ್ನು ಕೆಟ್ಟದನ್ನು ಎರಡನ್ನೂ ಸೇರಿಸಿಹೇಳಿದಂತೆ ಇದೆ. ಅಂಥವನನ್ನು ಏನೆಂದು ನಿರ್ಣಯಿಸಿ ಹೇಳುವುದಕ್ಕೆ ಸಾಧ್ಯವಿಲ್ಲ.

ಸೃಷ್ಠಿಗೆ ಪೂರ್ವ ಏನೂ ಆಗದವನು, ಸೃಷ್ಠಿ ನಂತರ ಪುರುಷನಾಗಿ ಹೇಳಲ್ಪಟ್ಟಿದ್ದಾನೆ. ತನ್ನನ್ನು ತಾನು ಪುರುಷನಾಗಿ ಪ್ರಕಟಿಸಿಕೊಂಡಿದ್ದಾನೆ. ಹಾಗೆ

ಪ್ರಕಟಿಸಿಕೊಂಡ ನಂತರ ತಾನು ಮೂರಾಗಿ ವಿಭಜಿಸಲ್ಪಟ್ಟು ಸರ್ವಜೀವಿಗಳಲ್ಲಿ ಇರುವಂತೆ ತನ್ನ ಮೂರು ಗ್ರಂಥಗಳಲ್ಲಿ ಹೇಳಿದ್ದಾನೆ. ಮೂವರು ಪುರುಷರಿಗೆ ವಿವರ ಕೊಡುತ್ತಾ ಮೊದಲ ಇಬ್ಬರು ಪುರುಷರನ್ನು ದೇವರು ಎಂದು ಹೇಳುವುದಕ್ಕೆ ಸಾಧ್ಯವಿದೆಯೆಂದು ತಿಳಿಸಿದ್ದಾನೆ. ಮೂರನೆಯ ಪುರುಷನು ಜೀವಿಯಾಗಿ ಹೇಳಲ್ಪಟ್ಟಿದ್ದಾನೆ. ಈ ಪುರುಷರ ವಿಷಯವು ಮೂರು ಮತಗಳು ಅನುಸರಿಸುವ ಮೂರು ಗ್ರಂಥಗಳಲ್ಲಿದ್ದರೂ ಮೂರು ಮತಗಳಲ್ಲಿ ಯಾವ ಒಂದು ಮತದವರಿಗೂ ಮೂವರು ಪುರುಷರ ವಿಷಯ ತಿಳಿಯಲಿಲ್ಲ. ಈ ದಿನ ನಾವು ಪ್ರತ್ಯೇಕಿಸಿ ಮೂವರು ಪುರುಷರ ವಿಷಯಗಳು ಹೇಳುತ್ತಿದ್ದಾಗ ಕೆಲವರು ಆಶ್ಚರ್ಯವಾಗಿ ನೋಡುತ್ತಿದ್ದರೇ, ಕೆಲವರು ಅಸೂಯೆಯಿಂದ ನೋಡುತ್ತಿದ್ದಾರೆ. ನಮಗೆ ತಿಳಿಯದ ಜ್ಞಾನವು ನಿನಗೆ ತಿಳಿದಿದೆಯಾ? ಎಂದು ಪ್ರಶ್ನಿಸುತ್ತಿದ್ದಾರೆ. ನಿಮಗೆ ತಿಳಿಯದೆಂದೇ ಅಲ್ಲವೇ ನಾನು ಹೇಳುತ್ತಿರುವುದೆಂದರೇ! ವಿಚಿತ್ರವಾಗಿ ನೋಡುತ್ತಿದ್ದಾರೆ.

ಮೂವರು ಪುರುಷರ ವಿವರವು ತಿಳಿಯದೆ ಹೋಗಿರುವುದರಿಂದ, ಮೂರು ಮತಗಳವರು ಯಾರಿಗೆ ತಿಳಿದಿರುವುದನ್ನು ಅವರು ಅದೇ ದೊಡ್ಡದೆಂದು ಹೇಳುತ್ತಿದ್ದಾರೆ. ಮೂವರು ಮೂರು ವಿಧಗಳಲ್ಲಿ ವಾದಿಸುತ್ತಿದ್ದಾರೆ. ಒಬ್ಬರು ಹೇಳುವುದು ಮತ್ತೊಬ್ಬರು ಒಪ್ಪಿಕೊಳ್ಳುತ್ತಿಲ್ಲ. ಹಿಂದೂಗಳು ವಿಗ್ರಹಾರಾಧನೆಯನ್ನು ಹೆಚ್ಚಾಗಿ ಅನುಸರಿಸಿದರೇ, ಮುಸ್ಲಿಮ್‌ರು ವಿಗ್ರಹಾರಾಧನೆಯನ್ನು ಪೂರ್ತಿಯಾಗಿ ಖಂಡಿಸುತ್ತಿದ್ದಾರೆ. ಕ್ರೈಸ್ತರು ಯಾವ ಕಡೆಯೂ ಅಲ್ಲದೇ ಮಧ್ಯದಲ್ಲಿದ್ದಾರೆ. ಹಿಂದೂಗಳ ವಿಗ್ರಹಾರಾಧನೆಯನ್ನು ಕ್ರೈಸ್ತರು ಕೂಡಾ ಖಂಡಿಸುವರು. ಆದರೇ ಮುಸ್ಲಿಮ್‌ರು ಹೇಳಿದಂತೆ 'ದೇವರು ಹುಟ್ಟುವುದಿಲ್ಲ' ಎಂಬ ಮಾತನ್ನು ಪಕ್ಕಕ್ಕಿಟ್ಟು ದೇವರು ಹುಟ್ಟುವನೆಂದೇ ಹೇಳುತ್ತಾರೆ. ಹೀಗೆ ಪ್ರತೀ ವಿಷಯದಲ್ಲೂ ಯಾರ ವಾದನೆಯನ್ನು ಅವರು ಜೋರಾಗಿ ಹೇಳುತ್ತಿದ್ದಾರೆ. ಇವರೆಲ್ಲರಿಗೂ ಒರೆಗಲ್ಲು ಅವಶ್ಯವೆಂದು ನಮಗೆ ಅರ್ಥವಾದರೂ, ಅವರು ನಾವೇ ಒರೆಗಲ್ಲಿನಂತೆ ಇದ್ದೇವೆಂದು ಹೇಳುತ್ತಿದ್ದಾರೆ. ದೇವರೇ ಇಳಿದುಬಂದು ಇದು ಸತ್ಯ, ಇದು ಅಸತ್ಯವೆಂದು ನಿರ್ಣಯಿಸಿ ಹೇಳಿದರೂ ಅದರಲ್ಲಿನ ವಾಸ್ತವವನ್ನು ಗ್ರಹಿಸದೆ ನಮಗೆ ತಿಳಿದಿರುವುದೇ ಸತ್ಯವೆಂದು, ನಿನಗಿಂತಲೂ ನಮಗೇ ಚೆನ್ನಾಗಿ ತಿಳಿದಿದೆ

ಎಂದು ವಾದಿಸುತ್ತಿದ್ದಾರೆ. ಅವರವರ ಮತ ಆಚರಣೆಗಳ ಮುಂದೆ, ಅವರವರ ಮತಹಿರಿಯರು ಹೇಳಿರುವ ಮತನಿಯಮಗಳ, ಮತ ಧರ್ಮಗಳ ಮುಂದೆ ದೇವರ ಮಾತು ಕೂಡಾ ತೆಗೆದುಹಾಕಲಾಗುತ್ತಿದೆ. ಈ ವಿಧವಾಗಿ ಮೂವರು ಪುರುಷರ ವಿಷಯವನ್ನು ಬಿಟ್ಟು ಎಲ್ಲ ಮತದವರು ಪಕ್ಕದಾರಿಯಲ್ಲಿ ಹೋಗುತ್ತಾ ದೇವರಿಗೆ ದೂರವಾಗುತ್ತಿದ್ದಾರೆ. ದೇವರಿಗೆ ನಾವೇ ಹತ್ತಿರವಾಗಿದ್ದೇವೆಂದೂ, ನಮ್ಮ ಜ್ಞಾನವೇ ನಿಜವಾದ ದೇವರ ಜ್ಞಾನವೆಂದೂ, ನಮ್ಮ ಮಾರ್ಗವೇ ಎಲ್ಲಾ ಮತಗಳಿಗಿಂತಲೂ ಮೀರಿದ ಮಾರ್ಗವೆಂದು ತಿಳಿದು ನಾವು ದೇವರ ಕಡೆ ಹೋಗುತ್ತಿದ್ದೇವೆಂದು ಅಂದುಕೊಳ್ಳುವವರೆಲ್ಲರೂ ಅವರಿಗೆ ತಿಳಿಯದೇನೆ ದೇವರಿಗೆ ದೂರವಾಗುತ್ತಿದ್ದಾರೆ. ಇದೆಲ್ಲದಕ್ಕೂ ಕಾರಣ ಮೂರು ದೈವಗ್ರಂಥಗಳಲ್ಲಿರುವ ಮೂವರು ಪುರುಷರನ್ನು ತಿಳಿಯದೆ ಹೋಗಿರುವುದೆಂದು ಹೇಳಬಹುದು. ಕೇಳುವುದು ಅರ್ಥವಾಗದೇ ಹೋದರೇ ಅದನ್ನು ಪುನಃ ಕೇಳಿ ತಿಳಿದುಕೊಳ್ಳಬಹುದು. ಹಾಗಲ್ಲದೆ ಕೇಳಿರುವುದನ್ನು ಗ್ರಂಥ ಆಧಾರವಿಲ್ಲದೇ ಖಂಡಿಸಬಾರದು. ಕೇಳಿರುವುದನ್ನು ಆಲೋಚಿಸಿ ಸತ್ಯವೋ ಅಲ್ಲವೋ ನಿರ್ಣಯಿಸಿಕೊಳ್ಳಬಹುದು. ಸತ್ಯವಾದರೇ ಸ್ವೀಕರಿಸಬೇಕು. ಅಸತ್ಯವಾದರೇ ಬಿಡಬಹುದು. ಹಾಗಲ್ಲದೇ ಮೊಂಡರಂತೆ ಯಾವುದನ್ನೂ ಅಲ್ಲವೆನ್ನಬಾರದು. ಈಗ ಜ್ಞಾನಜಿಜ್ಞಾಸೆ ಇರುವವರು ಈ ವಿಧವಾಗಿ ಪ್ರಶ್ನಿಸುತ್ತಿದ್ದಾರೆ.

**ಅವರ ಪ್ರಶ್ನೆ:– ನಾವು ಕೆಲವು ವರ್ಷಗಳಿಂದ ನಮಗೆ ತಿಳಿದಿರುವ ಜ್ಞಾನಕ್ಕೆ ಅಭ್ಯಾಸವಾಗಿದ್ದೇವೆ, ನಮ್ಮ ಸಮಾಜದಲ್ಲಿ ನಾವು ದೊಡ್ಡ ಬೋಧಕರಾಗಿ ಹೆಸರು ಪಡೆದಿದ್ದೇವೆ. ನಾವು ಹೇಳಿರುವುದನ್ನೆಲ್ಲಾ ಕೇಳಿರುವವರು ಎಷ್ಟೋ ಜನರು ನಮ್ಮನ್ನು ಅನುಸರಿಸುತ್ತಿದ್ದಾರೆ. ಈದಿನ ಇದ್ದಕ್ಕಿದ್ದಹಾಗೆ ನೀವು ಹೊಸದಾಗಿ ಮೂವರು ಪುರುಷರ ಸಿದ್ಧಾಂತವನ್ನು ಹೊರಗಿಟ್ಟು ಅದನ್ನು ದೇವರು ಹೇಳಿರುವ ಮುಖ್ಯವಾದ ಜ್ಞಾನವೆಂದು ಹೇಳುತ್ತಿದ್ದೀರ. ನಮಗೆ ಇಲ್ಲಿಯವರೆಗು ಒಬ್ಬ ಪುರುಷನ ಜ್ಞಾನವೇ ತಿಳಿದಿಲ್ಲ. ಮೂವರು ಪುರುಷರ ಜ್ಞಾನ ಸ್ವಲ್ಪವೂ ತಿಳಿದಿಲ್ಲ. ನೀವೇನೋ ಇದೇ ಮೂರು ದೈವಗ್ರಂಥಗಳಲ್ಲಿರುವ ಮುಖ್ಯವಾದ ಜ್ಞಾನವೆನ್ನುತ್ತಿದ್ದೀರ. ಅಷ್ಟೇ ಅಲ್ಲದೇ ಮೂವರು ಪುರುಷರ ಜ್ಞಾನವು ತಿಳಿಯದೇ ಹೋದರೇ ವಾಸ್ತವವಾಗಿ ದೇವರ**

**ಮಾರ್ಗದಲ್ಲಿ ಇಲ್ಲದಂತೆಯೆ ಎಂದು ಹೇಳುತ್ತಿದ್ದೀರ. ದೇವರು ಇಳಿದು ಬಂದರೂ ಇದೇ ನಿಜವಾದ ಜ್ಞಾನವೆಂದು ಹೇಳುತ್ತಾನೆನ್ನುತ್ತೀರ. ನೀವು ಹೇಳುವ ಪ್ರಕಾರವಾದರೇ ಇಲ್ಲಿಯವರೆಗು ನಾವು ತಿಳಿದುಕೊಂಡಿರುವುದನ್ನು ಪೂರ್ತಿಯಾಗಿ ಬಿಟ್ಟುಹಾಕಬೇಕಾಗಿ ಬರುತ್ತದೆ. ನಮ್ಮ ಸಮಾಜದಲ್ಲಿ ಎಷ್ಟೋ ದೊಡ್ಡ ಹೆಸರಿರುವ ನಾವು ನಮ್ಮ ಹೆಸರನ್ನು ಗೌರವವನ್ನು ಬಿಟ್ಟು ನೀವು ಹೇಳುವ ಜ್ಞಾನದೊಳಗೆ ಬರಬೇಕೆಂದರೇ ಎಷ್ಟೋ ನೋವಾಗಿದೆ. ಈಗ ನಾವು ನಿಮ್ಮ ಜ್ಞಾನವನ್ನು ಸಮರ್ಥಿಸಿದರೇ, ಇಲ್ಲಿಯವರೆಗು ನಮ್ಮಬಳಿ ಜ್ಞಾನವನ್ನು ಕಲಿತಿರುವವರು ಎಲ್ಲಿಗೆ ಹೋಗಬೇಕು? ನೀವು ನಮಗೆ ದೊಡ್ಡ ಪರೀಕ್ಷೆ ಇಟ್ಟಂತಿದೆ. ಈಗ ನಾವು ಏನು ಮಾಡಬೇಕು. ?**

**ನಮ್ಮ ಪ್ರಶ್ನೆ:– ನಿಮಗೆ ನಿಮ್ಮ ಮತ ಜ್ಞಾನ ಬೇಕಾ? ದೇವರ ಜ್ಞಾನ ಬೇಕಾ? ನಿಮಗೆ ನಿಮ್ಮ ಮತ ಧರ್ಮವು ಬೇಕಾ? ದೇವರ ಧರ್ಮವು ಬೇಕಾ?**

**ಅವರ ಉತ್ತರ:–** ನನಗೆ ಮತಕ್ಕಿಂತಲೂ ದೇವರೇ ಮುಖ್ಯ. ನನಗೆ ದೇವರ ಜ್ಞಾನ ಬೇಕೇ ಹೊರತು ಇಲ್ಲಿಯವರೆಗು ನನ್ನ ಬೋಧನೆಗಳು ಕೇಳಿರುವವರು ಮತ ಸಂಪ್ರದಾಯಗಳಲ್ಲಿ ಪೂರ್ತಿಯಾಗಿ ಸಿಲುಕಿಕೊಂಡು ಹೋಗಿದ್ದಾರೆ. ಅವರಿಗೆ ಎಷ್ಟು ಹೇಳಿದರೂ ಅವರು ಹೊಸ ಜ್ಞಾನದಕಡೆ ಬರುವುದಿಲ್ಲ. ಅವರಿಗೆ ದೇವರ ಜ್ಞಾನ ಯಾವುದೋ? ಮತ ಜ್ಞಾನ ಯಾವುದೋ? ತಿಳಿದಿಲ್ಲ. ಆದ್ದರಿಂದ ಅವರಿಗೆ ತಿಳಿದಿರುವ ಜ್ಞಾನವೇ ದೊಡ್ಡದೆಂದು ನಂಬಿ, ಮತ ಸಂಪ್ರದಾಯಗಳೊಂದಿಗೆ ಕೂಡಿರುವ ಜ್ಞಾನವನ್ನು ಬಿಟ್ಟು ಬರುವುದಿಲ್ಲ. ಈಗ ನಾನು ಅವರನ್ನು ಬಿಟ್ಟು ಬರಕಾಗಿದ್ದೇ! ಎಂದು ಹೇಳಿದರೂ, ಹಾಗೆ ಬಂದರೇ ನಮ್ಮ ಸಮಾಜದವರಿಗೆಲ್ಲರಿಗೂ ವಿರುದ್ಧವಾಗಿ ಕಾಣಿಸುವೆನೇನೋ ಎಂದು ಅಂದುಕೊಳ್ಳುತ್ತಿದ್ದೇನೆ.

**ನಮ್ಮ ಪ್ರಶ್ನೆ:– ಮತ ಮಧ್ಯದಲ್ಲಿ ಬಂದಿದೆ, ದೇವರು ಮೊದಲಿನಿಂದಲೂ ಇರುವವನು. ನಿನ್ನನ್ನು ಹುಟ್ಟಿಸಿರುವ ದೇವರಕಡೆ ಹೋಗದೇ ನಿನ್ನೊಂದಿಗೆ ಸಂಬಂಧ ಇಲ್ಲದವರಕಡೆ ಹೋಗುವುದು ಒಳ್ಳೆಯದಾ?**

**ಅವರ ಉತ್ತರ:–** ನನಗೆ ಚೆನ್ನಾಗಿ ಅರ್ಥವಾಗಿದೆ. ನಾವು ಇಲ್ಲಿಯವರೆಗು

ತಿಳಿದುಕೊಂಡ ಜ್ಞಾನಕ್ಕಿಂತಲೂ ಎಷ್ಟೋ ದೊಡ್ಡ ಜ್ಞಾನವನ್ನು ನೀವು ಹೇಳುತ್ತಿದ್ದೀರ. ಆದ್ದರಿಂದ ನಾನು ದೇವರ ಜ್ಞಾನದಕಡೆಗೇ ಬರಬೇಕೆಂದುಕೊಳ್ಳುತ್ತಿದ್ದೇನೆ. ಇದ್ದಕ್ಕಿದ್ದಹಾಗೆ ನಾನು ಒಂದೇ ಸಲ ನಮ್ಮ ಜ್ಞಾನವನ್ನು ಬಿಟ್ಟು ದೇವರ ಜ್ಞಾನದಕಡೆ ಬರುವುದರಿಂದ ಹೊರಗಿನ ಪ್ರಪಂಚದಲ್ಲಿ ಬರುವ ಆದಾಯವು ಹೋಗುತ್ತದೆ. ನಂತರ ಬದುಕುವುದಕ್ಕೆ ಸ್ವಲ್ಪತೊಂದರೆ ಆಗುವುದೇನೋ ಎಂದು ಆಲೋಚಿಸುತ್ತಿದ್ದೇನೆ. ಇದಕ್ಕೆ ನಿಮ್ಮ ಸಲಹೆ ಏನು?

**ನಮ್ಮ ಮಾತು:–** ದೇವರ ಜ್ಞಾನದ ಕಡೆ ಹೋಗುವವರಿಗೆ ಪ್ರಪಂಚ ಸಂಬಂಧ ಭಯಗಳು ಉಂಟಾಗುವುದು ಸಹಜವೇ. ಇಲ್ಲೇ ಎಷ್ಟೋ ಬುದ್ಧಿವಂತನಾಗಿ ಮನುಷ್ಯ ಪ್ರವರ್ತಿಸಬೇಕು ನನ್ನನ್ನು ಕೇಳಿದ್ದೀಯ ಆದ್ದರಿಂದ ನಾನು ಇರುವ ಸತ್ಯವನ್ನು ಹೇಳುತ್ತಿದ್ದೇನೆ. ಪ್ರತಿ ಮನುಷ್ಯ ಪ್ರಪಂಚದಲ್ಲಿ ಬದುಕಬೇಕಾಗಿದೆ. ಪ್ರಪಂಚ ಜೀವನಕ್ಕೆ ಜ್ಞಾನಕ್ಕೆ ಎಂತಹ ಸಂಬಂಧವು ಇಲ್ಲ. ಆದರೂ ಪ್ರಪಂಚದಲ್ಲಿ ಸಹಜವಾಗಿ ಕರ್ಮಗಳನ್ನನುಸರಿಸಿ ಜೀವನ ಬದಲಾಗುತ್ತಿರುತ್ತದೆ. ಮನುಷ್ಯ ಹುಟ್ಟಿದಾಗಲೇ ಆ ಮನುಷ್ಯನ ಜೀವನದಲ್ಲಿ ಕಳೆಯುವ ಪ್ರತಿ ಕ್ಷಣವನ್ನು ಕುರಿತು ಬರೆದಿಟ್ಟಿರುವುದಾಗಿರುತ್ತದೆ. ಹಾಗೆ ಬರೆದಿರುವುದನ್ನೇ ಕರ್ಮ ಎಂದೂ, ಪ್ರಾರಬ್ಧ ಕರ್ಮ ಎಂದೂ ಹೇಳುತ್ತಿದ್ದೇವೆ. ಆ ಕರ್ಮಪತ್ರದಲ್ಲಿ ಪ್ರತಿದಿನವು, ಪ್ರತಿ ಕ್ಷಣವು ಏನು ಹೊಂದಬೇಕೋ, ಏನು ಅನುಭವಿಸಬೇಕೋ ಬರೆದಿಟ್ಟಿರುವುದಾಗಿರುತ್ತದೆ. ಅದರ ಪ್ರಕಾರವೇ ಪ್ರತಿಯೊಂದು ನಡೆಯುತ್ತಿದೆ, ಅನುಭವಕ್ಕೆ ಬರುತ್ತಿದೆ. ಕರ್ಮ ನಿರ್ಣಯವಿಲ್ಲದ ಮನುಷ್ಯನಾಗಲೀ, ಪ್ರಾಣಿಯಾಗಲೀ ಯಾರೂ ಭೂಮಿಮೇಲೆ ಇಲ್ಲ. **ಎಲ್ಲರಿಗೂ ಕರ್ಮಪತ್ರದಲ್ಲಿ ಬರೆಯಲಾದ ಅನುಭವಗಳ ಪ್ರಕಾರವೇ ಜೀವನ ಸಾಗುತ್ತಿರುತ್ತದೆ.** ಇದು ಮಾನವರ ಬಗ್ಗೆ ನಿರ್ಣಯಿಸಲ್ಪಟ್ಟ ಕರ್ಮ ಕಾನೂನು. ಆ ಕಾನೂನಿನ ಪ್ರಕಾರವೇ ನಿನಗಾಗಲೀ, ನನಗಾಗಲೀ ನಡೆಯುತ್ತಿರುತ್ತದೆ. ಪ್ರತಿಯೊಂದು ಒಳಗಿರುವ ಬರಹದ ಪ್ರಕಾರವೇ ನಡೆಯುತ್ತಿರುವುದರಿಂದ ಹೊರಗೆ ನಡೆಯುವ ವಿಷಯಗಳನ್ನು ಜ್ಞಾನದೊಂದಿಗೆ ಜೋಡಿಸಬಾರದು. ಹೊರಗಿನ ವಿಷಯಗಳೆಲ್ಲವೂ ಒಳಗಿನ ಕರ್ಮವನ್ನು ಅನುಸರಿಸಿ ನಡೆಯುವುದು ಆದರೇ, ಹೊರಗಿನ ವಿಷಯಗಳು ಯಾವುವಾದರೂ ಕರ್ಮದಲ್ಲಿ ಇಲ್ಲದಿರುವವು

ನಡೆಯುವುದಿಲ್ಲ. ಹೊರಗೆ ಏನೋ ನಡೆಯುವುದೆಂದು ಭಯಪಡುವುದು, ಅದರಿಂದ ದೇವರ ಜ್ಞಾನವನ್ನು ಬಿಟ್ಟುಕೊಳ್ಳುವುದು ಅಧರ್ಮವಾಗುವುದು. ದೇವರ ಜ್ಞಾನದ ಪ್ರಕಾರ ಸ್ವಧರ್ಮವನ್ನು ಬಿಟ್ಟು ಪರಧರ್ಮದಲ್ಲಿ ಪ್ರವೇಶಿಸಿದಂತಾಗುವುದು. ಇದನ್ನು ಕುರಿತು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ ಅಧ್ಯಾಯದಲ್ಲಿ 35ನೆಯ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ.

**ಶ್ಲೋ॥ ಶ್ರೇಯಾನ್ ಸ್ವಧರ್ಮೊ ವಿಗುಣಃ ಪರಧರ್ಮಾ ತ್ಸ್ವನುಷ್ಠಿ ತಾತ್।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ॥**

**ಭಾವಾರ್ಥ :– "ಆಚರಿಸುವುದಕ್ಕೆ ಎಷ್ಟೋ ಅನುಕೂಲವಿರುವ ಪರಧರ್ಮಕ್ಕಿಂತಲೂ ಸ್ವಧರ್ಮವೇ ಎಷ್ಟೋ ಶ್ರೇಯಸ್ಕರವಾದುದು. ಇತರರ ಧರ್ಮದಲ್ಲಿರುವ ಭಯಕ್ಕಿಂತಲೂ ಸ್ವಧರ್ಮದಲ್ಲಿರುವ ಮರಣವಾದರೂ ಒಳ್ಳೆಯದೇ"** ಎಂದು ಹೇಳಿದ್ದಾರೆ. ಇಲ್ಲಿ ಪರಧರ್ಮ ಎಂದರೇ ಅಜ್ಞಾನಕ್ಕೆ ಸಂಬಂಧಿಸಿರುವುದೆಂದು, ಪ್ರಪಂಚ ಸಂಬಂಧವಾದುದೆಂದು ಅರ್ಥ. ಸ್ವಧರ್ಮವೆಂದರೇ ಜ್ಞಾನ ಸಂಬಂಧವಾದುದು, ದೈವಿಕವಾದುದೆಂದು ಅರ್ಥ. ಪ್ರಪಂಚ ಸಂಬಂಧ ಮತ ಜ್ಞಾನ ಉಂಟುಮಾಡುವ ಭಯಕ್ಕಿಂತಲೂ ದೈವಿಕವಾದ ಧರ್ಮವನ್ನು ಆಚರಿಸುವುದರಲ್ಲಿ ಮರಣವಾದರೂ ಒಳ್ಳೆಯದೇ ಎಂದು ಮೇಲಿನ ಶ್ಲೋಕದ ಒಂದು ಭಾವಾರ್ಥ. ಇದು ಪ್ರಥಮ ದೈವ ಗ್ರಂಥದಲ್ಲಿರುವ ದೇವರ ಉದ್ದೇಶ. ಪ್ರತಿಯೊಂದು ಕರ್ಮಪ್ರಕಾರವೇ ನಡೆಯುವುದೆಂದು ಮೊದಲೇ ಹೇಳಿದ್ದೇವೆ. ಸ್ವಧರ್ಮದಲ್ಲಿ ಮರಣವಾಗಲೀ, ಪರಧರ್ಮದಲ್ಲಿ ಭಯವಾಗಲೀ, ಯಾವ ಸಂಘಟನೆಯಾದರೂ ಕರ್ಮ ನಿರ್ಣಯ ಪ್ರಕಾರವೇ ನಡೆದಿರುತ್ತದೆ. ಆದ್ದರಿಂದ ಮೊದಲೇ ನಿರ್ಣಯವಾದವುಗಳನ್ನು ಕುರಿತು ಎಷ್ಟು ಭಯಪಟ್ಟರೂ, ಏನು ಆಲೋಚಿಸಿದರೂ ಅವು ನಡೆಯದೆ ಇರುವುದಿಲ್ಲ. ಕರ್ಮದಲ್ಲಿ ಇಲ್ಲದ ವಿಷಯಗಳು ಯಾವುವು ನಡೆಯುವುದಿಲ್ಲ. ಕರ್ಮದಲ್ಲಿರುವವು ಯಾವುವೂ ನಡೆಯದೆ ಬಿಡುವುದಿಲ್ಲ. ಹಾಗಿರುವಾಗ ನೀನು ಈಗ ಮಾಡುವುದು ಏನೂ

ಇಲ್ಲ. ನಿನ್ನ ಸಂಪಾದನೆ ಕುರಿತು ಮೊದಲೇ ನಿರ್ಣಯ ನಡೆದಿರುತ್ತದೆ. ಆದಕಾರಣ ನೀನು ಅದನ್ನು ಕುರಿತು ಚಿಂತಿಸಬೇಕಾದ ಅವಶ್ಯವಿಲ್ಲ. ಪ್ರಪಂಚದಲ್ಲಿ ಎಲ್ಲಾ ಕರ್ಮವನ್ನು ಅನುಸರಿಸಿ ಲಭ್ಯವಾಗುವುದು. ಆದರೇ ದೈವ ಜ್ಞಾನವು ಮಾತ್ರ ಕರ್ಮವನ್ನು ಅನುಸರಿಸಿ ಲಭಿಸುವುದಲ್ಲ. ಜ್ಞಾನವು ಶ್ರದ್ಧೆಯನ್ನು ಅನುಸರಿಸಿ ಲಭ್ಯವಾಗುವುದು. ಆದ್ದರಿಂದ ಕರ್ಮವನ್ನು ಅನುಸರಿಸಿ ನಡೆಯುವ ಕೆಲಸಗಳನ್ನು ಬಿಟ್ಟು ದೈವಜ್ಞಾನದ ಮೇಲೆ ಶ್ರದ್ಧೆಯನ್ನು ಬೆಳೆಸಿಕೋ, ಆಗ ದೈವಜ್ಞಾನವು ಸುಲಭವಾಗಿ ತಿಳಿಯಲ್ಪಡುತ್ತದೆ.

**ಅವರ ಪ್ರಶ್ನೆ:– ನಮ್ಮ ಸಮಾಜದಲ್ಲಿ ದೇವರು ಒಬ್ಬನೇ ಎಂದು ಇದೆ. ಒಬ್ಬ ದೇವರು ವಿನಹ ಬೇರೊಂದು ದೇವರು ಇಲ್ಲವೆಂದು, ಆತನೊಂದಿಗೆ ಸಮಾನ ವಾದವನು ಕೂಡಾ ಇಲ್ಲವೆಂದು ಹೇಳಿಕೊಂಡಿದ್ದೇವೆ. ದೇವರು ಒಬ್ಬನೇ ಎಂಬ ನಿರ್ಣಯವು ನಮ್ಮ ನರನರಗಳಲ್ಲಿ ಜೀರ್ಣವಾಗಿಹೋಗಿದೆ. ಈಗ ನೀವು ದೇವರು ಎಂಬ ಪದವು ಒಂದೇ ಆದರೂ ಆ ಪದದ ಮೂಲಕ ಇಬ್ಬರು ಕರೆಯಲ್ಪಡುತ್ತಿದ್ದಾರೆಂದು ಹೊಸದಾಗಿ ಹೇಳಿದ್ದೀರ. ಈಗ ಇಬ್ಬರು ದೇವರನ್ನು ನಮ್ಮ ಮನಸ್ಸು ಒಪ್ಪಿಕೊಳ್ಳುವುದಿಲ್ಲ, ಒಂದೇ ದೇವರೆಂಬ ನಿರ್ಣಯವೇ ನಮ್ಮಲ್ಲಿದೆ. ಇದಕ್ಕೆ ನೀವೇನು ಹೇಳುತ್ತೀರ?**

**ನಮ್ಮ ಉತ್ತರ:–** ದೇವರು ಒಬ್ಬನೇ ಎಂದು ನಾನು ಸಹ ಹೇಳುತ್ತಿದ್ದೇನೆ. ಒಂದು ದೇವರನ್ನೇ ಎರಡು ಬೇರೆ ಬೇರೆ ಸಮಯಗಳಲ್ಲಿ ಬೇರೆಬೇರೆಯಾಗಿ ಹೇಳುತ್ತಿದ್ದೇವೆ. ಒಂದೇ ಮನುಷ್ಯನನ್ನೇ ಮದುವೆ ಮಾಡಿಕೊಳ್ಳುವ ಮೊದಲು ಬ್ರಹ್ಮಚಾರಿ ಎನ್ನುತ್ತಿದ್ದೇವೆ, ಮದುವೆ ಆದ ನಂತರ ಸಂಸಾರಿ ಎನ್ನುತ್ತೇವೆ. ಇಲ್ಲಿ ಬ್ರಹ್ಮಚಾರಿ ಎನ್ನುವವನು, ಸಂಸಾರಿ ಎನ್ನುವವನು ಇಬ್ಬರೂ ಒಬ್ಬ ಮನುಷ್ಯನೇ. ಆದರೇ ಆಯಾ ಸಂದರ್ಭಗಳನ್ನು ಅನುಸರಿಸಿ ಆಯಾ ಹೆಸರುಗಳಿಂದ ಕರೆಯುತ್ತಿದ್ದೇವೆ. ಸೃಷ್ಟಿಗಿಂತಲೂ ಮೊದಲು ದೇವರು ಎಂಬ ಹೆಸರು ಕೂಡಾ ಇಲ್ಲದ ಸ್ಥಿರಾಸ್ಥಿರನನ್ನು ಸೃಷ್ಟಿ ನಂತರ ದೇವರು ಎಂದು ಹೇಳಿದ್ದೇವೆ. ಸೃಷ್ಟಿ ನಂತರ ಇರುವ ದೇವರನ್ನು ಸೃಷ್ಟಿಗಿಂತ ಮೊದಲು ಕರೆಯುವವರೇ ಇಲ್ಲದಿರುವುದರಿಂದ ದೇವರು ಎಂದು ಸಹ ಹೇಳಲಿಲ್ಲ, ಸ್ಥಿರಾಸ್ಥಿರನೆಂದು

ಹೇಳಿದ್ದೇವೆ. ಸ್ಥಿರಾಸ್ಥಿರನು ಸೃಷ್ಠಿ ನಂತರ ದೇವರು ಎಂದು ಅರ್ಥದ ಪ್ರಕಾರ ಕರೆಯಿಸಿಕೊಂಡರೂ, ಆತನು ಮೂವರು ಪುರುಷರಾಗಿ ವಿಭಜಿಸಲ್ಪಟ್ಟಿದ್ದಾನೆ. ನಿಮ್ಮ ಮಾತಿನ ಪ್ರಕಾರವಾದರೂ ದೇವರು ಕೆಲಸ ಮಾಡದವನು ಎಂದು ಒಂದುಕಡೆ ಹೇಳುತ್ತಿದ್ದೇವೆ. ಮತ್ತೊಂದು ಕಡೆ ದೇವರೇ ಎಲ್ಲಾ ಮಾಡುತ್ತಿದ್ದಾನೆ ಎಂದು ಹೇಳುತ್ತಿದ್ದೇವೆ. ಹಾಗಾದರೇ ಮಾಡದ ದೇವರು ಒಬ್ಬನು, ಮಾಡುವ ದೇವರು ಒಬ್ಬನು ಇಬ್ಬರಾಗಿ ಕಾಣಿಸುತ್ತಿದ್ದಾರೆ ಅಲ್ಲವೇ! ಇನ್ನೂ ವಿವರವಾಗಿ ತಿಳಿಯುವುದಕ್ಕೆ ಖುರಾನ್ ಗ್ರಂಥದಲ್ಲಿ **(2–117) "ಭೂಮಿ ಆಕಾಶಗಳನ್ನು ಪ್ರಪ್ರಥಮವಾಗಿ ಸೃಷ್ಠಿಸಿದವನು ದೇವರೇ. ಆತನು ಯಾವ ಕೆಲಸ ಮಾಡಲು ಸಂಕಲ್ಪಿಸಿಕೊಂಡರೂ ಅದನ್ನು "ಆಗಿಹೋಗು" ಎಂದರೇ ಸಾಕು ಅದು ಆಗಿ ಹೋಗುತ್ತದೆ"** ಎಂದು ಇದೆ. ಇಲ್ಲಿ ಈ ವಿಧವಾಗಿ ಹೇಳಿ ಅದೇ ಖುರಾನ್ ಗ್ರಂಥದಲ್ಲಿ ಮತ್ತೊಂದು ಕಡೆ ಮತ್ತೊಂದು ವಿಧವಾಗಿ ಹೇಳುತ್ತಿದ್ದಾನೆ ನೋಡಿರಿ. **(50–37) "ಹೃದಯವನ್ನು ಹೊಂದಿದ್ದು ಅಥವಾ ಶ್ರದ್ಧೆಯನ್ನು ಹೊಂದಿದ್ದು ಕೇಳಿಸಿಕೊಳ್ಳಿ. ಸಾವದಾನವಾಗಿ ನಡೆದುಕೊಳ್ಳುವ ಪ್ರತಿ ವ್ಯಕ್ತಿಗೆ ಇದರಲ್ಲಿ ಹಿತಬೋಧ ಇದೆ." (50–38) "ನಿಶ್ಚಯವಾಗಿ ನಾವು ಭೂಮಿ ಆಕಾಶಗಳನ್ನು ಅವುಗಳ ಮಧ್ಯೆ ಇರುವ ಎಲ್ಲವನ್ನು ಆರು ದಿನಗಳಲ್ಲಿ ಸೃಷ್ಠಿಸಿದ್ದೇವೆ. ಆದರೆ ನಮಗೆ ಆಯಾಸ ಸ್ವಲ್ಪವೂ ಬರಲಿಲ್ಲ"** ಎಂದು ಕೂಡಾ ಇದೆ. ಮೇಲೆ ಹೇಳಿರುವ 2–117 ವಾಕ್ಯಕ್ಕೆ, ಕೆಳಗೆ ಹೇಳಿರುವ 50–37,38 ವಾಕ್ಯಗಳಿಗೆ ಪೂರ್ತಿ ವಿರುದ್ಧ ಭಾವವಿದೆ. ಮೊದಲು ಹೇಳಿರುವ 2ನೆಯ ಸೂರಾ 117ನೆ ವಾಕ್ಯದಲ್ಲಿ **'ದೇವರು ಕೆಲಸ ಮಾಡುವುದಿಲ್ಲ, ಆತನ ಸಂಕಲ್ಪ ಮಾತ್ರದಿಂದ ಎಲ್ಲಾ ಆಗಿ ಹೋಗುತ್ತಿವೆ'** ಎಂದು ಇದೆ. ಕೆಳಗೆ ಹೇಳಿದ 50ನೇ ಸೂರಾ 38ನೇ ವಾಕ್ಯದಲ್ಲಿ **'ಆತನು ಆರು ದಿನಗಳು ಕೆಲಸ ಮಾಡಿದ್ದಾನೆ ಆದರೂ ಆಯಾಸ ಬರಲಿಲ್ಲ'** ಎಂದು ಇದೆ. ಅಲ್ಲಿ ಎರಡನೆಯ ಸೂರಾದಲ್ಲಿ ಹೇಳಿರುವ ವಾಕ್ಯದಲ್ಲಿ **'ಭೂಮಿಯನ್ನು ಆಕಾಶವನ್ನು ಪ್ರಪ್ರಥಮವಾಗಿ ದೇವರೇ ಸೃಷ್ಠಿಸಿದ್ದಾನೆ'** ಎಂದು ಇದೆ. ನಂತರ ಹೇಳಿರುವ 50ನೇ ಸೂರಾದಲ್ಲಿ ಕೂಡಾ **'ಭೂಮಿಯನ್ನು ಆಕಾಶವನ್ನು ದೇವರೇ ಸೃಷ್ಠಿಸಿದ್ದಾನೆ'** ಎಂದು ಇದೆ. ಇಲ್ಲಿ ಬುದ್ಧಿಯೊಂದಿಗೆ ಗ್ರಹಿಸುವವರಿಗೆ ಯಾರಿಗಾದರೂ **'ಕೆಲಸ**

**ಮಾಡದ ದೇವರು, ಕೆಲಸ ಮಾಡುವ ದೇವರು'** ಎರಡು ವಿಧಗಳಾಗಿ ಕಾಣಿಸುತ್ತಿದ್ದಾನೆ. ಆದರೇ ಆತನು ಒಬ್ಬನೇ ಎನ್ನುವುದಕ್ಕೆ ಆಧಾರವಾಗಿ **'ಭೂಮಿಯನ್ನು ಆಕಾಶಗಳನ್ನು ಸೃಷ್ಠಿಸಿರುವ ದೇವರು'** ಎಂದು ಹೇಳಿದ್ದಾರೆ. ಸೃಷ್ಠಿಸಿರುವುದು ಪ್ರಪಂಚವನ್ನು. ಸೃಷ್ಠಿಸಿರುವವನು ದೇವರು. ಪ್ರಪಂಚವನ್ನು ಸೃಷ್ಠಿಸಿರುವ ದೇವರು ಒಬ್ಬನೇ ಆದರೂ ಆತನು ಕೆಲಸ ಮಾಡದವನಾಗಿ, ಕೆಲಸ ಮಾಡುವವನಾಗಿ ಎರಡಾಗಿ ತಿಳಿಯುತ್ತಿದ್ದಾನೆ.

**ದೇವರು ಒಬ್ಬನೇ ಆದರೂ ಆತನು ಎರಡಾಗಿ ಇರುವನೆಂಬ ವಿಷಯವು ಯಾವತ್ ಪ್ರಪಂಚಕ್ಕೆ ತಿಳಿಯದೇ ಹೋಗಿದೆ.** ದೈವಗ್ರಂಥಗಳಲ್ಲಿ ಬರೆದಿರುವುದನ್ನು ಮನುಷ್ಯ ಅರ್ಥಮಾಡಿಕೊಳ್ಳಲಾರದ ಸ್ಥಿತಿಯಲ್ಲಿದ್ದಾನೆ. ಮುಖ್ಯವಾಗಿ ಅಂತಿಮ ದೈವಗ್ರಂಥದಲ್ಲಿ ಮನುಷ್ಯ ತಿಳಿಯುವುದಕ್ಕೆ ಪ್ರತ್ಯೇಕಿಸಿ ಒಂದು ಆಯತ್‌ನ್ನೇ ಹೇಳಿದ್ದಾನೆ. 50–37ನೇ ಆಯತ್‌ನಲ್ಲಿ ಎಚ್ಚರಿಸುತ್ತಾ 50–38ನೇ ವಾಕ್ಯವನ್ನು ಹೇಳಿದ್ದರೂ ಇದು ನಮ್ಮ ಗ್ರಂಥವೆಂದು ಹೇಳುವವರು 50–37ರಲ್ಲಿ ಇರುವ ವಾಕ್ಯದ ಪ್ರಕಾರ ಶ್ರದ್ಧೆಯಾಗಲೀ, ಸಾವದಾನ(ಜಾಗ್ರತೆ)ವಾಗಲೀ, ಎರಡೂ ಇಲ್ಲದವನಾಗಿ ಇರುವುದರಿಂದ ಆ ವಾಕ್ಯದಲ್ಲಿರುವ ಹಿತಬೋಧನೆ ತಿಳಿಯದೇ ಹೋಗಿದೆ. ದೇವರು ಒಬ್ಬನೇ ಎಂದು ಹೇಳುತ್ತಿದ್ದಾರೆ ಹೊರತು, ಒಬ್ಬನಾಗಿ ಹೇಗಿರುವನೆಂದು ತಿಳಿದಿಲ್ಲ. ಮುಸ್ಲಿಮ್‌ರಿಗೆ ಪ್ರಪಂಚದಲ್ಲಿ ಯಾರಿಗೂ ಇಲ್ಲದ ವಿಶ್ವಾಸ ಅವರಿಗೆ ಇದೆ. ಆದ್ದರಿಂದ ಅವರನ್ನು ಮುಸ್ಲಿಮ್‌ರೆಂದು ಹೇಳುತ್ತಿದ್ದೇವೆ. ವಿಶ್ವಾಸದಿಂದ ದೇವರಿದ್ದಾನೆ ಎಂದು, ದೇವರು ದೊಡ್ಡವನೆಂದು ಹೇಳಬಹುದು ಆದರೇ, ದೇವರು ಅನುಭವ ಪ್ರಕಾರ ಹೇಗಿರುವನೆಂಬ ಜ್ಞಾನವು ತಿಳಿದಿಲ್ಲ. ಮುಸ್ಲಿಮ್‌ರಿಗೆ ಖುರಾನ್ ಗ್ರಂಥದಲ್ಲಿ ಹೇಳಿರುವ ಮೇಲಿನ ಎರಡು ಆಯತ್‌ಗಳಿಗೆ ಅರ್ಥ ತಿಳಿದಿಲ್ಲ. ಮೇಲಿನ ಎರಡು ಆಯತ್‌ಗಳಲ್ಲಿ ಒಂದೇ ದೇವರು ಎರಡು ವಿಧಗಳೆಂದು ಪರಸ್ಪರ ವಿರುದ್ಧವಾಗಿ ಇರುವನೆಂಬ ವಿಷಯವನ್ನು ಗ್ರಹಿಸಲಿಲ್ಲ. ಕೆಲವರಿಗೆ ಈ ವಿಷಯವು ಆಯತ್‌ಗಳಲ್ಲಿ ಇರುವಹಾಗೆ ಕಾಣಿಸಿದರೂ, ಅದರ ಬಗ್ಗೆ ತಲೆಕೆಡಿಸಿಕೊಳ್ಳದೇ ತಮ್ಮ ಹಿರಿಯರು ಹೇಳಿರುವುದನ್ನೇ ಪ್ರಚಾರ ಮಾಡುತ್ತಿದ್ದಾರೆ. ಈ ಆಯತ್‌ಗಳನ್ನು ನೋಡಿದವರಿಗೆ ಯಾರಿಗಾದರೂ

ಅರ್ಥವಾಗದೇ ದೇವರ ವಿಷಯದಲ್ಲಿ ಎರಡು ವಿಧಗಳಾಗಿ ಇರುವುದೇನೆಂದು ಕೇಳಿದರೆ ದೇವರ ವಿಷಯದಲ್ಲಿ ಪ್ರಶ್ನಿಸಬಾರದು, ಹೇಳಿರುವುದನ್ನು ಮಾತ್ರ ಕೇಳಬೇಕೆಂದು ಉತ್ತರ ಹೇಳುತ್ತಿದ್ದಾರೆ. ಯಾಕೆ ಪ್ರಶ್ನಿಸಬಾರದೆಂದು ಕೇಳಿದರೇ ಪಕ್ಷಿ, ಪರ್ವತಗಳ ಕಥೆ ಹೇಳಿ ಬಾಯಿ ಮುಚ್ಚಿಸುತ್ತಿದ್ದಾರೆ.

ಖುರಾನ್ ಗ್ರಂಥದಲ್ಲಿ ಮುಹಮ್ಮದ್ ಪ್ರವಕ್ತರವರು ಉನ್ನತವಾದ ಸ್ವಭಾವ ಇರುವವನೆಂದು, ಅಂದಿನ ಕಾಲದಲ್ಲಿ ಆತನನ್ನು ಮೀರಿದ ಉತ್ತಮನು ಇಲ್ಲದಿರುವುದರಿಂದ ಮಹಾಜ್ಞಾನಿಯಾದ ಜಿಬ್ರಯೇಲ್ ತನ್ನ ಬೋಧನೆಯನ್ನು ಹೇಳುವುದಕ್ಕೆ ಮುಹಮ್ಮದ್ ಪ್ರವಕ್ತರವರನ್ನು ಆಯ್ಕೆಮಾಡಿಕೊಂಡಿದ್ದಾನೆ. ಪ್ರವಕ್ತ ಮೂಲಕ ತನ್ನ ಜ್ಞಾನವನ್ನು ಪ್ರಜೆಗಳಿಗೆ ತಿಳಿಸುವುದಕ್ಕೆ ಜಿಬ್ರಯೇಲ್ ನಿರ್ಣಯಿಸಿಕೊಂಡನು. ಹಾಗೆ ಪ್ರವಕ್ತನಾಗಿ ಬದಲಾದ ನಂತರ ಮುಹಮ್ಮದ್ ಪ್ರವಕ್ತರವರು ತನಗೆ ತಿಳಿದಿರುವ ಜ್ಞಾನವನ್ನು ಪೂರ್ತಿವಿವರವಾಗಿ ತನ್ನೊಂದಿಗೆ ಇರುವವರಿಗೆ ಹೇಳುತ್ತಿದ್ದನು. ತನ್ನಬಳಿ ಇರುವ ದೈವಸಂದೇಶವನ್ನು ತಂದು ಮರೆಮಾಚದೆ ಇರುವುದೆಲ್ಲಾ ಮುಗಿದು ಹೋಗುವವರೆಗೂ ಹೇಳುತ್ತಿದ್ದನು. ಪ್ರವಕ್ತರವರು ಮುಚ್ಚುಮರೆ ಇಲ್ಲದ ಮನುಷ್ಯನಾದ್ದರಿಂದ ತನ್ನ ಸಂದೇಶವನ್ನು ಉಳಿಸಿಕೊಳ್ಳದೇ ಹೇಳುತ್ತಿದ್ದನು. ತನ್ನಬಳಿ ಹೇಳಬೇಕಾದ ಸಂದೇಶವನ್ನು ಪೂರ್ತಿ ಹೇಳುತ್ತಿದ್ದನು ಆದಕಾರಣ ಪ್ರವಕ್ತರವರನ್ನು ಸಂದೇಶಹರನು ಎಂದಿದ್ದಾರೆ. ಸಂದೇಶವೆಂದರೇ ಹೇಳಬೇಕಾದ ಸಮಾಚಾರ. ಹರನು ಎಂದರೇ ಇಲ್ಲದಂತೆ ಮಾಡುವವನು, ಹರಿಸುವವನು ಎಂದು ಅರ್ಥ. ತನ್ನಬಳಿ ಸಮಾಚಾರ ಉಳಿಯದೇ ಹೇಳುವವನು ಆದ್ದರಿಂದ ಮುಹಮ್ಮದ್ ಪ್ರವಕ್ತರವರನ್ನು ಸಂದೇಶಹರನು ಎಂದು ಹೇಳಿದ್ದಾರೆ. ಖುರಾನ್ ಗ್ರಂಥದಲ್ಲಿ ಬಹಳಕಡೆ ಪ್ರವಕ್ತ ಎಂದು ಹೇಳುವಕಡೆ 'ಸಂದೇಶಹರನು' ಎಂದು ಬರೆದಿದ್ದಾರೆ.

ಒಂದು ವಿಷಯವನ್ನು ಸಂಶಯ ರಹಿತವಾಗಿ ತಿಳಿಯಬೇಕೆಂದರೇ ಎದುರುಗಡೆಯಿರುವ ಮನುಷ್ಯ ತನ್ನ ಸಂದೇಶವನ್ನು ಪೂರ್ತಿಯಾಗಿ ಹೇಳಬೇಕು. ಮುಹಮ್ಮದ್ ಪ್ರವಕ್ತರವರು ಸಂಶಯರಹಿತವಾಗಿ ಜ್ಞಾನ ಹೇಳುವವನಾದ್ದರಿಂದ, ಮರೆಮಾಚದೆ ಉಳಿಸಿಕೊಳ್ಳದೇ ಹೇಳುವುದರಿಂದ, ಆತನನ್ನು ಸಂದೇಶಹರನೆಂದು

ಹೇಳುವುದಾಗಿದೆ. ಹಾಗಿರುವಾಗ ಆತನು ಪ್ರಶ್ನಿಸಬಾರದೆಂದು ಹೇಳಿರುತ್ತಾನಾ? ಪ್ರವಕ್ತರವರು ಸಂಶಯರಹಿತವಾಗಿ ಜ್ಞಾನವನ್ನು ವಿವರಿಸಿ ಹೇಳಿರುತ್ತಾನೆ. ಆದರೇ ಮಧ್ಯದಲ್ಲಿ ಬಂದಿರುವವರು ಪ್ರವಕ್ತ ಜ್ಞಾನವನ್ನು ತಿಳಿಯದವರಾಗಿದ್ದು, ಹೇಳುವುದಕ್ಕೆ ಕೈಲಾಗದೇ, ಪ್ರಶ್ನಿಸಬಾರದೆಂದು ನಿಯಮವನ್ನಿಟ್ಟು ಎದುರಿಗಿರುವವರ ಬಾಯಿ ತೆರೆಯದಂತೆ ಮಾಡುತ್ತಿದ್ದಾರೆ. ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ 2–117ರಲ್ಲಿ 'ಹೇಳಿದ ಕೆಲಸವನ್ನು ಮಾಡದ ದೇವರು', 50–38ರಲ್ಲಿ 'ಹೇಳಿದ ಕೆಲಸ ಮಾಡುವ ದೇವರು' ಎಂದು ಎರಡು ವಿಧಗಳಾಗಿರುವ ದೇವರನ್ನು ವಿವರಿಸಿ ಹೇಳುವ ಜವಾಬ್ದಾರಿ ಮುಖ್ಯವಾಗಿ ಮುಸ್ಲಿಮ್‌ರಿಗೇ ಇದ್ದರೂ, ಅವರು ಇದಕ್ಕೆ ಸಮಾಧಾನ ಹೇಳದೇ, ಪ್ರಶ್ನಿಸಬಾರದೆಂದುಹೇಳಿ ತಪ್ಪಿಸಿಕೊಳ್ಳುತ್ತಿದ್ದಾರೆ. ಇತರರಿಗೆ ಹೇಳದೆ ಹೋದರೂ ಕನಿಷ್ಠ ಅವರಿಗಾದರೂ ತಿಳಿದಿದೆಯಾ! ಎಂದು ನೋಡಿದರೇ ಅವರು ಖುರಾನ್ ಗ್ರಂಥವನ್ನು ತಿಳಿದುಕೊಳ್ಳಬೇಕೆಂದುಕೊಳ್ಳಲಿಲ್ಲ. ಇಂತಹ ಕಷ್ಟವಾದ ಸಮಾಚಾರಬಂದಾಗ ಅವು ಮುತಷಾಬಿಹಾತ್ ವಾಕ್ಯಗಳೆಂದು ಅವುಗಳನ್ನು ದೇವರೇ ಬಿಟ್ಟುಹಾಕು ಎಂದು ಹೇಳಿದ್ದಾನೆಂದು ಹೇಳಿ ಅವುಗಳನ್ನು ಕುರಿತು ತಿಳಿಯುವುದಕ್ಕು ಸಹ ಪ್ರಯತ್ನಿಸಲಿಲ್ಲ.

ದೈವಗ್ರಂಥದಲ್ಲಿ ಇರುವುದೆಲ್ಲಾ ದೈವಜ್ಞಾನವೇ ಆಗಿರುವಾಗ ಗ್ರಂಥದಲ್ಲಿ ಸೂಕ್ಷ್ಮ ಜ್ಞಾನದೊಂದಿಗೆ ಕೂಡಿಕೊಂಡಿರುವ ಶೇಕಡ ಅರವತ್ತು (60%) ದೈವವಾಕ್ಯಗಳನ್ನು ಯಾಕೆ ಬಿಟ್ಟುಹಾಕುತ್ತಿದ್ದಾರೆ? ಎಂದು ಪ್ರಶ್ನೆ ಬರದೆ ಇರುವುದಿಲ್ಲ. ಹಾಗೆ ಬಂದಿರುವ ಪ್ರಶ್ನೆಯನ್ನು ಸಹ ಕೇಳಬಾರದೆಂದು ನಿಯಮವನ್ನು ಇಟ್ಟುಕೊಂಡವರನ್ನು ಬಿಟ್ಟುಹಾಕಬೇಕೆ ಹೊರತು ಪ್ರಶ್ನಿಸುವುದು ವ್ಯರ್ಥ. ದೇವರು ಸರ್ವವನ್ನೂ ಸೃಷ್ಠಿಸಿರುವ ಸೃಷ್ಠಿಕರ್ತನೆಂದು ಮುಸ್ಲಿಮ್‌ರು ಒಪ್ಪಿಕೊಳ್ಳುತ್ತಾರೆ. ಹಾಗೆಯೇ ಉಳಿದ ಮತಗಳವರು ಒಪ್ಪಿಕೊಳ್ಳುತ್ತಿದ್ದಾರೆ. ಎಲ್ಲರಿಗೂ ದೇವರು ಒಬ್ಬನೇ ಎಂದು ಎಲ್ಲಾ ಮತದವರು ಮೇಲ್ನೋಟಕ್ಕೆ ಹೇಳಿದರೂ ಒಳಗೆ ಅವರ ಭಾವನೆಯಲ್ಲಿ ದೇವರು ಬೇರೆ ಎಂಬ ಭಾವನೆಯಲ್ಲಿಯೇ ಇದ್ದಾರೆ. ತಮ್ಮ ಮತದವರು ಇತರ ಮತದವರೊಂದಿಗೆ ಸ್ನೇಹವಾಗಿ ಇದ್ದರೇ, ಮತಸಾಮರಸ್ಯವಾಗಿ ಕಲೆತುಬೆರೆತಿದ್ದರೇ, ಅಂಥವನನ್ನು ಅವರ ಮತಹಿರಿಯರು

ದಂಡಿಸಿ, ಮತ ವಿಷಯಗಳಲ್ಲಿ ದೂರವಾಗಿರು ಎಂದು ಅವರ ದೇವರು ಬೇರೆ, ನಮ್ಮ ದೇವರು ಬೇರೆ ಎಂದು ಹೇಳುತ್ತಿರುತ್ತಾರೆ. ಮನುಷ್ಯರ ಭಾವನೆಗಳು ಬೇರೆಯಾದರೂ ಮನುಷ್ಯರನ್ನು ಹುಟ್ಟಿಸಿರುವವನು ಒಬ್ಬನೇ ಎಂಬ ಭಾವನೆಯನ್ನು ಮನುಷ್ಯರೆಲ್ಲರೂ ಮರೆತುಹೋಗಿದ್ದಾರೆ.

ಮೂರು ದೈವ ಗ್ರಂಥಗಳಿಗೆ ಗ್ರಂಥಕರ್ತ ದೇವರು ಒಬ್ಬನೇ. ಮೂರು ದೈವಗ್ರಂಥಗಳನ್ನು ಬೇರೆಬೇರೆ ಮನುಷ್ಯರು ತಯಾರು ಮಾಡಿದ್ದಾರೆ. ಗ್ರಂಥಗಳನ್ನು ಮನುಷ್ಯರು ಮಾಡಿದರೂ ಗ್ರಂಥಗಳಲ್ಲಿನ ಜ್ಞಾನವನ್ನು ದೇವರು ಹೇಳಿದ್ದಾನೆ. ದೇವರು ತನ್ನ ಜ್ಞಾನವನ್ನು ಮೂರು ವಿಧಗಳಾಗಿ ಎಂದರೇ ಮೂರು ಪದ್ಧತಿಗಳ ಮೂಲಕ ಬೋಧಿಸಿದ್ದಾನೆ. ಆದ್ದರಿಂದ ಗ್ರಂಥದಲ್ಲಿನ ಜ್ಞಾನಕ್ಕೆ ದೇವರೇ ಕರ್ತನಾಗಿದ್ದಾನೆ. ಇದನ್ನನುಸರಿಸಿ ಗ್ರಂಥಗಳಿಗೆ ನಿಜವಾದ ಗ್ರಂಥಕರ್ತನಾಗಿ ದೇವರನ್ನೇ ಹೇಳಬೇಕು. ಮನುಷ್ಯರು ಒಂದೇ ದೇವರು ಹೇಳಿರುವ ಜ್ಞಾನವನ್ನು ಮೂರು ಮತಗಳಾಗಿ ಸೀಳಿಸಿಕೊಂಡಿದ್ದಾರೆ. ಸೀಳಿಸಿಕೊಂಡ ಜ್ಞಾನವನ್ನು ನನ್ನದು ನಿನ್ನದು ಎಂದು ಹೇಳುತ್ತಾ, ಮೂರು ಮತಗಳಾಗಿ ಪ್ರಕಟಿಸಿಕೊಂಡಿದ್ದಾರೆ. ಒಬ್ಬನೇ ತಂದೆಗೆ ಹುಟ್ಟಿರುವವರು ಅವರು ಹುಟ್ಟಿರುವ ಸ್ಥಳವನ್ನು ಅನುಸರಿಸಿ ಬೇರೆ ಕುಲಗಳಾಗಿ ಹೇಳಿಕೊಂಡಂತೆ, ಒಂದೇ ದೇವರ ಮಕ್ಕಳಾದ ಮನುಷ್ಯರು ಬೇರೆಬೇರೆ ಮತಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಖುರಾನ್ ಗ್ರಂಥದಲ್ಲಿ ಸೂರಾ 6, ಆಯತ್ 91ರಲ್ಲಿ **(6–91) "ತೌರಾತ್ ಗ್ರಂಥವನ್ನು ದೇವರು ಅವತರಿಸುವಂತೆ ಮಾಡಿದ್ದಾನೆ. ಆ ಗ್ರಂಥ ಒಂದು ಜ್ಯೋತಿ, ಮಾನವರಿಗಾಗಿ ಮಾರ್ಗದರ್ಶಕತ್ವ. ನೀವು ಅದನ್ನು ಬೇರೆಬೇರೆ ಕಾಗದಗಳಾಗಿ (ಬೇರೆಬೇರೆ ಗ್ರಂಥಗಳಾಗಿ) ವಿಭಜಿಸಿ ತೋರಿಸುತ್ತಿದ್ದಾರ"** ಎಂದು ಹೇಳಿದ್ದಾರೆ. ಈದಿನ ಮನುಷ್ಯರು ದೇವರು ಹೇಳಿರುವ ಗ್ರಂಥವನ್ನು ಅಂದರೇ ಭಗವದ್ಗೀತಾ ಜ್ಞಾನವನ್ನು, ವಿಭಜಿಸಿಕೊಂಡು ಮೂರು ಮತಗಳಾಗಿ ಹೇಳುತ್ತಿದ್ದಾರೆ. ಮನುಷ್ಯರು ಹೇಗೆ ಹೇಳಿಕೊಂಡರೂ ಫರವಾಗಿಲ್ಲ. ಆದರೇ ಅದರಲ್ಲಿನ ಜ್ಞಾನವನ್ನು ಮರೆ ಮಾಚುತ್ತಿದ್ದಾರೆ.

ಮನುಷ್ಯರು ದೇವರ ಜ್ಞಾನವನ್ನು ಮುಚ್ಚಿಟ್ಟರೂ, ಬಚ್ಚಿಟ್ಟರೂ ಕೊನೆಗದು ಹೊರಗೆ ಬರಬಲ್ಲದು. ದೈವಗ್ರಂಥಗಳಲ್ಲಿ ಮೊದಲ ಜ್ಞಾನ ಎಂದರೇ ಮಾತ್ರ

ಜ್ಞಾನವು ಮೂರು ಆತ್ಮಗಳನ್ನು ಕುರಿತು ಹೇಳಿರುವುದೇ. ಅದು ಇತರ ದೇಶಗಳಲ್ಲಿ ತೌರಾತ್ ಎಂದು ಕರೆಯಲ್ಪಡುತ್ತಿದ್ದರೇ, ಭಾರತ ದೇಶದಲ್ಲಿ ಭಗವದ್ಗೀತೆ ಎಂದು ಹೇಳಲ್ಪಡುತ್ತಿದೆ. ಭಗವದ್ಗೀತಾ ಜ್ಞಾನವೇ ಉಳಿದ ಎರಡೂ ಗ್ರಂಥಗಳಲ್ಲಿ ಇದೆ. ಒಟ್ಟಾರೆ ಮೂರು ದೈವಗ್ರಂಥಗಳಲ್ಲಿ ದೇವರು 'ಅವ್ಯಯನು' ಎಂದು ಇದೆ. ಅವ್ಯಯನು ಎಂದರೇ ನಾಶವಿಲ್ಲದವನು ಎಂದು ಅರ್ಥ. ದೇವರು ನಾಶವಿಲ್ಲದವನು, ಅಕ್ಷರನೆಂದು, ಅವಿನಾಶನೆಂದು ಎಷ್ಟೋ ಸಂದರ್ಭಗಳಲ್ಲಿ ಆಯಾ ಗ್ರಂಥಗಳಿಂದ ಹೇಳುವುದು ನಡೆದಿದೆ. ಯಾವ ಗ್ರಂಥದಲ್ಲಿ ಹೇಳಿದರೂ ದೇವರ ಸ್ಥಾನ ಒಂದೇ. ಭಗವದ್ಗೀತೆಯಲ್ಲಿ ದೇವರನ್ನು 'ಅವ್ಯಯನೆಂದು' ಹೇಳಿದ್ದಾರೆ ಅಷ್ಟೇಅಲ್ಲ 'ಅಜೋಪಿ' ಎಂದು ಹುಟ್ಟುವಿಕೆ ಇಲ್ಲದವನೆಂದು ಹೇಳುವುದಾಗಿದೆ. ಹುಟ್ಟುವಿಕೆ ನಾಶ ಇಲ್ಲದವನು ಒಬ್ಬನೇಒಬ್ಬ ಇದ್ದಾನೆ, ಆತನೇ ದೇವರು. ನಾಶವಾಗಲೀ, ಹುಟ್ಟುವಿಕೆಯಾಗಲೀ ಇಲ್ಲದ ದೇವರನ್ನು ಪರಮಾತ್ಮ ಎಂದು, ಪುರುಷೋತ್ತಮನೆಂದು ಹೇಳುವುದಾಗಿದೆ. ಮೂರು ಗ್ರಂಥಗಳಲ್ಲಿಯೂ ಒಂದೇ ವಿಧಾನವನ್ನು ಹೇಳಿದರೂ ಅದನ್ನು ಬಹಳಜನ ಗುರುತಿಸಲಾರದೇ ಹೋಗಿದ್ದಾರೆ. ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ದೇವರು **'ಅವ್ಯಯನು'** ಎಂದು ಹೇಳಿದ್ದಾನೆ. ಅದೇ ಗ್ರಂಥದಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 16ನೇ ಶ್ಲೋಕದಲ್ಲಿ ಮತ್ತು 17ನೇ ಶ್ಲೋಕದಲ್ಲಿ ಮೂವರು ಪುರುಷರಾಗಿ ಒಂದೇ ದೇವರನ್ನು ವಿವರಿಸಿ ಹೇಳಬೇಕಾಗಿ ಬಂದಿದೆ. ಮೊದಲನೆ ಪುರುಷನು ದೇವರೆಂದು ಎಲ್ಲರೂ ಹೇಳುತ್ತಿದ್ದಾರೆ. ಎರಡನೆಯ ಪುರುಷನು ಅಕ್ಷರನಾಗಿರುವಾಗ 'ನಾಶವಿಲ್ಲದವನು ದೇವರು' ಎಂಬ ಸೂತ್ರದ ಪ್ರಕಾರ ಎರಡನೆಯ ಆತ್ಮವನ್ನು ಕೂಡಾ ದೇವರೇ ಎನ್ನಬೇಕು. ನಮಗೆ ಈ ವಿಷಯ ತಿಳಿದರೂ, ತಿಳಿಯದೇ ಹೋದರೂ ನಾವೆಲ್ಲರೂ ಎರಡನೆಯ ಪುರುಷನನ್ನು ದೇವರಾಗಿಯೇ ಕರೆಯುತ್ತಿದ್ದೇವೆ. ಎರಡನೆಯ ಪುರುಷನು ಮಾಡಿರುವ ಕೆಲಸವನ್ನೆಲ್ಲಾ ದೇವರು ಮಾಡಿರುವಂತೆಯೇ ಹೇಳುತ್ತಿದ್ದೇವೆ. ದೇವರು ಒಬ್ಬನೇ ಎಂದು ಎಲ್ಲರೂ ಹೇಳುತ್ತಿದ್ದರೂ, ತಿಳಿದವರು ಹೇಳುವುದನ್ನನುಸರಿಸಿ ತಿಳಿಯದವರು ಸಹ ದೇವರು ಒಬ್ಬನೇ ಎಂದು ಅನ್ನುತ್ತಿದ್ದರೂ ಎಲ್ಲರಿಗೂ

ತಿಳಿಯದೆ ಶಾಸ್ತ್ರದ ಪ್ರಕಾರ, ದೈವಗ್ರಂಥಗಳ ಪ್ರಕಾರ ಇಬ್ಬರು ದೇವರುಗಳಿದ್ದಾರೆ. ಹಾಗಲ್ಲದೇ ಹೋದರೂ ದೇವರೇ ಇಬ್ಬರಾಗಿ ಇದ್ದಾನೆ. ಇದು ಯಾರಿಗೂ ತಿಳಿಯದ ಸತ್ಯ. ಆದ್ದರಿಂದ ಮನುಷ್ಯರಲ್ಲಿ ಕೆಲವರು ವಿವರ ತಿಳಿದು ಒಂದೇ ದೇವರು ಇಬ್ಬರಾಗಿದ್ದಾನೆಂದು ಒಪ್ಪಿಕೊಳ್ಳಬಹುದು. ಕೆಲವರು ದೈವಗ್ರಂಥದ ಪ್ರಕಾರ ಜ್ಞಾನವನ್ನು ಗ್ರಹಿಸದವರಾಗಿ ಅದುಹೇಗೆ ಸಾಧ್ಯ, ಇದನ್ನು ನಾವು ಒಪ್ಪಿಕೊಳ್ಳುವುದಿಲ್ಲ. ನಮ್ಮ ಲೆಕ್ಕದಲ್ಲಿ ದೇವರು ಒಬ್ಬನೇ ಎಂದು ಹೇಳುತ್ತಿರುತ್ತಾರೆ. ದೇವರು ಹೇಳಿರುವ ಜ್ಞಾನವನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದಕ್ಕೆ ಕೈಲಾಗದವರು ತಾವು ಗುರುಗಳೆಂದು ನಂಬಿರುವ ವ್ಯಕ್ತಿಗಳು ಹೇಳಿರುವ ಮಾತನ್ನೇ ನಂಬುತ್ತಿರುತ್ತಾರೆ. ಭೂಮಿಮೇಲೆ ಎಷ್ಟೋಜನ ಕೇಳುವವರಿರುವಾಗ, ಕೆಲವರೇ ಹೇಳುವವರಾಗಿ ಗುರುಗಳಾಗಿ ಚಲಾವಣೆ ಆಗುತ್ತಿದ್ದಾರೆ.

ಗುರುಗಳಾಗಿ ಹೆಸರಿಟ್ಟುಕೊಂಡು ಕೆಲವರು ಕೆಲವು ಮತಗಳಲ್ಲಿ ಜ್ಞಾನವನ್ನು ಹೇಳುತ್ತಿದ್ದರೇ, ಕೆಲವು ಮತಗಳಲ್ಲಿ ಮತ ಹಿರಿಯರೇ ಜ್ಞಾನವನ್ನು ನಿರ್ಣಯಿಸಿ ಹೇಳುವ ಬೋಧಕರಾಗಿ ಇದ್ದಾರೆ. ಕೆಲವು ಮತಗಳಲ್ಲಿ ಸಂಪ್ರದಾಯ ಗುರುಗಳಲ್ಲದೆ, ಮತಹಿರಿಯರಲ್ಲದೇ, ಮತದಲ್ಲಿ ಬೋಧಕನಾಗಿ ತರಭೇತಿ ಪಡೆದು ಯೋಗ್ಯತಾ ಪತ್ರವನ್ನು ಪಡೆದಿರುವ ಬೋಧಕರು ಗುರುಗಳಾಗಿದ್ದಾರೆ. ಮೂರು ಮತಗಳಲ್ಲಿಯೂ ದೇವರ ಜ್ಞಾನವನ್ನು ಬೋಧಿಸುವವರು ಹತ್ತರಷ್ಟಿರುವಾಗ, ಅವರು ಹೇಳಿರುವುದನ್ನು ಕೇಳಿ ಅದನ್ನೇ ನಿಜವೆಂದು ನಂಬಿ ನಡೆದುಕೊಳ್ಳುವವರು ಸುಮಾರು ಶೇ. ಎಂಭತ್ತರಷ್ಟಿದ್ದಾರೆ. ಉಳಿದ ಶೇ. ಐದು ಅಥವಾ ಹತ್ತು ಜನ ಯಾವ ಜ್ಞಾನವನ್ನು ತಿಳಿಯದವರಾಗಿ, ದೇವರು ಎನ್ನುವವರನ್ನು ದಡ್ಡರಂತೆ ಲೆಕ್ಕಿಸಿ ನೋಡುತ್ತಿದ್ದಾರೆ. ಶೇಕಡದಲ್ಲಿ ಹೆಚ್ಚಾಗಿ ಮನುಷ್ಯರು ಹೇಳುವುದನ್ನು ಕೇಳಿ ಸತ್ಯವನ್ನು ಅಸತ್ಯವಾಗಿ, ಅಸತ್ಯವನ್ನು ಸತ್ಯವಾಗಿ ಲೆಕ್ಕಿಸುತ್ತಿದ್ದಾರೆ. ಆದ್ದರಿಂದ ಬೋಧಕರಿಂದ ಬಹಳಜನ ಈದಿನ ಅಜ್ಞಾನದಲ್ಲಿದ್ದು ನಿಜವಾದ ಜ್ಞಾನದಲ್ಲಿದ್ದೇವೆಂದು ಕನಸು ಕಾಣುತ್ತಿದ್ದಾರೆ. ಅಂತಹವರು ಸ್ವತಃವಾಗಿ ದೈವಗ್ರಂಥಗಳಲ್ಲಿನ ವಿಷಯವನ್ನು ಗ್ರಹಿಸಲಾರರು. ಒಂದುವೇಳೆ ನಮ್ಮಂತಹವರು ಸತ್ಯವನ್ನು ಹೇಳಿದರೂ ಅವರು ಮೊದಲು ಕೇಳಿರುವುದನ್ನೇ ಸಮರ್ಥಿಸುತ್ತಿರುತ್ತಾರೆ.

ಹೊಸದಾಗಿ ತಿಳಿದಿರುವುದು ಸತ್ಯವಾದ ಜ್ಞಾನವಾದರೂ ಅವರು ಅದನ್ನು ವಿಶ್ವಾಸಿಸದೆ, ತಾವು ತಮ್ಮ ಬೋಧಕರ ಅಥವಾ ತಮ್ಮ ಮತ ಹಿರಿಯರು ಹೇಳಿದ ಮಾತುಗಳನ್ನೇ ದೊಡ್ಡದಾಗಿ ಹೇಳಿಕೊಳ್ಳುತ್ತಿರುವರು.

ಅಂಥವರು ತಾವು ತಮ್ಮ ಜ್ಞಾನವನ್ನೇ ದೊಡ್ಡದಾಗಿ ಹೇಳಿಕೊಳ್ಳುತ್ತಾ, ತಮಗೆ ಮೊದಲು ತಿಳಿದಿರುವುದೇ ಸತ್ಯವೆಂದು ಹಟಹಿಡಿದು ವಾದಿಸುತ್ತಿರುತ್ತಾರೆ. 'ದೇವರು ಒಬ್ಬನೇ ಸೃಷ್ಠಿಕರ್ತ' ಎಂದು ಅವರು ಸತ್ಯವನ್ನೇ ಹೇಳುತ್ತಿರುತ್ತಾರೆ ಹೊರತು, ಆತನು ಹೇಗೆ ಸೃಷ್ಠಿ ಕರ್ತ ಆಗಿದ್ದಾನೆಂಬ ಜ್ಞಾನ ವಿವರವನ್ನು ಮಾತ್ರ ತಿಳಿಯದೆ ಇದ್ದಾರೆ. ಜ್ಞಾನದಲ್ಲಿ ಸೂಕ್ಷ್ಮಜ್ಞಾನವನ್ನು ತಿಳಿಯುವುದಕ್ಕೆ ಬೇಕಾಗಿರುವ ಶ್ರದ್ಧೆ ಅವರಲ್ಲಿ ಇಲ್ಲದೇಹೋಗಿರುವುದರಿಂದ ಅವರಿಗೆ ಜ್ಞಾನವು ಸಂಪೂರ್ಣವಾಗಿ ತಿಳಿದಿಲ್ಲ. ಅವರು ಅಸಂಪೂರ್ಣ ಜ್ಞಾನಿಗಳಾಗಿಯೇ ಇರುತ್ತಾರೆ. ಆದ್ದರಿಂದ ಅವರಿಗೆ ದೇವರು **'ಸ್ಥಿರನು'** ಮತ್ತು **'ಅಸ್ಥಿರನೆಂದು'** ತಿಳಿದಿಲ್ಲ. ಹಾಗೆಯೇ ದೇವರು **'ಏಕಸ್ವರೂಪನೇ'** ಆದರೂ ಅನೇಕವಾಗಿ ಇದ್ದಾನೆಂದು ತಿಳಿದಿಲ್ಲ. ಹಾಗೆಯೇ ದೇವರು **'ನಿರಾಕಾರನು'** ಮತ್ತು **'ಸಾಕಾರನು'** ಎಂದು ತಿಳಿದಿಲ್ಲ. ದೇವರು ಕೆಲವು ಕಡೆ ಸ್ಥಿರನು ಇನ್ನು ಕೆಲವುಕಡೆ ಅಸ್ಥಿರನೆಂದೂ, ಹಾಗೆಯೇ ದೇವರು ಕೆಲವು ಕಡೆ ಏಕಸ್ವರೂಪನು ಕೆಲವು ಕಡೆ ಅನೇಕ ಸ್ವರೂಪನೆಂದು ಹಾಗೆಯೇ ದೇವರು ಕೆಲವು ಕಡೆ ನಿರಾಕಾರನು ಇನ್ನು ಕೆಲವು ಕಡೆ ಸಾಕಾರನು ಎಂಬ ಸತ್ಯವನ್ನು ಗ್ರಹಿಸಲಾರದೇ ಇದ್ದಾರೆ. ದೇವರು ಯಾವುದೂ ಅಲ್ಲದವನು ಎಂದಾಗ ಹಾಗೆಯೇ ಯಾವುದೂ ಆಗದೇ ಇರುವನು. ದೇವರು ಸ್ಥಿರನೆಂದು ಹೇಳಿದರೇ ದೇವರನ್ನು ಇದು ಎಂದು ನಿರ್ಣಯ ಮಾಡಿದಂತಾಗುವುದು. ಆದ್ದರಿಂದ ಸ್ಥಿರನಲ್ಲವೆಂದು ಹೇಳಬೇಕಾಗಿ ಬಂದಿದೆ. ಸ್ಥಿರನಲ್ಲದಿರುವಾಗ ಅದಕ್ಕೆ ವಿರುದ್ಧವಾದ ಅಸ್ಥಿರನೆಂದು ಹೇಳಬಹುದು. ಹಾಗೆ ಅಸ್ಥಿರನೇ ಎಂದು ಹೇಳಿದರೂ ದೇವರು ಇಂಥವನೆಂದು ತೀರ್ಮಾನಿಸಿ ಹೇಳಿದಂತಾಗುತ್ತದೆ. ಹಾಗೆ ಸಹ ಹೇಳಬಾರದು. ಆದ್ದರಿಂದ ಸ್ಥಿರನು ಅಸ್ಥಿರನೆಂದು ಎರಡೂ ಹೇಳಿದರೇ ಯಾವಕಡೆಯೂ ನಿರ್ಣಯಿಸಿಕೊಳ್ಳಲಾರದೇ ದೇವರು ಯಾವುದೂಅಲ್ಲ ಎಂಬ ವಾದನೆಯೊಳಗೆ ಬರುತ್ತಾರೆ. ಆದ್ದರಿಂದ **"ಸ್ಥಿರಾಸ್ಥಿರನು"**

ಎಂದೂ, **"ಏಕಾನೇಕ"** ಎಂದೂ, **'ಸಾಕಾರ ನಿರಾಕಾರ'** ಎಂದೂ ಪ್ರತೀಕಡೆ ಎರಡು ವಿಧಗಳು ಹೇಳಬೇಕಾಗಿ ಬಂದಿದೆ.

ನಾವು ದೇವರನ್ನು ಎರಡು ವಿಧಗಳು ಹೇಳುವುದೇ ಅಲ್ಲದೇ ಆತನು ನಿಜವಾಗಿ ಹಾಗೆಯೇ ಇದ್ದಾನೆ. ಸರ್ವವನ್ನು ಸೃಷ್ಠಿಸಿರುವ ಸೃಷ್ಠಿಕರ್ತ ದೇವರು ನಾಶವಾಗದವನು ಎಂದು ಯಾರಾದರೂ ಅಂದರೇ ಆ ಮಾತು ಕೂಡಾ ಸತ್ಯವಲ್ಲ ಎನ್ನುವಂತೆ ಎರಡನೆಯ ಪುರುಷನನ್ನು ಅಕ್ಷರ ಪುರುಷನು ಎಂದು ಹೇಳಿದ್ದಾನೆ. ಮೊದಲ ಪುರುಷನಾದ ದೇವರು ಅಕ್ಷರನು ಎಂದು ಹೇಳಿದರೇ, ಹಾಗಲ್ಲವೆಂದು ಎರಡನೆಯ ಪುರುಷನು ಕೂಡಾ ಅಕ್ಷರನೇ ಎಂದು ಭಗವದ್ಗೀತೆಯಲ್ಲಿ ಹೇಳುವುದಾಗಿದೆ. ಈ ವಿಧವಾಗಿ ದೇವರು **'ಸತ್ಯಾ ಸತ್ಯನು'**, **'ನಿತ್ಯಾನಿತ್ಯನು'**, **'ಕ್ಷರಾಕ್ಷರನು'**, **'ಆಕಾರನಿರ್ವಿಕಾರನು'**, **'ಸ್ಥಿರಾಸ್ಥಿರನು'**, **'ವ್ಯಕ್ತಾವ್ಯಕ್ತನು'**, **'ವ್ಯಯಾವ್ಯಯನು'** ಎಂದು ದ್ವಂದ್ವವಾಗಿ ಹೇಳಲ್ಪಡುತ್ತಿದ್ದಾನೆ. ದ್ವಂದ್ವವಾಗಿ ಹೇಳುವುದರಿಂದ ದೇವರು ಇಂಥವನೇ ಎಂದು ಮನುಷ್ಯ ನಿರ್ಣಯಿಸುವುದಕ್ಕೆ ಸಾಧ್ಯವಿಲ್ಲ. ಮನುಷ್ಯ ದೇವರನ್ನು ಹೇಗೆ ಭಾವಿಸಿಕೊಂಡರೂ, ಆ ಭಾವಕ್ಕೆ ದೇವರು ಅನ್ಯವಾಗಿ ಇದ್ದಾನೆ. ಆದ್ದರಿಂದ ದೇವರನ್ನು 'ಭಾವೋನ್ಯ' ಎಂದು ಹೇಳುತ್ತಿದ್ದೇವೆ. ಭಾವಕ್ಕೆ ಅನ್ಯವಾಗಿ ಇರುವವನೆಂದು **'ಭಾವೋನ್ಯ'** ಎಂದು ಹೇಳಿದ್ದಾರೆ.

**ಅವರ ಪ್ರಶ್ನೆ:- ಮುಸ್ಲಿಮ್ ಸಮಾಜದಲ್ಲಿ ದೇವರು ಒಬ್ಬನೇ ಎಂದು ಹೇಳಲ್ಪಡುತ್ತಿದೆ. ದೇವರಿಗೆ ಸಮಾನವಾಗಿ ಯಾರನ್ನೂ ನೋಡಬಾರದೆಂದೂ, ದೇವರ ವಿನಹ ಯಾರನ್ನೂ ಆರಾಧಿಸಬಾರದೆಂದೂ, ದೇವರಿಗೆ ಪಾಲುಗಾರರಾಗಿ ಯಾರನ್ನೂ ನೋಡಬಾರದೆಂದೂ, ಒಂದೇ ದೇವರನ್ನು ಹೊರತು ಎರಡನೆಯವನನ್ನು ಊಹೆಯಲ್ಲಿ ಸಹ ಹೋಲಿಸಬಾರದೆಂದು, ದೇವರನ್ನು ಅಲ್ಲಗಳೆದು ಇತರರನ್ನು ಪೂಜಿಸುವವರನ್ನು ಕಾಫೀರುಗಳೆಂದು, ದೇವರಿಗೆ ವಿರುದ್ಧವಾದವರೆಂದು, ಅಜ್ಞಾನಿಗಳೆಂದು ಹೇಳುವುದು ನಡೆಯುತ್ತಿದೆ. ಅವರ ನಂಬಿಕೆ ಪ್ರಕಾರ ಅವರ ವಾದನೆ ಸತ್ಯವೇ ಅಲ್ಲವೇ!**

**ನಮ್ಮ ಉತ್ತರ:-** ಅವರ ವಾದನೆ ಸತ್ಯವೇ! ದೇವರು ಒಬ್ಬನೇ ಆರಾಧ್ಯನು ಇತರರನ್ನು ಪೂಜಿಸಬಾರದು, ಆರಾಧಿಸಬಾರದು ಎಂಬಮಾತು ಕೂಡಾ ವಾಸ್ತವ ಜ್ಞಾನಕ್ಕೆ ಸಂಬಂಧಿಸಿರುವುದೇ. ದೇವರು ಎಲ್ಲಿ ಹೇಳಿದರೂ ತನ್ನ ಜ್ಞಾನವನ್ನೇ ಪ್ರಜೆಗಳಿಗೆ ಬೋಧಿಸುವನು. ಭಗವದ್ಗೀತೆಯಲ್ಲಿ ಹೇಳಿರುವ ಜ್ಞಾನವೇ ಉಳಿದ ಗ್ರಂಥಗಳಲ್ಲಿ ಇದೆ. ಅಂತಿಮ ದೈವಗ್ರಂಥ ಖುರಾನ್‌ನಲ್ಲಿ **'ದೇವರನ್ನು ಒಬ್ಬನನ್ನೇ ಆರಾಧಿಸಿರೆಂದು'** ಅನೇಕ ವಾಕ್ಯಗಳು ಇವೆ. ಹಾಗೆಯೇ ಭಗವದ್ಗೀತೆಯಲ್ಲಿ **"ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು"** ಎಂದು ಕೂಡಾ ಹೇಳಿದ್ದಾನೆ. ಅದರ ಭಾವವು **"ನೀನು ನನಗೇ ಭಕ್ತನಾಗಿ ಇರು, ನೀನು ನನ್ನನ್ನೇ ನಮಸ್ಕರಿಸು"** ಎಂದು ಇದೆ. ಭಗವದ್ಗೀತೆಯಲ್ಲಿ ಹೇಳಿರುವುದೇ ಖುರಾನ್‌ನಲ್ಲಿ ಹೇಳಿದ್ದಾರೆ. ಖುರಾನ್‌ನಲ್ಲಿ ಇರುವುದೇ ಭಗವದ್ಗೀತೆಯಲ್ಲಿ ಇದೆ. ಆದರೇ ಆ ಒಂದು ವಿಷಯವೇ ಆದರೇ ದೇವರು ಅಷ್ಟು ದೊಡ್ಡ ಗ್ರಂಥಗಳನ್ನು ಹೇಳಬೇಕಾದ ಕೆಲಸವಿಲ್ಲ. ಎರಡು ಮಾತುಗಳಲ್ಲಿ ದೇವರು ಒಬ್ಬನೇ, ಆತನನ್ನೇ ಆರಾಧಿಸಿ ಎಂದು ಹೇಳಬಹುದು. ಈ ಎರಡು ಮಾತುಗಳೇ ಅಲ್ಲದೇ ಎಷ್ಟೋ ಮಾತುಗಳೊಂದಿಗೆ, ಎಷ್ಟೋ ಜ್ಞಾನದೊಂದಿಗೆ ಗ್ರಂಥಗಳನ್ನು ಹೇಳುವುದಾಗಿದೆ. ಅವೆಲ್ಲಾ ತಿಳಿದರೇ ದೇವರು ಒಬ್ಬನೇ ಹೇಗೆ ಇದ್ದಾನೆಂದು ತಿಳಿಯಬಲ್ಲದು.

ಇಲ್ಲಿ ವಿಷಯವು ಚೆನ್ನಾಗಿ ಅರ್ಥವಾಗುವುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಒಬ್ಬ ಯಜಮಾನ ತನ್ನ ಬಳಿ ಕೆಲಸ ಮಾಡುವ ನಾಲ್ಕು ಗುಮಾಸ್ತರಿಗೆ ಒಬ್ಬೊಬ್ಬನಿಗೆ ಸಾವಿರ ರೂಪಾಯಿ ಹಣ ಕೊಟ್ಟು ನಾಲ್ಕು ಜನ ಮಾರುಕಟ್ಟೆಗೆ ಹೋಗಿ ದಿನಸಿ ಸಾಮಾನುಗಳನ್ನು ತರಲು ಹೇಳಿದನು. ಎಲ್ಲರಿಗೂ ಒಂದೇ ದಿನಸಿ ಸಾಮಾನುಗಳ ಪಟ್ಟಿ ಕೊಟ್ಟು ಕಳುಹಿಸಿದನು. ನಾಲ್ಕು ಜನ ಗುಮಾಸ್ತರು ಮಾರುಕಟ್ಟೆಗೆ ಹೋಗಿ ಯಜಮಾನ ಕೊಟ್ಟಿರುವ ಪಟ್ಟಿ ಪ್ರಕಾರ ದಿನಸಿ ಸಾಮಾನುಗಳನ್ನು ತಂದರು. ಯಜಮಾನ ಸಾವಿರ ರೂಪಾಯಿಗಳು ಹಣ ಕೊಟ್ಟಾಗಲೇ ಚೀಟಿಯಲ್ಲಿರುವ ದಿನಸಿ ಸಾಮಾನುಗಳಿಗೆ ಸಾವಿರ ರೂಪಾಯಿಗಳು ಖರ್ಚಾಗುತ್ತದೆ, ನೀವು ಹೋಗಿ ದಿನಸಿ ಸಾಮಾನುಗಳನ್ನು ತರಲೆಂದು ನಾಲ್ವರನ್ನು ಬಿಡಿಬಿಡಿಯಾಗಿ ಹೇಳಿ ಕಳುಹಿಸಿದನು. ಯಜಮಾನ

ಹೇಳಿದಂತೆಯೇ ನಾಲ್ಕು ಜನ ಮಾರುಕಟ್ಟೆಗೆ ಹೋಗಿ ಬೇರೆಬೇರೆಯಾಗಿಯೇ ದಿನಸಿ ಸಾಮಾನುಗಳನ್ನು ತಂದರು. ಸಾವಿರ ರೂಪಾಯಿಗಳ ಸಾಮಾನುಗಳನ್ನು ತರಲೆಂದು ಸಾವಿರ ರೂಪಾಯಿಗಳಿಗೆ ಸರಿಹೋಗುವ ದಿನಸಿ ಸಾಮಾನುಗಳ ಪಟ್ಟಿಯನ್ನು ಯಜಮಾನ ಕೊಟ್ಟು ಕಳುಹಿಸಿದನು. ನಾಲಕ್ಕು ಜನ ದಿನಸಿ ಸಾಮಾನುಗಳನ್ನು ತಂದರು. ಆದರೇ ಒಬ್ಬನಿಗೆ ಪಟ್ಟಿಯಲ್ಲಿನ ದಿನಸಿ ಸಾಮಾನುಗಳ ಖರ್ಚು 900 ರೂಪಾಯಿಗಳು ಆಗಿದೆ. ಎರಡನೆಯವನಿಗೆ 800 ರೂಪಾಯಿಗಳು ಆಗಿದೆ. ಮೂರನೆಯವನಿಗೆ 750 ರೂಪಾಗಳಾದರೇ, ನಾಲ್ಕನೆಯವನಿಗೆ 700 ರೂಪಾಯಿಗಳೇ ಆಗಿದೆ. ಅವರು ತಂದ ಸಾಮಾನುಗಳಿಗೆ ಯಾರಿಗೆ ಎಷ್ಟು ಖರ್ಚಾಗಿದೆಯೊ ಅವರಿಗೆ ತಿಳಿದಿದೆ. ಆದರೂ ಅವರು ಯಜಮಾನ ಪಟ್ಟಿಯಲ್ಲಿ ದಿನಸಿ ಸಾಮಾನುಗಳಿಗೆ ಸಾವಿರ ರೂಪಾಯಿಗಳು ಖರ್ಚಾಗುತ್ತವೆಂದು, ಮೊದಲೇ ಹೇಳಿ ಕಳುಹಿಸುವುದರಿಂದ ನನ್ನ ದಿನಸಿಸಾಮಾನುಗಳಿಗೆ ಸಾವಿರ ರೂಪಾಯಿಗ ಳಾಗಿವೆ ಎಂದು ಮೊದಲನೆಯವನು ಹೇಳಿದರೇ, ಉಳಿದವರು ಕೂಡಾ ಹಾಗೆಯೇ ಹೇಳಿದ್ದಾರೆ.

ಮೊದಲ ಗುಮಾಸ್ತ 900 ರೂ॥ ದಿನಸಿಸಾಮಾನುಗಳನ್ನೇ ಕೊಂಡಿದ್ದಾನೆ. ಅವನ ಹತ್ತಿರ ನೂರು ರೂಪಾಯಿಗಳು ಉಳಿದಿವೆ. ಆದರೂ ತಾನು ನಿಜಾಯಿತಿಯಿಂದ ಕೆಲಸ ಮಾಡಿದಂತೆ ತಾನು ಸಾವಿರ ರೂಪಾಯಿಗಳ ಸಾಮಾನು ತಂದಿದ್ದೇನೆಂದು ಹೇಳಿದ್ದಾನೆ. ತನ್ನ ಬಳಿ ಎಲ್ಲಾ ಹಣವೆಲ್ಲಾ ಖರ್ಚಾಗಲಿಲ್ಲವೆಂದು ನೂರು ರೂಪಾಯಿಗಳು ಉಳಿದಿದೆ ಎಂದು ಆತನಿಗೆ ತಿಳಿದಿದೆ. ಆದರೇ ತಾನು ನಿಜಾಯಿತಿ ಇರುವವನೆಂದು ಇತರರು ತಿಳಿಯುವಂತೆ, ಅವರನ್ನು ನಂಬಿಸುವುದಕ್ಕೆ ತಾನು ಸಕ್ರಮವಾಗಿ ಇಲ್ಲವೆಂದು ತಿಳಿದು ಕೂಡಾ ನಾನು ಸಕ್ರಮವಾಗಿ ಇದ್ದೇನೆಂದು, ತನ್ನಬಳಿ ಇರುವ ಸಾವಿರ ರೂಪಾಯಿಗಳ ಹಣಕ್ಕೆ ಸಾಮಾನುಗಳು ತಂದಿದ್ದೇನೆ ಎಂದು ಸುಳ್ಳು ಹೇಳಿದ್ದಾನೆ. ಮೊದಲನೆ ಯವನು ಯಾವ ಉದ್ದೇಶದಿಂದ ಹೇಗೆ ಹೇಳಿದ್ದಾನೊ, ಹಾಗೆಯೇ ಎರಡನೆಯವನು ಹೇಳಿದನು. ತಾವು ಸರಿಯಾದ ಗುಮಾಸ್ತರೆಂದು ನಂಬಿಸುವುದಕ್ಕೆ ನಾವು ಹೇಳಿದ ಕೆಲಸವನ್ನು ಸಕ್ರಮವಾಗಿ ಮಾಡಿದ್ದೇವೆಂದು ನಾಲ್ಕು ಜನ

ಹೇಳಿದರು. ಯಾರಬಳಿ ಎಷ್ಟು ಹಣ ಉಳಿದಿದೆ ಎಂಬ ವಿಷಯವು ಅವರಿಗೆ ತಿಳಿದಿದೆ. ಆದರೂ ನಾನೇ ಸ್ವಲ್ಪ ಸಕ್ರಮವಾಗಿ ಇದ್ದೇನೆ, ನನಗಿಂತಲೂ ಉಳಿದ ಮೂವರು ನನ್ನ ಹಾಗೆ ಕೂಡಾ ಇಲ್ಲ, ಅವರು ಇನ್ನೂ ಅಕ್ರಮಗಳಿಗೆ ಪಾಲ್ಗೊಂಡಿರುತ್ತಾರೆ ಎಂದು ಒಬ್ಬ ಅಂದುಕೊಂಡರೇ, ಉಳಿದವರು ಕೂಡಾ ಹಾಗೆಯೇ ಅಂದುಕೊಳ್ಳುವುದು ನಡೆದಿದೆ. ನಾಲ್ಕು ಜನರು ಯಜಮಾನನ ಬಳಿಗೆ ಹೋಗಿ ನೀವು ಹೇಳಿದ ಕೆಲಸವನ್ನು ಸಕ್ರಮವಾಗಿ ಮಾಡಿದ್ದೇವೆಂದು ಹೇಳಿದರು.

ನಾಲ್ಕು ಜನ ಗುಮಾಸ್ತರು ಹೇಳಿರುವ ಮಾತುಗಳನ್ನು ಕೇಳಿದ ಯಜಮಾನ ಅವರು ಹೇಳುವುದನ್ನೆಲ್ಲಾ ಕೇಳಿದನು. ನೀವೆಲ್ಲಾ ಸಕ್ರಮವಾಗಿ ಕೆಲಸ ಮಾಡಿದ್ದೀರೆಂದು ನಾಲ್ಕು ಜನರನ್ನು ಹೊಗಳಿ ಕಳುಹಿಸಿದನು. ಯಜಮಾನನನ್ನು ನಂಬಿಸಿದಕ್ಕೆ ಆ ನಾಲ್ಕು ಗುಮಾಸ್ತರು ಸಂತೋಷಪಟ್ಟು ಹೋದರು. ಅವರು ಮಾಡಿರುವ ಕೆಲಸ ಸಕ್ರಮವಾದುದಾ, ಅಕ್ರಮವಾದುದಾ ಎಂದು ಯಜಮಾನನಿಗೆ ತಿಳಿದಿದೆ. ಆದರೂ ಅವರು ಹೇಳುವುದನ್ನೆಲ್ಲಾ ಕೇಳಿ ತನಗೆ ಏನೂ ತಿಳಿಯದಂತೆ ಎಲ್ಲರನ್ನೂ ಹೊಗಳಿ ಕಳುಹಿಸಿದನು. ಯಜಮಾನನಿಗೆ ತನ್ನ ನಾಲಕ್ಕು ಗುಮಾಸ್ತರು ಯಾರ್‍ಯಾರು ಎಷ್ಟೆಷ್ಟು ಮೋಸಮಾಡಿರುವುದು ಚೆನ್ನಾಗಿ ತಿಳಿದಿದೆ. ಆದರೂ ತಿಳಿಯದಂತೆಯೇ ಇದ್ದು ಯಜಮಾನ ಯಾರನ್ನೂ ದಂಡಿಸಲಿಲ್ಲ. ಅದರಿಂದ ನಾಲ್ಕು ಜನ ಗುಮಾಸ್ತರು ತಾವು ಸಕ್ರಮವಾದವರೇ ಎನ್ನುವಂತೆ ಜಂಬದಿಂದಿದ್ದರು. ಮಾರ್ಕೆಟ್‌ನಲ್ಲಿರುವ ಅಂಗಡಿಗಳೆಲ್ಲಾ ಯಜಮಾನನವೇ ಎಂದು ನಾಲ್ಕು ಜನ ಗುಮಾಸ್ತರಿಗೆ ತಿಳಿದಿಲ್ಲ. ನಾಲ್ಕು ಜನ ಎಷ್ಟೆಷ್ಟು ದಿನಸುಗಳು ಕೊಂಡಿರುವುದು, ಎಷ್ಟೆಷ್ಟು ಉಳಿಸಿಕೊಂಡಿರುವುದು ಎಲ್ಲಾ ಯಜಮಾನನಿಗೆ ಗುಮಾಸ್ತರು ಮನೆಗೆ ಬಾರದ ಮುನ್ನವೇ ತಿಳಿದಿದೆ. ಆದರೂ ಆತನು ಮೌನವಾಗಿ ಇರುವುದರಿಂದ ಯಜಮಾನ ತಮ್ಮನ್ನು ಸಕ್ರಮವಾದವರಂತೆ ನಂಬಿದ್ದಾರೆಂದು ಅವರು ನಾಲ್ಕುಜನ ಅಂದುಕೊಳ್ಳುವುದು ನಡೆದಿದೆ.

ಆರು ತಿಂಗಳು ಕಳೆದ ನಂತರ 'ತಿಂಗಳಿಗೆ 50 ಸಾವಿರ ರೂಪಾಯಿಗಳ ಆದಾಯ' ಎಂಬ ಒಂದು ಪೇಪರ್ ಪ್ರಕಟಣೆ ಬಂದಿತು. ಆ ಪ್ರಕಟಣೆಯನ್ನು

ನೋಡಿದ ನಾಲ್ಕು ಜನ ಗುಮಾಸ್ತರು ತಿಂಗಳಿಗೆ ಐದುಸಾವಿರ ಸಂಬಳ ಕೊಡುವ ಯಜಮಾನನ್ನು ಬಿಟ್ಟು 50 ಸಾವಿರ ಲಾಭ ಬರುವ ಕೆಲಸದಲ್ಲಿ ಸೇರಿಹೋದರು. ಅವರು ಸೇರಿರುವುದು ಚಿಟ್‌ಫಂಡ್ ಕಂಪೆನಿ ಆಗಿರುವುದರಿಂದ ಒಂದು ಆರು ತಿಂಗಳು ಅದರಲ್ಲಿ ಕೆಲಸ ಮಾಡಿದ ನಂತರ ಆ ಕಂಪನಿ ನಿಂತುಹೋಗಿದೆ. ಆಗ ನಾಲ್ಕು ಜನ ಬೀದಿಗೆ ಬಿದ್ದರು. ಕೊನೆಗೆ ನೋಡಿಕೊಂಡರೇ ಗತದಲ್ಲಿ ತಾವು ಮೋಸ ಮಾಡಿದ ಯಜಮಾನ ಏನೂ ಅನ್ನದೇ ಹೋದರೂ, ಪ್ರಸ್ತುತ ತಾವು ಕೆಲಸ ಮಾಡುತ್ತಿದ್ದ ಕಂಪನಿಯೇ ತಮಗೆ ಆಸೆ ತೋರಿಸಿ ಮೋಸ ಮಾಡಿತು. ಕೊನೆಗೆ ನಡೆದಿರುವುದು ನೋಡಿದರೇ ಪೇಪರ್ ಪ್ರಕಟಣೆಯೊಂದಿಗೆ ಅವರು ಮೊದಲ ಯಜಮಾನನ್ನು ಬಿಡುವಂತೆ ದೇವರೇ ಮಾಡಿದ್ದಾನೆ. ಮೊದಲ ಯಜಮಾನ ಆಗಾಗ ಒಂದುಮಾತು ಹೇಳುತ್ತಿದ್ದನು. **"ನನ್ನನ್ನು ಮೋಸ ಮಾಡುವವನು ಯಾರಾದರೂ ಅವನಿಗೆ ಅವನೇ ಮೋಸಹೋಗುವನು"** ಎಂದು ಹೇಳುತ್ತಿದ್ದನು. ಹಾಗೆಯೇ ಯಜಮಾನನಿಗೆ ಎಲ್ಲಾ ತಿಳಿದರೂ, ಯಜಮಾನ ಅವರ ಮೋಸವನ್ನು ಕುರಿತು ಹೊರಗೆ ಹೇಳಲಿಲ್ಲ. ಮೋಸ ಮಾಡುವವನು ಹೆತ್ತಮಗನಾದರೂ ತನಗೆ ದೂರವಾಗಿ ಹೋಗುವುದು ನಡೆಯುತ್ತದೆಂದು ಆತನಿಗೆ ಮೊದಲೇ ತಿಳಿದಿದೆ. ಇಲ್ಲಿಯವರೆಗು ಗುಮಾಸ್ತರಿಗೆ ನಡೆದ ವಿಷಯವನ್ನು ವಿಶ್ಲೇಷಿಸಿ ನೋಡಿದರೇ, ದೇವರ ಮಾರ್ಗದಲ್ಲಿ ಅಂಥವರು ಇದ್ದಾರೆಂದು ತಿಳಿಯುತ್ತಿದೆ.

ಯಜಮಾನನನ್ನು ದೇವರಾಗಿ, ಯಜಮಾನನ ಕೆಳಗೆ ಕೆಲಸ ಮಾಡುವ ನಾಲಕ್ಕುಜನ ಗುಮಾಸ್ತರನ್ನು ನಾಲಕ್ಕು ಮತದವರಾಗಿ ಹೋಲಿಸಿಕೊಂಡು ನೋಡಿದರೇ, ಮನುಷ್ಯರಿಗೆ ದೇವರು ಸಮಾನವಾಗಿ ಜ್ಞಾನವನ್ನು ಕೊಟ್ಟಹಾಗೆ ಯಜಮಾನ ನಾಲ್ಕು ಜನ ಗುಮಾಸ್ತರಿಗೆ ಸಮಾನವಾಗಿ ಹಣ ಕೊಟ್ಟಿದ್ದಾನೆಂದು ಕೊಳ್ಳೋಣ. ದೇವರು ಕೊಟ್ಟ ಜ್ಞಾನವನ್ನು ಮನುಷ್ಯರು ಪೂರ್ತಿಯಾಗಿ ತಮ್ಮ ತಲೆಯೊಳಗೆ ಏರಿಸಿಕೊಳ್ಳಲಿಲ್ಲ . ಹಾಗೆಯೇ ಯಜಮಾನ ಕೊಟ್ಟ ಹಣವನ್ನು ಗುಮಾಸ್ತರು ಉಳಿಯದಂತೆ ಪೂರ್ತಿಯಾಗಿ ಖರ್ಚು ಮಾಡಲಿಲ್ಲ. ದೇವರ ಜ್ಞಾನವು ತಲೆಗೇರದಂತೆ ಸ್ವಲ್ಪ ಹೊರಗೆ ಉಳಿದುಹೋದಂತೆ, ಯಜಮಾನ

ಕೊಟ್ಟ ಧನ ಪೂರ್ತಿ ವಿನಿಯೋಗಿಸಲ್ಪಡದೆ ಹೊರಗೆ ಸ್ವಲ್ಪ ಉಳಿದು ಹೋಗಿದೆ. ಎಲ್ಲ ಮತಗಳವರಿಗೆ ದೇವರ ಜ್ಞಾನವು ಪೂರ್ತಿ ಅರ್ಥವಾಗದೇ ಉಳಿದು ಹೋದರೂ, ಆ ವಿಷಯವು ಯಾರಿಗೂ ತಿಳಿಯದಂತೆ ದೇವರು ಹೇಳಿರುವ ಜ್ಞಾನವೆಲ್ಲಾ ನಮಗೆ ಚೆನ್ನಾಗಿ ಅರ್ಥವಾಗಿ, ನಮ್ಮ ತಲೆಗೇರಿದೆ ಎಂದು ಹೇಳಿದಂತೆ, ಹೊರಗೆ ಗುಮಾಸ್ತರು ಕೂಡಾ ಯಜಮಾನ ಕೊಟ್ಟ ಹಣವೆಲ್ಲಾ ಪೂರ್ತಿ ಸಾಮಾನುಗಳಿಗೆ ಖರ್ಚಾಗಿಹೋಗಿದೆ. ನಮ್ಮ ಬಳಿ ಉಳಿಯಲಿಲ್ಲ ಎಂದು ಹೇಳುತ್ತಿದ್ದಾರೆ. ದೇವರು ಕೊಟ್ಟ ಜ್ಞಾನವು ಒಂದೊಂದು ಮತಕ್ಕು ಒಂದೊಂದು ವಿಧವಾಗಿ ಅರ್ಥವಾದಂತೆ, ನಾಲಕ್ಕುಜನ ಗುಮಾಸ್ತರು ಯಜಮಾನನ ಹಣವನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ಖರ್ಚು ಮಾಡಿದರು. ಯಾರೂ ಪೂರ್ತಿ ಖರ್ಚು ಮಾಡದಂತೆ ಎಲ್ಲ ಮತಗಳವರು ದೇವರ ಜ್ಞಾನವನ್ನು ಯಾರೂ ಪೂರ್ತಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ. ದೇವರಿಗೆ ಮನುಷ್ಯರು ಮಾಡುವ ಅಜ್ಞಾನ ಅರ್ಥವಾದರೂ, ದೇವರು ಯಾವ ಮತದವರನ್ನು ಪ್ರತ್ಯಕ್ಷವಾಗಿ ಏನೂ ಅನ್ನದಂತೆ ತನ್ನ ಗುಮಾಸ್ತರ ಅವಿನೀತಿ ಅರ್ಥವಾದರೂ, ಯಜಮಾನ ಅವರನ್ನು ಏನೂ ದಂಡಿಸಲಿಲ್ಲ. ಅಜ್ಞಾನವನ್ನು ಅನುಸರಿಸುವವರಿಗೆ ದೇವರು ಅದೇ ದಾರಿಯಲ್ಲಿ ಹೋಗುವಂತೆ, ಅವರ ಕೆಲಸಗಳು ಆತಂಕವಿಲ್ಲದೇ ಸಾಗಿಹೋಗುವಂತೆ ಮಾಡುತ್ತಿದ್ದಾನೆ. ಅದೇ ವಿಧವಾಗಿ ಅವಿನೀತಿಗೆ ಪಾಲ್ಗೊಂಡ ತನ್ನ ಗುಮಾಸ್ತರು ಅದೇ ಮಾರ್ಗದಲ್ಲಿ ಹೋಗುವಂತೆ, ಯಜಮಾನ ಅವರನ್ನು ಹೊಗಳಿ ಬಹಳ ಚೆನ್ನಾಗಿ ಕೆಲಸ ಮಾಡಿದ್ದೀರೆಂದು ಹೇಳಿದನು. ಪ್ರತಿ ಮತದವರು ತಾವೇ ನಿಜವಾದ ಜ್ಞಾನಿಗಳು ಅಂದುಕೊಂಡಹಾಗೆ, ಗುಮಾಸ್ತರೆಲ್ಲರೂ ಯಾರಿಗೆ ಅವರು ತಾವೇ ನಿಜವಾದ ನಿಜಾಯಿತಿ ಯಿರುವವರೆಂದು ಅಂದುಕೊಂಡರು. ದೇವರು ತನಗಿಷ್ಟ ವಿಲ್ಲದವರನ್ನು ಅಪಮಾರ್ಗದೊಳಗೆ ಕಳುಹಿಸುವನು, ತನಗಿಷ್ಟವಾದವರನ್ನು ದೈವಮಾರ್ಗದೊಳಗೆ ಕಳುಹಿಸುವನು. ಅದೇ ವಿಧವಾಗಿ ಯಜಮಾನನಿಗೆ ಮೋಸಗಾರರು ಎಂದು ತಿಳಿದ ನಂತರ ಅವರು ಇಷ್ಟವಿಲ್ಲ ದವರಾದ್ದರಿಂದ ತನ್ನನ್ನು ಬಿಟ್ಟು ಅವರೇ ಹೋಗುವಂತೆ ಯಜಮಾನ ನನ್ನು ಬಿಟ್ಟು ಗುಮಾಸ್ತರೇ ತಮಗೆ ತಾವಾಗಿ ಹೋದರು. "ದೇವರು ಎಲ್ಲದಕ್ಕೂ

ಅಧಿಪತಿ, ಸರ್ವವೂ ಆತನ ಅಧೀನದಲ್ಲಿ ಇವೆ" ಎನ್ನುವಂತೆ ಯಜಮಾನ ಮಾರುಕಟ್ಟೆಯಲ್ಲಿನ ಅಂಗಡಿಗಳಿಗೆ ಕೂಡಾ ಯಜಮಾನನಾಗಿ ಇದ್ದಾನೆ. ಅಜ್ಞಾನಿಗಳಿಗೆ ದೇವರು ಎಷ್ಟು ದೊಡ್ಡವನೆಂದು ತಿಳಿಯದಂತೆ, ಗುಮಾಸ್ತರಿಗೆ ಯಜಮಾನ ಮಾರುಕಟ್ಟೆಯಲ್ಲಿನ ಅಂಗಡಿಗಳಿಗು ಕೂಡಾ ಯಜಮಾನನೇ ಎಂಬ ವಿಷಯವು ತಿಳಿದಿಲ್ಲ. ಗುಮಾಸ್ತರು ತಾವು ಅವಿನೀತಿಯವರಾದರೂ ನಾವೇ ಎಲ್ಲರಿಗಿಂತಲೂ ನೀತಿಯಿರುವವರೆಂದು ಯಾರಿಗೆ ಅವರು ಅಂದು ಕೊಂಡಹಾಗೆ, ಈದಿನ ಪ್ರತೀ ಮತದವರು ತಮಗೆ ತಾವು ಎಲ್ಲರಿಗಿಂತಲೂ ಜ್ಞಾನದಲ್ಲಿ ಅಧಿಕರೆಂದು ಅಂದುಕೊಳ್ಳುತ್ತಿದ್ದಾರೆ. ನೂರು ರೂಪಾಯಿಗಳ ಅವಿನೀತಿವರನು, ಎರಡುನೂರು ಅವಿನೀತಿಗಾರನು, ಮುನ್ನೂರು ರೂಪಾಯಿಗಳ ಅವಿನೀತಿವರನು, ಎಲ್ಲರೂ ನಾವು ಇತರರಿಗಿಂತಲೂ ಸಕ್ರಮವಾದವರೇ ಎಂದು ಅಂದುಕೊಂಡಂತೆ, ತಮಲ್ಲಿ ಸ್ವಲ್ಪ ಜ್ಞಾನ ಲೋಪವಿರುವವರು, ಹೆಚ್ಚುಜ್ಞಾನ ಲೋಪವಿರುವವರು, ಇನ್ನೂ ಹೆಚ್ಚು ಅಜ್ಞಾನವಿರುವವರು ತಾವೇ ಸ್ವಚ್ಛವಾದ ಜ್ಞಾನಿಗಳೆಂಬ ಭ್ರಮೆಯಲ್ಲಿದ್ದಾರೆ. ಈದಿನ ಮೂರು ಮತಗಳಲ್ಲಿ ಅಜ್ಞಾನ ಜಾಗಮಾಡಿಕೊಂಡಿದೆಯೆಂದು ದೇವರಿಗೆ ಚೆನ್ನಾಗಿ ತಿಳಿದಿದೆ.

ಮನುಷ್ಯರಲ್ಲಿ ಮತಗಳಲ್ಲಿ ಯಾರಬಳಿ ಎಷ್ಟು ಜ್ಞಾನವಿದೆಯೋ ದೇವರಿಗೆ ತಿಳಿದಿರುವುದರಿಂದ, ಆತನು ಮೌನವಾಗಿದ್ದು ಅಂಥವರನ್ನು ದೇವರ ಜ್ಞಾನಕ್ಕೆ ದೂರ ಮಾಡುವನು. ದೇವರ ಇಚ್ಛೆಯಿಂದ ಕೆಲಸಮಾಡುವ ಮಾಯೆ ಮನುಷ್ಯರನ್ನು ಆವರಿಸಿ, ಯಾವುದೋ ಒಂದು ನೆಪದಿಂದ ಆ ಮನುಷ್ಯರನ್ನು ದೇವರಿಂದ, ದೇವರ ಜ್ಞಾನದಿಂದ ದೂರ ಮಾಡುವುದು. ಗುಮಾಸ್ತರು ಹಣದ ಆಸೆಯಿಂದ ತಮ್ಮ ಯಜಮಾನನನ್ನು ಅವರೇ ಬಿಟ್ಟುಹೋಗುವಂತೆ, ಅಜ್ಞಾನಿಗಳಾದವರು ವಿಷಯಾಪೇಕ್ಷೆಯಿಂದ ದೇವರ ಜ್ಞಾನಕ್ಕೆ ದೂರವಾಗಿ ಹೋಗುತ್ತಿದ್ದಾರೆ. ಒಬ್ಬ ನೀತಿವಂತನು ಮತ್ತೊಬ್ಬ ಅವನೀತಿವಂತನ ಮೇಲೆ ಬೆರಳೆತ್ತಿ ತೋರಿಸಬಹುದು. ಒಬ್ಬ ಅವನೀತಿವಂತನು ಮತ್ತೊಬ್ಬ ಅವಿನೀತಿ ವಂತನನ್ನು ಬೆರಳೆತ್ತಿ ತೋರಲಾರನು ಅಲ್ಲವೇ! ಹಾಗೆ ತೋರಿದರೂ ಅದು ಅಸೂಯೆಯಿಂದ ಹೊರತು ಬೇರೆಅಲ್ಲವೆಂದು ಉಳಿದವರಿಗೆ ಅರ್ಥ ವಾಗುವುದು.

ಒಳ್ಳೆಯವನು ಕಳ್ಳನನ್ನು ಕಳ್ಳ ಎಂದರೂ ಅದರಲ್ಲಿ ಪದ್ಧತಿ ಇದೆ. ಹಾಗಲ್ಲದೇ ತಾನು ದೊಡ್ಡಕಳ್ಳನಾಗಿ ಇತರರನ್ನು ಕಳ್ಳರೆಂದು ಹೇಳುವುದು ಪದ್ಧತಿಯಲ್ಲ ಅಲ್ಲವೇ!. ಅದನ್ನು ಕೇಳಿದವರು ಯಾರಾದರೂ ಅಸೂಯೆಯಿಂದ ಮಾತನಾಡುವ ಮಾತೆಂದು ಎನ್ನುವರೇ ಹೊರತು, ಅದು ಸರಿಯಾದ ಆರೋಪಣೆ ಅಲ್ಲವೆಂದು ಹೇಳಬಹುದು. ಅದೇ ವಿಧವಾಗಿ ಒಬ್ಬ ಜ್ಞಾನಿ ಅಜ್ಞಾನಿಯನ್ನು ನೋಡಿ ನೀನು ಅಜ್ಞಾನಿ ಎಂದರೂ ಸರಿಹೋಗುತ್ತದೆ, ಆತನು ಅಂದಿರುವುದು ಸತ್ಯವೇ. ಹಾಗಲ್ಲದೇ ಒಬ್ಬ ಅಜ್ಞಾನಿ ಮತ್ತೊಬ್ಬನನ್ನು ಅಜ್ಞಾನಿ ಎನ್ನುವುದು ಹಾಸ್ಯಾಸ್ಪದವಾಗಿ ಇರುತ್ತದೆ. ಈದಿನ ದೇವರು ಒಬ್ಬನೇ ಎಂದು ಹೇಳುವವರು ವಿಗ್ರಹ ಆರಾಧಕರನ್ನು ಅಜ್ಞಾನಿಗಳೆಂದು ವಿಮರ್ಶಿಸುತ್ತಿದ್ದಾರೆ. ವಿಗ್ರಹಾರಾಧಕರನ್ನು ಅಜ್ಞಾನಿಗಳೆಂಬ ಮಾತು ಭಗವದ್ಗೀತೆಯಲ್ಲಿ ಸಹ ಇದೆ. ದೈವಜ್ಞಾನ ತಿಳಿದವರು ಯಾರಾದರೂ ಇತರ ದೇವತೆಗಳನ್ನು ಪೂಜಿಸುವವರನ್ನು ಅಜ್ಞಾನಿಗಳೆಂದು ಹೇಳಬಹುದು. ಆದರೇ ಮೊದಲಿಗೆ ತಾನು ಜ್ಞಾನಿ ಅಲ್ಲದೇ ಇತರರನ್ನು ಅಜ್ಞಾನಿಗಳೆನ್ನುವುದು ಪದ್ಧತಿಯಲ್ಲ. ಅದನ್ನು ದೇವರು ಸಹ ಒಪ್ಪಿಕೊಳ್ಳುವುದಿಲ್ಲ. ಧನವಿರುವವನು ಧನವಿಲ್ಲದವನನ್ನು ಬಡವನೆಂದು ಹೇಳಬಹುದು. ಧನವಿಲ್ಲದವನು ಇತರರನ್ನು ಬಡವರು ಎಂದರೇ ಮಧ್ಯದಲ್ಲಿರುವವರು ನಿನ್ನ ಬಳಿ ಧನವೆಷ್ಟಿದೆ? ನೀನು ಧನಿಕನಾ? ಎಂದು ಪ್ರಶ್ನಿಸಬಲ್ಲರು. ಆದ್ದರಿಂದ ಯಾವ ಮಾತು ಮಾತನಾಡಿದರೂ ಅದು ಅರ್ಥಸಹಿತವಾಗಿ ಇರಬೇಕೆ ಹೊರತು, ಅರ್ಥರಹಿತವಾಗಿ ಇರಬಾರದು.

ಧನಿಕನೆಂದು ಹೆಸರಿರುವಾಗ ಅವನಬಳಿ ಧನವಿರಬೇಕು. ಧನವಿಲ್ಲದೇ ನಾನು ಧನಿಕನೆಂದರೇ ಅವನನ್ನು ಯಾರೂ ಒಪ್ಪಿಕೊಳ್ಳುವುದಿಲ್ಲ. ಧನದ ಬೆಲೆ ತಿಳಿದಿರುವವನು ಧನಿಕನೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಧನವಿರುವಾಗಲೇ ಅವನನ್ನು ಧನಿಕನೆಂದು ಹೇಳಬಹುದು. ಸಿನಿಮಾ ಟಿಕೆಟ್ ಬೆಲೆ ತಿಳಿದಷ್ಟು ಮಾತ್ರಕ್ಕೆ ಸಿನಿಮಾ ನೋಡುವುದಕ್ಕೆ ಸಾಧ್ಯವಿಲ್ಲ. ಸಿನಿಮಾ ಟಿಕೆಟ್ ಇದ್ದಾಗಲೇ ಸಿನಿಮಾ ಹಾಲ್‌ನೊಳಗೆ ಹೋಗಿ ಸಿನಿಮಾ ನೋಡಬಹುದು. ಹಾಗೆಯೇ M.L.A ಟಿಕೆಟ್ ಬೆಲೆ ತಿಳಿದಷ್ಟು ಮಾತ್ರ ಆತನು M.L.A ಯಾಗಿ ಪೋಟೀ ಮಾಡುವುದಕ್ಕೆ ಸಾಧ್ಯವಿಲ್ಲ. M.L.Aಯಾಗಿ ಪೋಟೀಮಾಡುವುದಕ್ಕೆ ಪಾರ್ಟೀ

ನಾಯಕನ ಬಳಿಯಿಂದ ಟಿಕೆಟ್ ಪಡೆದಿರಬೇಕು. ಹಾಗೆಯೇ ದೇವರು ದೊಡ್ಡವನೆಂದು, ದೇವರು ಒಬ್ಬನೇ ಎಂದು ತಿಳಿದಷ್ಟು ಮಾತ್ರಕ್ಕೆ ಜ್ಞಾನಿ ಆಗಲಾರನು, ಮೋಕ್ಷ ಹೊಂದಲಾರನು. ಸಿನಿಮಾ ಟಿಕೆಟ್ ಇಲ್ಲದೆ ಸಿನಿಮಾ ಹಾಲ್ ಗೇಟಿನಲ್ಲಿ ಪ್ರವೇಶ ಇಲ್ಲದಂತೆ, ಜ್ಞಾನವೆಂಬ ಟಿಕೆಟ್ ಇಲ್ಲದಿರುವಾಗ ಮೋಕ್ಷವೆಂಬ ಗೇಟಿನೊಳಗೆ ಯಾರೂ ಪ್ರವೇಶಿಸಲಾರರು.

ಸರ್ವ ಪ್ರಪಂಚಕ್ಕೆ ದೇವರು ಒಬ್ಬನೇ. ಆದರೇ ಆ ವಿಷಯವನ್ನು ಹೇಳುವುದಕ್ಕೆ ದೊಡ್ಡ ಜ್ಞಾನ ಅವಶ್ಯವಿಲ್ಲ. ಒಂದು ಮತದಲ್ಲಿ ಹುಟ್ಟಿರುವ ಚಿಕ್ಕಮಗು ಕೂಡಾ ಅವರ ಮತಸ್ಥರೆಲ್ಲರೂ ಹೇಳುವ ಮಾತನ್ನೇ ಹೇಳುವನು. ಮುಸ್ಲಿಮ್ ಮತದಲ್ಲಿ ಹುಟ್ಟಿರುವ ಎಂಟು ವರ್ಷಗಳ ಚಿಕ್ಕಮಗು ಕೂಡಾ ದೇವರು ಒಬ್ಬನೇ ಎಂದು, ನಾವು ಬೇರೆ ದೇವತೆಗಳನ್ನು ಮುಗಿಯುವುದಿಲ್ಲ ಎಂದು ಹೇಳಬಲ್ಲನು. ಅದು ಅವರ ಮತದೊಂದಿಗೆ ಬಂದಿರುವ ಮಾತೆ ಹೊರತು, ವಾಸ್ತವವಾಗಿ ಆ ಮಗುವಿಗು ದೇವರಿಗು ಸಂಬಂಧಿಸಿರುವ ಜ್ಞಾನವಾಗಲೀ, ವಿಗ್ರಹಗಳಾದ ಇತರೆ ದೇವತೆಗಳಿಗೆ ಸಂಬಂಧಿಸಿದ ಅಜ್ಞಾನ ವಾಗಲೀ ತಿಳಿದಿಲ್ಲ. ದೇವರು ಒಬ್ಬನೇ ಎಂದು ಹೇಳುವ ಮಾತು ಬಹಳ ಸುಲಭ. ಆ ಮಾತು ಯಾರಾದರೂ, ಯಾವಾಗಾದರೂ ಹೇಳಬಲ್ಲರು. ಆದರೇ ದೇವರ ಜ್ಞಾನವು ಸಮುದ್ರವಂತಹದ್ದು, ಅಪಾರವಾದದ್ದು. ಆದ್ದರಿಂದ ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿಯುವುದು ಬಹಳ ಕಷ್ಟ. ಯಾರಾದರೂ ಕಷ್ಟಪಟ್ಟು ದೇವರ ಜ್ಞಾನ ತಿಳಿದಾಗ, ದೇವರು ಹೇಗೆ ದೊಡ್ಡವನೋ, ದೇವರು ಹೇಗೆ ಒಬ್ಬನಾಗಿ ಇದ್ದಾನೋ, ದೇವರು ಹೇಗೆ ವಿಗ್ರಹವಲ್ಲವೋ ತಿಳಿಯುವುದು. ಆಗ ದೇವತಾರಾಧಕರನ್ನು, ವಿಗ್ರಹಾರಾಧಕರನ್ನು ಅಜ್ಞಾನಿಗಳು ಎಂದು ಹೇಳಬಹುದು. ತನ್ನಬಳಿ ಜ್ಞಾನವಿದೆಯೆಂದು ನಿರೂಪಿಸಿಕೊಂಡು ಮೋಕ್ಷವನ್ನು ಹೊಂದಬಹುದು.

ಹಾಗಲ್ಲದೇ ಒಬ್ಬ ಮನುಷ್ಯ ವಿಗ್ರಹಾರಾಧನೆಗೆ ದೂರವಾಗಿರುವ ಒಂದು ಮತದಲ್ಲಿ ಹುಟ್ಟಿದಷ್ಟುಮಾತ್ರಕ್ಕೆ ಅವನಿಗೆ ದೇವರ ಜ್ಞಾನವು ತಿಳಿಯದೇನೇ ಅವನು ಜ್ಞಾನಿ ಆಗಲಾರನು, ಆದ್ದರಿಂದ ವಿಗ್ರಹಾರಾಧನೆಗೆ ದೂರವಾಗಿರುವ

ಮತದಲ್ಲಿ ಹುಟ್ಟಿರುವವರೆಲ್ಲರೂ ಜ್ಞಾನಿಗಳೂ ಅಲ್ಲ. ವಿಗ್ರಹಾರಾಧನೆ ಮಾಡುವ ಮತದಲ್ಲಿ ಹುಟ್ಟಿರುವವರೆಲ್ಲರೂ ಅಜ್ಞಾನಿಗಳೂ ಅಲ್ಲ. ಹಿಂದೂಗಳು ಹೆಚ್ಚಾಗಿ ವಿಗ್ರಹಾರಾಧನೆ ಮಾಡುವವರಿದ್ದಾರೆ. ಅಷ್ಟುಮಾತ್ರಕ್ಕೆ ಆ ಮತದಲ್ಲಿನವರೆಲ್ಲರನ್ನು ಅಜ್ಞಾನಿಗಳೆಂದು ಹೇಳಲಾರೆವು. ಭಗವದ್ಗೀತೆಯಲ್ಲಿ ಅನ್ಯದೇವತಾರಾಧನೆಯನ್ನು ಖಂಡಿಸುವ ಜ್ಞಾನವಿದೆ. ಭಗವದ್ಗೀತೆಯನ್ನು ಅನುಸರಿಸುವವರು ಯಾರೂ ವಿಗ್ರಹಾರಾಧನೆ ಮಾಡುವುದಿಲ್ಲ. ಆದ್ದರಿಂದ ಒಂದು ಮತವನ್ನು ಅಜ್ಞಾನವೆಂದು ಮತ್ತೊಂದು ಮತವನ್ನು ಜ್ಞಾನವೆಂದು ಹೇಳಲಾರೆವು. ಏಕೆಂದರೇ! ಮೂರು ಮತಗಳಲ್ಲಿ ಒಂದೇ ಜ್ಞಾನವಿದೆ. ಭಗವದ್ಗೀತೆಯಲ್ಲಿ ಹೇಳಿರುವ ಶ್ಲೋಕಗಳ ಸಾರಾಂಶವೇ ಉಳಿದ ಎರಡು ಗ್ರಂಥಗಳಲ್ಲಿ ಇದೆ. ಭಗವದ್ಗೀತೆ ಮೊದಲು ತಯಾರಾದ ಪ್ರಥಮ ದೈವಗ್ರಂಥ. ನಂತರ ಎರಡು ಗ್ರಂಥಗಳು ಬಂದಿವೆ. ಅದರಲ್ಲಿ ಕೊನೆಯ ದೈವಗ್ರಂಥ ಖುರಾನ್ ಎಂದು ಇದೆ. ಆದ್ದರಿಂದ ದೈವಗ್ರಂಥಗಳು ಮೂರೇಯೆಂದು ತಿಳಿದುಹೋಗಿದೆ. ಅಂತಿಮ ದೈವಗ್ರಂಥ ಖುರಾನ್ ಪ್ರಥಮ ದೈವಗ್ರಂಥವನ್ನು, ಅದರಲ್ಲಿನ ಜ್ಞಾನವನ್ನು ಧೃಢೀಕರಿಸುತ್ತದೆಂದು ಹೇಳುವುದು ನಡೆದಿದೆ. **ಭಗವದ್ಗೀತೆಯನ್ನು** ಖುರಾನ್‌ನಲ್ಲಿ **ತೌರಾತ್** ಎಂಬ ಹೆಸರಿನಿಂದ ಕರೆಯಲ್ಪಟ್ಟಿದೆ. ತೌರಾತ್ ಗ್ರಂಥದಲ್ಲಿ ಜ್ಯೋತಿ, ಮಾರ್ಗದರ್ಶಕತ್ವ ಇರುವುದೆಂದು ಖುರಾನ್ ಐದನೆಯ ಸುರಾದಲ್ಲಿ ಹೇಳಿರುವುದಾಗಿದೆ. ಇದನ್ನನುಸರಿಸಿ ಎಲ್ಲಾ ದೈವಗ್ರಂಥಗಳಲ್ಲಿ ಜ್ಞಾನವೇ ಇದೆ. ಎಲ್ಲಾ ಮತ ಬೋಧನೆಗಳಲ್ಲಿ ಜ್ಞಾನವೇ ಇರುವುದೆಂದು ತಿಳಿಯುತ್ತಿದೆ.

**ಅವರ ಪ್ರಶ್ನೆ :– ನೀವು ಅನೇಕ ಸಲ ಪ್ರತಿಮೆ ಬೇರೆ, ವಿಗ್ರಹ ಬೇರೆ ಎಂದು ಹೇಳಿದ್ದೀರ. ಪ್ರತಿಮೆ ಎಂದರೂ ಒಂದು ಗೊಂಬೆಯೇ. ಅದು ಕಲ್ಲಿನಿಂದ ಮಾಡಿರಬಹುದು, ಮಣ್ಣಿನಿಂದ ಮಾಡಿರಬಹುದು ಅಥವಾ ಲೋಹದಿಂದ ಮಾಡಿರಬಹುದು. ಒಂದು ಆಕಾರವಿರುವ ಯಾವ ಗೊಂಬೆಯಾದರೂ ಅದು ಮನುಷ್ಯರ ಕೈಯಿಂದ ತಯಾರು ಮಾಡಲ್ಪಟ್ಟಿರುವುದೇ ಅಲ್ಲವೇ! ಮನುಷ್ಯ ತಯಾರು ಮಾಡಿರುವವುಗಳಿಗೆ ಮನುಷ್ಯನೇ ಮುಗಿಯುವುದು ವಿಚಿತ್ರವಾಗಿದೆ. ಮನುಷ್ಯರು**

**ತಯಾರುಮಾಡಿರುವ ಗೊಂಬೆಯಲ್ಲಿ ಮನುಷ್ಯನಿಗಿಂತಲೂ ಮೀರಿದ ಶಕ್ತಿಯಿರುತ್ತದಾ?**

**ನಮ್ಮ ಉತ್ತರ :–** ಮನುಷ್ಯ ತಯಾರು ಮಾಡಿರುವವೆಲ್ಲಾ ಮನುಷ್ಯನಿಗಿಂತಲೂ ಕಡಿಮೆಯೆಂದು ಯಾಕೆ ಅಂದುಕೊಳ್ಳಬೇಕು. ಮನುಷ್ಯ ತಯಾರು ಮಾಡಿರುವ ಎಷ್ಟೋ ಯಂತ್ರಗಳು ಮನುಷ್ಯನಿಗಿಂತಲೂ ಶಕ್ತಿವಂತವಾಗಿ ಇವೆಯಲ್ಲವೇ! ಆದ್ದರಿಂದ ಮನುಷ್ಯನಿಂದ ತಯಾರು ಮಾಡಿರುವವೆಲ್ಲಾ ಮನುಷ್ಯನಿಗಿಂತಲೂ ಕಡಿಮೆಯಾದವುಗಳೆಂದು ಅಂದುಕೊಳ್ಳಬಾರದು. ಮನುಷ್ಯ ತಯಾರಿ ಮಾಡಿರುವ ಕ್ಯಾಲಿಕುಲೇಟರ್ ಮನುಷ್ಯನಿಗಿಂತಲೂ ತಿಳುವಳಿಕೆಯಾಗಿ, ನಿರ್ದಿಷ್ಟವಾದ ಲೆಕ್ಕ ಹೇಳುತ್ತಿದೆ ಅಲ್ಲವೇ! ಹಾಗೆಯೇ ಮನುಷ್ಯ ತಯಾರಿ ಮಾಡಿರುವ ವಿಮಾನವು ಮನುಷ್ಯನಿಗಿಂತಲೂ ವೇಗವಾಗಿ ಪ್ರಯಾಣ ಮಾಡುತ್ತಿದೆ ಅಲ್ಲವೇ! ಆದ್ದರಿಂದ ಮನುಷ್ಯ ತಯಾರಿ ಮಾಡಿರುವವು ಎಷ್ಟೋ ಮನುಷ್ಯನಿಗಿಂತಲೂ ದೊಡ್ಡವೆಂದು ಹೇಳಬಹುದು.

**ಅವರ ಪ್ರಶ್ನೆ:– ನಾವು ಮನುಷ್ಯ ಮಾಡಿರುವ ಯಂತ್ರಗಳನ್ನು ಕುರಿತು ಕೇಳಲಿಲ್ಲ. ಮನುಷ್ಯ ಮಾಡಿರುವ ರೂಪವಿರುವ ಗೊಂಬೆಗಳನ್ನು ಕುರಿತು ಕೇಳುತ್ತಿದ್ದೇವೆ. ಮನುಷ್ಯ ಮಾಡಿರುವ ಗೊಂಬೆಗಳು ದೇವತೆಗಳಾಗುತ್ತವಾ?**

**ನಮ್ಮ ಉತ್ತರ:–** ಮನುಷ್ಯ ಗೊಂಬೆಯನ್ನು ಮಾತ್ರ ಮಾಡುತ್ತಿದ್ದಾನೆ ಆದರೇ, ಅದರಲ್ಲಿನ ದೇವತೆಯನ್ನು ತಯಾರಿ ಮಾಡಲಿಲ್ಲ. ಮನುಷ್ಯ ತಯಾರಿ ಮಾಡಿರುವ ಗೊಂಬೆ ಬೇರೆ, ಆ ಗೊಂಬೆಯಲ್ಲಿರುವ ದೇವತೆ ಬೇರೆ. ಮನುಷ್ಯ ಸ್ಥೂಲವಾದ ಆಕಾರವನ್ನು ತಯಾರಿ ಮಾಡಬಲ್ಲನು ಆದರೇ, ಸೂಕ್ಷ್ಮವಾದ ದೇವತೆಯನ್ನು ತಯಾರಿ ಮಾಡಲಾರನು. ಮನುಷ್ಯ ಮಾಡಿರುವ ಗೊಂಬೆಯಲ್ಲಿ ಯಾವ ದೇವತೆಯಾದರೂ ಇರಬಹುದು. ಕಾರ್ಮಿಕನು ಕಷ್ಟಪಟ್ಟು ಒಂದು ಮನೆಯನ್ನು ತಯಾರಿ ಮಾಡಬಲ್ಲನು. ಆದರೇ ಆ ಮನೆಯಲ್ಲಿ ನಿವಾಸಿಸುವವರನ್ನು ತಯಾರು ಮಾಡಲಾರನು ಅಲ್ಲವೆ! ಹಾಗೆಯೇ ಒಂದು ಆಕಾರವಿರುವ ಗೊಂಬೆಯನ್ನು ಮನುಷ್ಯ ತಯಾರಿಸಬಲ್ಲನು. ಆದರೇ ಆ ಗೊಂಬೆಯಲ್ಲಿ ನಿವಾಸವಿರುವ

ದೇವತೆಯನ್ನು ತಯಾರು ಮಾಡಲಾರನು. ಮನುಷ್ಯನಿಂದ ಗೊಂಬೆ ತಯಾರಾದ ನಂತರ ಅದರಲ್ಲಿ ಯಾವ ದೇವತೆಯಾದರೂ ನಿವಾಸವಿರಬಹುದು. ಆದರೇ ಗೊಂಬೆಯನ್ನು ತಯಾರಿ ಮಾಡಿರುವವನಿಗೆ, ಅದರಲ್ಲಿ ನಿವಾಸಿಸುವ ದೇವತೆಗೆ ಎಂತಹ ಸಂಬಂಧವೂ ಇರುವುದಿಲ್ಲ. ಗೊಂಬೆಯನ್ನು ತಯಾರು ಮಾಡಿದವನ ಮೇಲೆ ಆ ಗೊಂಬೆಯಲ್ಲಿ ನಿವಾಸಿಸುವ ದೇವತೆ ಅಧಿಕಾರ ಚಲಾಯಿಸಬಲ್ಲದು. ಆತನಿಗೆ ಒಳ್ಳೆಯದಾದರೂ, ಕೆಟ್ಟದಾದರೂ ಮಾಡಬಲ್ಲವು. ಆದ್ದರಿಂದ ಗೊಂಬೆಗಳನ್ನು ಮಾಡಿರುವವನಾಗಲೀ, ಗೊಂಬೆಯಾಗಲೀ ದೇವತೆಗಳಿಗಿಂತಲೂ ಬೇರೆಯಾದವು. ದೇವತೆಗಳು ಮನುಷ್ಯ ತಯಾರಿ ಮಾಡಿರುವ ಗೊಂಬೆಯನ್ನು ತಮ್ಮ ನಿವಾಸ ಶರೀರವಾಗಿ ಉಪಯೋಗಿಸಿ ಕೊಳ್ಳುತ್ತಿವೆ. ಅಷ್ಟೇ ಹೊರತು ಗೊಂಬೆಯಲ್ಲಿನ ದೇವತೆಯನ್ನು ಮನುಷ್ಯ ತಯಾರಿ ಮಾಡಲಿಲ್ಲ.

**ಅವರ ಪ್ರಶ್ನೆ:– ನಮಗೆ ತಿಳಿದಿರುವವರೆಗು ಭೂಮಿಮೇಲೆ ಮನುಷ್ಯರು, ಸರ್ವ ಜೀವರಾಶಿಗಳಿರುವಾಗ, ಎಲ್ಲದಕ್ಕು ಅಧಿಪತಿಯಾಗಿ ದೇವರು ಒಬ್ಬನೇ ಇರುವನು. ಮಧ್ಯದಲ್ಲಿ ನೀವು ಹೇಳುವ ದೇವತೆಗಳು ಯಾರು? ಇವರನ್ನು ಯಾರು ಸೃಷ್ಟಿಸಿದ್ದಾರೆ?**

**ನಮ್ಮ ಉತ್ತರ:–** ನಿನಗೆ ತಿಳಿದಿರುವವರೆಗು ದೇವರು ಆತನ ಅಧೀನದಲ್ಲಿ ಮನುಷ್ಯರು ಇದ್ದಾರೆ. ಆದರೇ ನಿನಗೆ ತಿಳಿಯದ ಜ್ಞಾನವು ಎಷ್ಟೋ ಇದೆ. ಅದು ಎಲ್ಲಾ ದೇವರ ಪರಿಧಿಯೊಳಗಿನದೇ. ದೇವರು ಮನುಷ್ಯರನ್ನೇ ಅಲ್ಲದೇ ಮನುಷ್ಯರಿಗಿಂತಲೂ ಬೇರೆಯಾಗಿರುವ ದೇವತೆಗಳನ್ನು ಕೂಡಾ ಸೃಷ್ಟಿಸಿದ್ದಾನೆ. ನಿನಗೆ ಕಾಣಿಸುವುದೇ ದೇವರ ಸೃಷ್ಠಿ ಎಂದು ಅಂದುಕೊಳ್ಳುತ್ತಿರುವೆ. ಆದರೇ ನಿನಗೆ ತಿಳಿಯದಿರುವುದು, ನಿನಗೆ ಕಾಣಿಸದ ಸೃಷ್ಠಿ ಎಷ್ಟೋ ಇದೆ. ಅದರಲ್ಲಿ ಭಾಗವಾಗಿ ದೇವತೆಗಳನ್ನು ದೇವರು ಸೃಷ್ಠಿಸಿದ್ದಾನೆ. ಕಾಣಿಸುವ ಮಾನವ ಜಾತಿ ಇರುವಹಾಗೆ, ಕಾಣಿಸದ ದೇವತೆಗಳ ಜಾತಿ ಎಷ್ಟೋ ಇದೆ. ಮನುಷ್ಯನಿಗಿರುವ ಸ್ಥೂಲ ದೃಷ್ಠಿಗೆ ದೇವತೆಗಳು ಕಾಣಿಸುವುದಿಲ್ಲ. ಜಾತಿ ಬೇರೆಯಾದರೂ ದೇವತೆಗಳ ಶರೀರದಲ್ಲಿ ಇರುವವರು ಜೀವಿಗಳೇ. ಮಾನವ ಶರೀರದಲ್ಲಿರುವ ಜೀವಿಗಳೇ ಕರ್ಮವನ್ನು ಅನುಸರಿಸಿ ಆಗಾಗ ದೇವತೆಗಳಾಗಿ ಜನ್ಮಿಸುತ್ತಿರುತ್ತಾರೆ. ದೇವತೆಗಳು ಕಾಣಿಸದ ಒಂದು ಜಾತಿ ಮಾತ್ರವೇ. ದೇವತೆಗಳಿಗೆ ಸಾವುಹುಟ್ಟುಗಳಿವೆ.

ಮನುಷ್ಯರಾಗಿ ಸತ್ತವರು ದೇವತೆಗಳ ಜಾತಿಯಲ್ಲಿ ಹುಟ್ಟಬಹುದು. ಮನುಷ್ಯರ ಜೀವನಕ್ಕಾಗಲೀ, ದೇವತೆಗಳ ಜೀವನಕ್ಕಾಗಲೀ ಕರ್ಮವೇ ಕಾರಣ. ಕರ್ಮಪ್ರಕಾರವೇ ಅವರ ಜೀವನಗಳು ನಡೆಯುತ್ತಿರುತ್ತವೆ. ಮಾನವರ ನಂತರ ಮಾನವರ ಹಾಗೆ ದೇವತೆಗಳ ಜಾತಿ ಮತ್ತೊಂದು ಇದೆಯೆಂದು ಬಹಳ ಜನರಿಗೆ ತಿಳಿದಿಲ್ಲ. ಕಾಣಿಸದ ದೇವತೆಗಳು ಕೂಡಾ ಸಾಧಾರಣ ಜೀವಿಗಳೇ ಎಂದು, ದೇವತೆಗಳೆಂದು ಹೆಸರು ಇಟ್ಟಷ್ಟು ಮಾತ್ರಕ್ಕೆ ಅವರು ದೊಡ್ಡವರಲ್ಲವೆಂದು ತಿಳಿಯದೆ, ಮನುಷ್ಯರು ಕೆಲವರು ದೇವತೆಗಳನ್ನು ದೇವರಹಾಗೆ ಪೂಜಿಸುವುದು ಶುರು ಮಾಡಿದ್ದಾರೆ. ಮನುಷ್ಯರಿಗಿಂತಲೂ ನೀಚವಾದ ಗುಣಗಳಿರುವವರು ದೇವತೆಗಳಲ್ಲಿ ಸಹ ಇದ್ದಾರೆಂಬ ವಿಷಯವು ಮನುಷ್ಯರಿಗೆ ತಿಳಿದಿಲ್ಲ. ದೇವತೆಗಳಲ್ಲಿ ಎಷ್ಟೋ ಉನ್ನತವಾದ ಭಾವಗಳಿರುವ ಒಳ್ಳೆಯವರು ಇದ್ದಾರೆ. ಹಾಗೆಯೇ ಎಷ್ಟೋ ನೀಚವಾದ ಭಾವನೆಗಳಿರುವ ಕೆಟ್ಟವರು ಸಹ ಇದ್ದಾರೆ. ದೇವತೆಗಳು ಮನುಷ್ಯರು ಇಬ್ಬರೂ ದೇವರ ಸೃಷ್ಟಿಯೊಳಗಿನವರೇ, ಆದರೂ ಕೆಲವರು ಮನುಷ್ಯರು ದೇವತೆಗಳನ್ನು ದೇವರಹಾಗೆ ತಿಳಿದು ದೊಡ್ಡ ಭಾವದೊಂದಿಗೆ ಆರಾಧಿಸುವುದಕ್ಕೆ ಆರಂಭ ಮಾಡಿದ್ದಾರೆ. ಮನುಷ್ಯರಿಂದ ಗೌರವಿಸಲ್ಪಡುತ್ತಾ, ಮನುಷ್ಯರಿಂದ ಆರಾಧಿಸಲ್ಪಡುತ್ತಿರುವ ದೇವತೆಗಳು ಅಜ್ಞಾನದಿಂದ ನಾವು ದೊಡ್ಡವರೆಂಬ ಅಹಂ ಅನ್ನು ಹೊಂದಿದ್ದಾರೆ. ದೇವತೆಗಳಲ್ಲಿ ಕೂಡಾ ಜ್ಞಾನ ಜಿಜ್ಞಾಸಿಗಳು ಇದ್ದಾರೆ, ಅಜ್ಞಾನಿಗಳು ಇದ್ದಾರೆ. ದೇವತೆಗಳಲ್ಲಿ ದೊಡ್ಡ ಜ್ಞಾನಿಗಳು ಕೂಡಾ ಇದ್ದಾರೆ. ಹಾಗೆಯೇ ದೊಡ್ಡ ಅಜ್ಞಾನಿಗಳು ಕೂಡಾ ಇದ್ದಾರೆ. ದೇವತೆಗಳಲ್ಲಿ ಒಳ್ಳೆಯ ಗುಣಗಳೊಂದಿಗೆ ಪ್ರವರ್ತಿಸುವವರು ಕೆಲವರಿರುವಾಗ, ಕೆಟ್ಟ ಗುಣಗಳೊಂದಿಗೆ ಪ್ರವರ್ತಿಸುವವರು ಬಹಳ ಜನರಿದ್ದಾರೆ. ಪ್ರಥಮ ದೈವಗ್ರಂಥದಲ್ಲಿ ಭಾರತ ದೇಶ ಭಾಷೆಯಲ್ಲಿ ದೇವತೆಗಳೆಂದು ಕರೆಯಲ್ಪಟ್ಟಿರುವವರೇ, ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಜಿನ್ನರು ಅಥವಾ ಜಿನ್ನಾತರು ಎಂದು ಹೇಳಲ್ಪಟ್ಟಿದ್ದಾರೆ.

ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಸೂರಾ 72 ಆಯತ್ 6ರಲ್ಲಿ ಹೀಗಿರುವುದು ನೋಡಿರಿ.**(72–6) "ಮಾನವರಲ್ಲಿಂದ ಕೆಲವರು ಜಿನ್ನಾತುಗಳಲ್ಲಿನ**

**ಕೆಲವರರನ್ನು ಶರಣು ಬೇಡುವವರು. ಈ ಕಾರಣವಾಗಿ ಜಿನ್ನಾತರ ಪೊಗರು ಮತ್ತಷ್ಟು ಬೆಳೆದುಹೋಗಿದೆ.” (72–5) “ಮನುಷ್ಯರಾದರೂ ಜಿನ್ನಾತರಾದರೂ ಅಲ್ಲಾಹ್‌ಗೆ (ದೇವರಿಗೆ) ಅಸತ್ಯ ಹೇಳುವುದೆನ್ನುವುದು ಅಸಂಭವವೆಂದು ನಾವು ಅಂದುಕೊಂಡಿದ್ದೇವೆ” ಎಂದು ಕೂಡಾ ಇದೆ. (6–100) “ಪ್ರಜೆಗಳು ಜಿನ್ನಾತುಗಳನ್ನು ಅಲ್ಲಾಹ್‌ಗೆ ಭಾಗಸ್ವಾಮಿಗಳಾಗಿ ಖರಾರು ಮಾಡಿಕೊಂಡಿದ್ದಾರೆ. ಮತ್ತು ನೋಡಿದರೆ ಹೋದರೇ ಅವರನ್ನು ಸೃಷ್ಠಿಸಿರುವುದು ಕೂಡಾ ಆತನೇ”** ಈ ವಿಧವಾಗಿ ಜಿನ್ನಾತರನ್ನು ಕುರಿತು ಖುರಾನ್ ಗ್ರಂಥದಲ್ಲಿ ಇನ್ನೂ ಕೆಲವುಕಡೆ ಹೇಳುವುದು ನಡೆದಿದೆ. ಅಲ್ಲಿ ‘ಜಿನ್ನಾತರೆಂದು’ ಹೇಳಿರುವವರನ್ನೇ ನಾವು ‘ದೇವತೆಗಳು’ ಎನ್ನುತ್ತಿದ್ದೇವೆ. ದೇವತೆಗಳನ್ನು ದೇವರಿಗೆ ಸಮಾನ ಮಾಡಿ ಪೂಜಿಸುತ್ತಿದ್ದಾರೆಂದು (72–6) ರಲ್ಲಿಯು, (6–100) ರಲ್ಲಿಯು ಹೇಳುವುದು ನಡೆದಿದೆ. ಕಾಣಿಸದ ದೇವತೆಗಳ ವಿಷಯವು ಮನುಷ್ಯರಿಗೆ ತಿಳಿಯದೆ ಕಾಣಿಸದಂತೆ ಮಾತನಾಡುವ ದೇವತೆಗಳನ್ನು ಪೂಜ್ಯರಾಗಿ ಭಾವಿಸಿಕೊಂಡಿದ್ದಾರೆ. ಒಂದುವೇಳೆ ದೇವತೆಗಳನ್ನು ಪೂಜಿಸದವರನ್ನು ಕೆಲವು ಕಷ್ಟಗಳ ಪಾಲುಮಾಡಿ, ಕೆಲವು ವಿಧಗಳ ಅನಾರೋಗ್ಯಗಳ ಪಾಲುಮಾಡಿ, ಮನುಷ್ಯರಿಗೆ ಭಯವಿಟ್ಟು ತಮ್ಮನ್ನು ಪೂಜಿಸುವಹಾಗೆ ಕೆಲವರು ದೇವತೆಗಳು ಮಾಡಿಕೊಳ್ಳುತ್ತಿದ್ದಾರೆ. ತಮಗೆ ಮೀಸಲು (ಮುಡುಪು) ಕಟ್ಟದವರನ್ನು, ಕಾಣಿಕೆಗಳು ಕೊಡದವರನ್ನು ಕಷ್ಟಗಳಪಾಲು ಮಾಡಿ ತಮಗೆ ಮೀಸಲುಗಳು ಸಲ್ಲಿಸುವಹಾಗೆ ಮಾಡಿಕೊಳ್ಳುತ್ತಿದ್ದಾರೆ. ಈ ವಿಧವಾಗಿ ಜಿನ್ನಾತರು ಎಂದು ಖುರಾನ್ ಗ್ರಂಥದಲ್ಲಿ ಕರೆಯಲ್ಪಡುವವರೇ ನಮ್ಮ ದೇಶದಲ್ಲಿ ಹಿಂದುಗಳ ಮಧ್ಯೆ ದೇವತೆಗಳಾಗಿ ಕರೆಯಲ್ಪಡುತ್ತಿದ್ದಾರೆ. ಭೂಮಿಮೇಲೆ ಮನುಷ್ಯರು ಇಲ್ಲದಕಡೆ ಇವರು ಇದ್ದಾರೆ. ದೇವತೆಗಳಜಾತಿ ಮಾನವರ ಜಾತಿಗಿಂತಲೂ ದೊಡ್ಡದೆಂದು ಕೆಲವರು ಹೇಳಿದರೂ ಹಾಗೇನೂ ಅಲ್ಲ ಪಕ್ಷಿಗಳಲ್ಲಿ ಕಾಗೆಗಳು, ಗರುಡದಂತವರು ಮನುಷ್ಯರು, ದೇವತೆಗಳು. ಬಣ್ಣದಲ್ಲಿಯೂ, ಪರಿಮಾಣದಲ್ಲಿಯೂ ಗರುಡ ಮತ್ತು ಕಾಗೆ ಸ್ವಲ್ಪಬೇರೆ ಯಾಗಿದ್ದರೂ ಎರಡೂ ಮಾಂಸವನ್ನು ತಿನ್ನುವವೇ ಆಗಿರುವಂತೆ, ಮನುಷ್ಯರು ದೇವತೆಗಳು ಬೇರೆಬೇರೆ ಜಾತಿಗಳಾದರೂ ಪ್ರವರ್ತನೆಯಲ್ಲಿಯೂ, ಕರ್ಮ ಗಳಲ್ಲಿಯೂ, ಗುಣಗಳಲ್ಲಿಯೂ ಸಮಾನವಾಗಿಯೇ ಇದ್ದಾರೆಂದು ಹೇಳಬಹುದು.

**ಅವರ ಪ್ರಶ್ನೆ:– ದೇವತೆಗಳು ಮಾನವರಿಗಿಂತಲೂ ಸ್ವಲ್ಪ ಬೇರೆಯಾದರೂ ಅವರಲ್ಲಿ ಹೇಳಿಕೊಳ್ಳುವಂತಹ ದೊಡ್ಡತನ ಇಲ್ಲವೆಂದು ನೀವು ಅನ್ನುತ್ತಿದ್ದೀರ. ಅವರ ವಿಷಯವು ಬಹಳ ಜನರಿಗೆ ತಿಳಿದಿಲ್ಲ ಅಲ್ಲವೇ! ಈದಿನ ದೊಡ್ಡ ಸ್ವಾಮೀಜಿಗಳಾಗಿರುವವರು ಸಹಿತ ನೀವು ಹೇಳಿದಂತೆ ದೇವತೆಗಳನ್ನು ಕುರಿತು ಹೇಳಲಿಲ್ಲ. ಮೇಲಾಗಿ ಅವರು ಕೂಡಾ ದೇವತೆಗಳನ್ನು ಪೂಜಿಸುತ್ತಿದ್ದಾರೆ. ಒಂದುಕಡೆ ಭಗವದ್ಗೀತೆಯನ್ನು ಹೇಳುತ್ತಿದ್ದರೂ, ಮತ್ತೊಂದು ಕಡೆ ದೇವತೆಗಳ ಭ್ರಮೆಯಲ್ಲಿ ಬಿದ್ದು ಅವರನ್ನು ಪೂಜಿಸುತ್ತಿದ್ದಾರೆ. ಈ ವಿಧವಾಗಿ ಸ್ವಲ್ಪ ಜ್ಞಾನ ತಿಳಿದಿರುವವರೆಲ್ಲರೂ ದೇವತೆಗಳನ್ನೇ ಆರಾಧಿಸುತ್ತಿರುವಾಗ, ನೀವು ಮಾತ್ರ ದೇವತೆಗಳೆಂದರೇ ದೊಡ್ಡವರೇನೂ ಅಲ್ಲ, ಅವರು ಕೂಡಾ ಮಾನವ ಜಾತಿಯ ಹಾಗೆಯೇ ಇರುವ ಜಾತಿ ಎಂದು ಹೇಳುತ್ತಿದ್ದೀರ. ನಮ್ಮ ಅನುಮಾನದಿಂದ ಕೇಳುತ್ತಿದ್ದೇವೆ, ಅವರ ವಿಷಯವು ನಿಮಗೆ ಹೇಗೆ ತಿಳಿದಿದೆ?**

**ನಮ್ಮ ಉತ್ತರ :–** ದೇವತೆಗಳು ಮನುಷ್ಯರ ಮೇಲೆ ತಮ್ಮ ತಮ್ಮ ಅಧಿಕಾರ ಚಲಾಯಿಸುವುದಕ್ಕೆ, ಮನುಷ್ಯರನ್ನು ಭಯಭ್ರಾಂತರನ್ನಾಗಿ ಮಾಡಿ ತಮ್ಮನ್ನು ಪೂಜಿಸುವಹಾಗೆ ಮಾಡಿಕೊಳ್ಳುವುದಕ್ಕೆ ಕೆಲವು ಕಡೆ ತಮ್ಮನ್ನು ಗೌರವಿಸದ ಪ್ರಜೆಗಳನ್ನು ಕಾಣಿಸದಂತೆ ಪೀಡಿಸುತ್ತಾ ಮನುಷ್ಯರನ್ನು ಅನಾರೋಗ್ಯಪಾಲು ಮಾಡಿದಾಗ, ಮನುಷ್ಯರ ಮೇಲೆ ದೇವತೆಗಳ ದೌರ್ಜನ್ಯ ನಡೆಯುತ್ತಿರುವಾಗ ಅವರು ಮಾಡುವ ಕೆಲಸಗಳು ಒಳ್ಳೆಯದಲ್ಲವೆಂದು, ಪ್ರಜೆಗಳನ್ನು ರೌಡಿಗಳಹಾಗೆ ಪೀಡಿಸುವುದು ಒಳ್ಳೆಯದಲ್ಲವೆಂದು, ಕೆಲವು ಸಂದರ್ಭಗಳಲ್ಲಿ ನಾವು ಅವರನ್ನು ದಂಡಿಸುವುದು ನಡೆದಿದೆ. ಹಾಗೆ ಅವರು ಮಾಡುವ ಕೆಲವು ಕೆಟ್ಟಕೆಲಸಗಳನ್ನು ನಾವು ಖಂಡಿಸುವುದು ನಡೆದಿದೆ. ಅಂತಹ ಸಮಯದಲ್ಲಿ ಕೆಲವರು ದೇವತೆಗಳು ನಾವು ಹೇಳುವ ನೀತಿಯನ್ನು, ಜ್ಞಾನವನ್ನು ಗ್ರಹಿಸುವವರಾಗಿ ನಮ್ಮ ಮಾತಿಗೆ ಗೌರವ ಕೊಟ್ಟಿರುವವರು ಇದ್ದಾರೆ. ಅಪರೂಪವಾಗಿ ಕೆಲವರು ದೇವತೆಗಳು ನಮಗೆ ಎದುರು ತಿರುಗಿ ಮಾತನಾಡಿರುವ ಸಂದರ್ಭಗಳು ಸಹ ಇವೆ. ಹಾಗೆ ಅಪರೂಪವಾಗಿ ನಡೆದ ಸಂಘಟನೆಗಳಲ್ಲಿ ನಾವು ಅವರನ್ನು ಕಠಿಣವಾಗಿ ಶಿಕ್ಷಿಸುವುದು ಕೂಡಾ ನಡೆದಿದೆ. ನಮ್ಮ ಶಿಕ್ಷೆಗೆ ಭಯಪಟ್ಟು ಬದಲಾಗಿಹೋದವರು

ಸಹ ಇದ್ದಾರೆ. ಕೆಲವರು ಆಗ ಭಯಪಟ್ಟರೂ ನಂತರ ಅವರ ಪದ್ಧತಿ ಪ್ರಕಾರ ಅವರು ಕೆಟ್ಟದಾಗಿಯೇ ನಡೆದುಕೊಳ್ಳುವವರು ಸಹ ಇದ್ದಾರೆ. ಈ ವಿಧವಾಗಿ ದೇವತೆಗಳೊಂದಿಗೂ ನನಗೆ ಸ್ವಲ್ಪ ಪರಿಚಯ ಇರುವುದರಿಂದ ಅವರ ವಿಷಯಗಳು ಸುಮಾರು ಪೂರ್ತಿಯಾಗಿ ತಿಳಿದಿದೆ ಎಂದೇ ಹೇಳುತ್ತಿದ್ದೇನೆ.

**ಅವರ ಪ್ರಶ್ನೆ:– ದೇವರು ಮನುಷ್ಯಜಾತಿಯನ್ನು ಹುಟ್ಟಿಸಿದಂತೆ ದೇವತಾ ಜಾತಿಯನ್ನು ಕೂಡಾ ಹುಟ್ಟಿಸಿದ್ದಾನೆ ಎಂದು ಹೇಳುತ್ತಿದ್ದೀರ. ಮನುಷ್ಯರು ಪಿಂಡಜಗಳಾಗಿದ್ದಾರೆ. ಕಣ್ಣಿಗೆ ಕಾಣಿಸದ ದೇವತೆಗಳು ಪಿಂಡಜರೇನಾ? ಅವರ ಸೃಷ್ಠಿ ಹೇಗೆ ನಡೆಯುತ್ತಿದೆ?**

**ನಮ್ಮ ಉತ್ತರ:–** ಮನುಷ್ಯರಹಾಗೆ ಎಲ್ಲಾ ವಿಧಗಳ ದೇವತೆಗಳಿದ್ದಾರೆಂದು ಹೇಳಿದ್ದೇವೆ. ಮನುಷ್ಯರಿಗು ದೇವತೆಗಳಿಗು ಒಂದೇ ಒಂದು ವ್ಯತ್ಯಾಸವಿದೆ. ಮನುಷ್ಯರು ಕಾಣಿಸುತ್ತಿದ್ದಾರೆ. ದೇವತೆಗಳು ಕಾಣಿಸುತ್ತಿಲ್ಲ. ಮನುಷ್ಯರಿಗಿಂತಲೂ ಕೆಲವು ವಿಷಯಗಳಲ್ಲಿ ಮಾತ್ರ ದೇವತೆಗಳಲ್ಲಿ ಪ್ರತ್ಯೇಕತೆ ಇದೆ. ಆದ್ದರಿಂದ ಸ್ವಲ್ಪ ವಿಶೇಷತೆ ದೇವತೆಗಳಲ್ಲಿ ಇದೆಯೆಂದು ಹೇಳಬಹುದು. ಅವರ ವಿಶೇಷತೆಯಿಂದ ಮನುಷ್ಯರನ್ನು ದೇವತೆಗಳು ಪೀಡಿಸುವ, ಹಿಂಸಿಸುವ ಬಲ ಹೊಂದಿದ್ದಾರೆ. ಅಷ್ಟು ಹೊರತು ಉಳಿದ ಎಲ್ಲಾ ವಿಷಯಗಳಲ್ಲಿ ಮನುಷ್ಯರೊಂದಿಗೆ ಸಮಾನವಾಗಿಯೇ ಇದ್ದಾರೆ. ದೇವರ ಸೃಷ್ಠಿ ಆದ ಅಂಡಜ, ಪಿಂಡಜ, ಉದ್ಭಿಜ ಎಂಬ ಮೂರು ವಿಧಗಳಲ್ಲಿ ಮಾನವರ ಸೃಷ್ಠಿ ಪಿಂಡಜವಾಗಿದೆ. ಅದೇ ವಿಧವಾಗಿ ದೇವತೆಗಳ ಸೃಷ್ಠಿ ಕೂಡಾ ಪಿಂಡಜವಾಗಿಯೇ ಇದೆ. ಮನುಷ್ಯರಿಗೆ ದೇವತೆಗಳ ವಿಧಾನವೆಲ್ಲವು ಕಾಣಿಸದೆ ಇರುವುದರಿಂದ ಅವರ ವಿಷಯವು ಯಾರಿಗೂ ಸರಿಯಾಗಿ ತಿಳಿಯದೇ ಹೋಗಿದೆ. ಮನುಷ್ಯರಿಗೆ ಇರುವಹಾಗೆಯೇ ದೇವತೆಗಳಿಗು ಸಹ ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯ, ಮರಣ ಎಂಬ ಸ್ಥಿತಿಗಳು ಕ್ರಮವಾಗಿ ಇವೆ. ಅಷ್ಟೇಅಲ್ಲದೇ ಮನುಷ್ಯರ ಮರಣಗಳು ಮೂರು ವಿಧಗಳಾಗಿ ಇರುವಹಾಗೆ, ದೇವತೆಗಳ ಮರಣಗಳು ಕೂಡಾ ಕಾಲಮರಣ, ಅಕಾಲ ಮರಣ, ತಾತ್ಕಾಲಿಕ ಮರಣವೆಂಬ ಮೂರು ವಿಧಗಳ ಮರಣಗಳಿವೆ.

**ಅವರ ಪ್ರಶ್ನೆ:– ದೇವತೆಗಳು ಮಾನವರ ಕೋರಿಕೆಗಳನ್ನು ನೆರವೇರಿಸುತ್ತಾರೆಂದು,**

ಆದ್ದರಿಂದ ಮನುಷ್ಯರು ದೇವತೆಗಳ ಹಿಂದೆಬಿದ್ದು ಮುಗಿಯುತ್ತಿದ್ದಾರೆಂದು ಕೇಳಿದ್ದೇವೆ. ಕೆಲವರು ದೇವತೆಗಳು ಮನುಷ್ಯರ ಕೋರಿಕೆಗಳನ್ನು ಶೀಘ್ರವಾಗಿ ನೆರವೇರಿಸುವುದರಿಂದ ಆ ದೇವತೆಗಳನ್ನು ಹೆಚ್ಚುಜನ ಪೂಜಿಸುತ್ತಾರೆಂದು ಕೂಡಾ ಕೇಳಿದ್ದೇವೆ. ತಿರುಪತಿ ವೆಂಕಟೇಶ್ವರನನ್ನು ಆಪದ್ಭಾಂದವ ಅನಾಥರಕ್ಷಕ ಎಂದು ಕೆಲವರು ಹೇಳುತ್ತಿರುತ್ತಾರೆ. ಹರಕೆ ಹೊತ್ತವರ ಆಪತ್ತನ್ನು ತಪ್ಪದೇ ತೀರಿಸುವವನೆಂದು ಹಾಗೆ ಹೇಳಿದ್ದಾರೆ. ಭಕ್ತರ ಕೋರಿಕೆಗಳನ್ನು ನೆರವೇರಿಸುವುದರಲ್ಲಿ ಕೆಲವರು ಮುಂದಿರುವುದರಿಂದ ಆ ದೇವತೆಗಳನ್ನೇ ಹೆಚ್ಚು ಜನ ಆರಾಧಿಸುತ್ತಿದ್ದಾರೆಂದು ತಿಳಿಯುತ್ತಿದೆ. ಕೆಲವರು ಅವರು ನಂಬಿರುವ ದೇವರ ದಯೆಯಿಂದ ದೊಡ್ಡ ಧನಿಕನು ಆಗಿದ್ದೇನೆಂದು ಹೇಳುತ್ತಿರುತ್ತಾರೆ. ಬಡವರಿಂದ ಧನಿಕರಾಗಿ ಬದಲಾದ ಕೆಲವರು ಪೂಜಿಸುವ ದೇವತೆ ಬಳಿಗೆ ತಿಂಗಳಿಗೊಮ್ಮೆ ಹೋಗಿ ಪೂಜೆಗಳು ಮಾಡಿಸಿ ಬರುವವರಿದ್ದಾರೆ. ಕೆಲವರು ತಾವು ಸಂಪಾದಿಸಿರುವ ಹಣವನ್ನು ಲಕ್ಷಗಳಲ್ಲಿಯು, ಕೋಟಿಗಳಲ್ಲಿಯು ಮುಡುಪುಗಳಾಗಿ ಸಲ್ಲಿಸುವವರಿದ್ದಾರೆ. ಕೆಲವರಾದರೇ ತಾವು ವಿಪರೀತವಾಗಿ ಸಂಪಾದಿಸಿ ಅದೆಲ್ಲಾ ತಾವು ನಂಬಿರುವ ದೇವರೇ ಕೊಟ್ಟಿದ್ದಾನೆಂದು ಕೆಲವು ಕೇಜೀಗಟ್ಟಲೆ ಬಂಗಾರವನ್ನು ಹುಂಡಿಯೊಳಗೆ ಹಾಕಿ ಬಂದಿರುವವರು ಸಹ ಇದ್ದಾರೆ. ಕೆಲವರಾದರೇ ಕೆಲವು ಕೋಟಿಗಳ ಹಣವನ್ನು ಒಂದು ಮೂಟೆಯಂತೆ ಹಾಕಿರುವವರು ಹೆಸರು ತಿಳಿಯದೇ ಅಜ್ಞಾತ ಭಕ್ತರು ಕೊಟ್ಟಿದ್ದಾರೆನ್ನುವಂತೆ ಮಾಡುತ್ತಿದ್ದಾರೆ. ಇಷ್ಟು ಭಕ್ತಿ ಮನುಷ್ಯರಲ್ಲಿ ಇರುವುದಕ್ಕೆ ದೇವತೆಗಳ ಮೂಲಕ ಅವರಿಗೆ ಒಳ್ಳೆಯದು ನಡೆದು ಲಾಭ ಬಂದಿರುತ್ತದೆ ಅಲ್ಲವೇ! ಇದನ್ನನುಸರಿಸಿ ದೇವತೆಗಳು ತಮ್ಮನ್ನು ಮುಗಿದಿರುವವರ ಕೋರಿಕೆಗಳನ್ನು ತೀರಿಸುತ್ತಿದ್ದಾರೆಂದು, ಲಾಭ ಕೈಗೂಡಿಸಿಕೊಳ್ಳುತ್ತಿದ್ದಾರೆಂದು ಅರ್ಥವಾಗುತ್ತಿದೆ. ಇದರ ವಿಷಯದಲ್ಲಿ ನೀವೇನು ಹೇಳುತ್ತೀರ?

**ನಮ್ಮ ಉತ್ತರ:–** ನೀವು ಹೇಳಿರುವುದೆಲ್ಲಾ ನಿಜವೇ! ಆದರೇ ಇಲ್ಲಿ ಕಾಣಿಸುವುದೆಲ್ಲಾ ಸತ್ಯವೇ ಎಂದುಕೊಂಡರೇ ನೀವು ತಪ್ಪಿನಲ್ಲಿ ಕಾಲುಹಾಕಿದಂತೆಯೆ ಆಗುವುದು. ಇಲ್ಲಿ ಕಾಣಿಸುವುದಕ್ಕಿಂತಲೂ ಕಾಣಿಸದಿರುವುದೇ ಹೆಚ್ಚಾಗಿದೆ. ಹೊರಗೆ ಕಾಣಿಸುವುದು ನೀವು ಹೇಳಿದಂತಿದ್ದರೂ, ಯಾವ ದೇವತೆ ಯಾವ ಮನುಷ್ಯನಿಗೂ

ಯಾವ ಸಹಾಯ ಮಾಡಲಿಲ್ಲ. ಈ ಮಾತನ್ನು ಒಂದು ಸಲ ಕೇಳಿದರೇ ನಾವು ಹೇಳುವುದು ಅಸತ್ಯವಾಗಿರುತ್ತದೆ. ಆದ್ದರಿಂದ ಇಲ್ಲಿ ಸ್ವಲ್ಪ ಸವಿವರವಾಗಿ ತಿಳಿಯಬೇಕಾಗಿದೆ. ಭೂಮಿಮೇಲೆ ಮನುಷ್ಯರಾಗಲೀ, ದೇವತೆಗಳಾಗಲೀ ಇಬ್ಬರೂ ಕರ್ಮ ಪ್ರಕಾರ ಹುಟ್ಟಿ, ಕರ್ಮಪ್ರಕಾರ ಬದುಕಬೇಕಾಗಿರುವವರೇ. ಯಾರ ಕರ್ಮವನ್ನು ಅವರು ಅನುಭವಿಸದೆ ತಪ್ಪುವುದಿಲ್ಲ. ಹಾಗಿರುವಾಗ ಮನುಷ್ಯನಿಗೆ ಏನು ನಡೆದರೂ, ಏನು ಬಂದರೂ ಎಲ್ಲಾ ಕರ್ಮ ಪ್ರಕಾರವೇ ನಡೆಯಬೇಕಾಗಿದೆ. ದೇವತೆಗಳಾಗಲೀ, ಮನುಷ್ಯರಾಗಲೀ ಕರ್ಮಕ್ಕೆ ಅತೀತರಲ್ಲ. ಮನುಷ್ಯರಲ್ಲಿನ ಬಲಹೀನತೆಯನ್ನು ದೇವತೆಗಳು ಆಸರೆಯಾಗಿ ಮಾಡಿಕೊಂಡು, ಮನುಷ್ಯನಿಗೆ ನಾವು ಮೇಲು ಮಾಡುತ್ತಿದ್ದೇವೆ ಎಂದು ಭ್ರಮಿಸುವಂತೆ ಮಾಡಿ ಮನುಷ್ಯನನ್ನು ಮೋಸಮಾಡುತ್ತಿದ್ದಾರೆ. ಕೆಲವು ವಿಷಯಗಳಲ್ಲಿ ದೇವತೆಗಳು ಒಳ್ಳೆಯದು ಮಾಡಿದಂತೆ ಕಾಣಿಸಿದರೂ ಅದು ಅವರು ಮಾಡಿರುವ ಒಳ್ಳೆಯತನವಲ್ಲ. ಮನುಷ್ಯ ದೇವತೆಗಳನ್ನು ತನ್ನ ಕೋರಿಕೆಗಳ ನಿಮಿತ್ತ ಪೂಜಿಸುತ್ತಿದ್ದಾನೆ. ಅಂತಹ ಸಮಯದಲ್ಲಿ ತಾನು ಒಂದು ಕೋರಿಕೆಯನ್ನು ಕೋರಿ ಈ ಗಂಡಾಂತರ ತಪ್ಪಿಹೋಗುವಂತೆ ಮಾಡಿದರೇ, ನಿನಗೆ ಇಂತಹ ಕಾಣಿಕೆ ಸಲ್ಲಿಸಿಕೊಳ್ಳುತ್ತೇನೆಂದು ಮನುಷ್ಯ ಒಳ್ಳೆಯ ಹೆಸರಿರುವ ದೇವತೆಗೆ ಹರಕೆ ಹೊತ್ತಿದ್ದಾನೆಂದುಕೊಳ್ಳಿ. ಆಗ ಆ ಮನುಷ್ಯ ಕೋರಿಕೆಯ ಪ್ರಕಾರ ಅವನು ಕೋರಿರುವ ಕೋರಿಕೆ ನೆರವೇರಿ ಅವನ ಗಂಡಾಂತರ ತಪ್ಪಿಹೋಗಿದೆ. ನಂತರ ಮನುಷ್ಯ ತಾನು ಹರಕೆ ಹೊತ್ತ ದೇವತೆಗೆ ಕಾಣಿಕೆ ಸಲ್ಲಿಸಬೇಕಾಗಿರುತ್ತದೆ. ಏಕೆಂದರೇ ಮನುಷ್ಯ ಮೊದಲೇ ತನ್ನ ಕೋರಿಕೆ ನೆರವೇರಿದರೇ ಇಂತಹ ಕಾಣಿಕೆ ಕೊಡುತ್ತೇನೆಂದು ಹೇಳಿದ್ದಾನೆ. ಆ ವಿಷಯವು ಆ ದೇವತೆ ಮುಂದೆಯೇ ನಡೆದಿರುವುದರಿಂದ ಅದೆಲ್ಲಾ ಆ ದೇವತೆಗೂ ಸಹ ತಿಳಿದಿದೆ.

ಮನುಷ್ಯ ದೇವತೆಯನ್ನು ಕೋರಿದ ಕೋರಿಕೆ ನೆರವೇರಿರುವುದು ಸಹ ಆ ದೇವತೆಗೆ ತಿಳಿದಿದೆ. ಆದರೇ ತಾನು ಏನೂ ಮಾಡಲಿಲ್ಲವೆಂಬ ವಿಷಯವು ಸಹ ಆ ದೇವತೆಗೆ ತಿಳಿದಿದೆ. ಆದರೇ ಆತನು ಕೋರಿಕೊಂಡಿರುವ ಕೋರಿಕೆ ನನ್ನನ್ನು ಮುಗಿದ ನಂತರ ನೆರವೇರಿದೆ ಅಲ್ಲವೇ! ಎಂದೂ, ಹಾಗೆ ನೆರವೇರುವುದಕ್ಕೆ

ನಾನೇ ಕಾರಣವಾಗಿರಬಹುದಲ್ಲವೇ! ಎಂದೂ ತಿಳಿದು, ಕೋರಿಕೆ ನೆರವೇರಿದ ನಂತರ ಕೂಡಾ ಸ್ವಲ್ಪಕಾಲದವರೆಗು ಕಾಣಿಕೆ ಕೊಡದ ಮನುಷ್ಯನನ್ನು ತನಗೆ ಕಾಣಿಕೆಯನ್ನು ಸಲ್ಲಿಸೆಂದು ಯಾವುದೊ ಒಂದು ವಿಧವಾಗಿ ಆ ದೇವತೆ ಆತನ ಮೇಲೆ ಒತ್ತಡ ಹಾಕುವುದು. ಬೇರೆ ಮನುಷ್ಯನೊಳಗೆ ಆ ಸೂಕ್ಷ್ಮ ದೇವತೆ ಬಂದು ನಿನ್ನ ಕೋರಿಕೆಯನ್ನು ನೆರವೇರಿಸಿದ್ದೇನೆ ನನಗೆ ನೀನು ಹೇಳಿರುವ ಕಾಣಿಕೆ ಕೊಡಲಿಲ್ಲವೆಂದು ಆ ದೇವತೆ ಕೇಳಿದೆ ಎಂದುಕೊಳ್ಳಿ, ಆಗ ಆ ಮನುಷ್ಯ ಭಯಪಟ್ಟು ಕೂಡಲೇ ತಾನು ಹೇಳಿರುವ ಕಾಣಿಕೆಯನ್ನು ಆ ದೇವತೆಗೆ ಕೊಡುವನು. ದೇವತೆ ಸೂಕ್ಷ್ಮವಾಗಿಬಂದು ಕಾಣಿಕೆಯನ್ನು ಕುರಿತು ಕೇಳಿರುವುದರಿಂದ ಕೋರಿಕೆಯನ್ನು ಕೋರಿದ ಮನುಷ್ಯ ತನ್ನ ಕೋರಿಕೆಯನ್ನು ಆ ದೇವತೆಯೇ ನೆರವೇರಿಸಿದೆಯೆಂದು ಅಂದುಕೊಳ್ಳುವನು. ಆ ವಿಷಯವೆಲ್ಲಾ ತಿಳಿದಿರುವವರು ಕೂಡಾ ದೇವತೆಯಿಂದಲೇ ಆ ಮನುಷ್ಯನ ಕೋರಿಕೆ ನೆರವೇರಿದೆಯೆಂದು ಅಂದುಕೊಳ್ಳುತ್ತಾರೆ. ಈ ವಿಧವಾಗಿ ಮನುಷ್ಯರು ದೇವತೆಗಳನ್ನು ನಂಬುತ್ತಿದ್ದಾರೆ. ತಾವು ಮಾಡದ ಕೆಲಸಗಳಿಗೆ ಕಾಣಿಕೆಗಳನ್ನು ಕೇಳಿ ತೆಗೆದುಕೊಳ್ಳುತ್ತಿದ್ದಾರೆ ದೇವತೆಗಳು. ಹಾಗೆ ಕೇಳುವುದರಿಂದ ದೇವತೆಗಳೇ ಕೋರಿಕೆಗಳನ್ನು ನೆರವೇರಿಸಿದ್ದಾರೆಂದು ಪ್ರಜೆಗಳು ದೇವತೆಗಳ ವಿಷಯದಲ್ಲಿ ಮೋಸಹೋಗುತ್ತಿದ್ದಾರೆ.

ವಾಸ್ತವವಾಗಿ ನಡೆದಿರುವುದು ನೋಡಿದರೇ ದೇವತೆಗಳು ಎಷ್ಟು ಮೋಸ ಮಾಡುತ್ತಿದ್ದಾರೋ ತಿಳಿಯಬಲ್ಲದು. ಇದನ್ನು ಕುರಿತು ಭಗವದ್ಗೀತೆಯಲ್ಲಿ ವಿಜ್ಞಾನಯೋಗವೆಂಬ ಅಧ್ಯಾಯದಲ್ಲಿ 20, 21, 22, 23 ಶ್ಲೋಕಗಳ ಸಾರಾಂಶವು ಈ ವಿಧವಾಗಿದೆ ನೋಡಿರಿ. ಶ್ಲೋಕಗಳ ಭಾವವು "ಪ್ರಕೃತಿ ಸಂಬಂಧವಾದ ಪಾಪಗಳಿಂದ ಅಜ್ಞಾನಿಗಳಾದ ಮನುಷ್ಯರು ಕೋರಿಕೆಗಳಲ್ಲಿ ಮುಳುಗಿ, ತಮ್ಮ ಕೋರಿಕೆಗಳು ನೆರವೇರುವ ನಿಮಿತ್ತ ನಿಜವಾದ ದೇವರನ್ನು ಪಕ್ಕಕ್ಕಿಟ್ಟು, ದೇವರಲ್ಲದ ಅನ್ಯ ದೇವತೆಗಳನ್ನು, ಆ ದೇವತೆಗಳ ನಿಯಮಗಳ ಪ್ರಕಾರ ಆರಾಧಿಸುತ್ತಿದ್ದಾರೆ. ಯಾರಿಗೆ ಯಾವ ದೇವತೆಯನ್ನು ಪೂಜಿಸುವ ಶ್ರದ್ಧೆ ಇದೆಯೋ ಆ ಶ್ರದ್ಧೆ ಪ್ರಕಾರವೇ ಆ ದೇವತೆಯನ್ನೇ ಬಿಡದೇ ಆರಾಧಿಸುವಂತೆ ನಾನೇ ಮಾಡುತ್ತಿದ್ದೇನೆ.

ಹಾಗೆ ಶ್ರದ್ಧೆ ಪ್ರಕಾರ ಆ ದೇವತೆಯನ್ನೇ ಪೂಜೆ ಮಾಡಿರುವುದರಿಂದ ಕೋರಿಕೆ ನೆರವೇರಿದೆಯೆಂದು ಅವನಿಗೆ ತಿಳಿಯುವಹಾಗೆ ನಾನೇ ಅವನ ಕೋರಿಕೆಯನ್ನು ನೆರವೇರಿಸುತ್ತಿದ್ದೇನೆ. ದೇವತಾ ಭಕ್ತಿಯಲ್ಲಿದ್ದರೂ ಅವನ ಒಳ್ಳೆಯದನ್ನು ಕೋರುವ ನಾನು ಅವನ ಕೋರಿಕೆಗಳನ್ನು ನೆರವೇರುವಂತೆ ಮಾಡುತ್ತಿರುವಾಗ, ತಿಳುವಳಿಕೆ ಇಲ್ಲದ ಮನುಷ್ಯರು ದೇವತಾ ಪೂಜೆಗಳಿಂದ ಕೋರಿಕೆಗಳು ನೆರವೇರುತ್ತವೆಂದು ಅವುಗಳನ್ನೇ ಆಚರಿಸುತ್ತಿರುತ್ತಾರೆ. ಅಲ್ಪಬುದ್ಧಿ ಇರುವವರು ಪಡೆಯುವ ಫಲಿತಾಂಶಗಳು ಎಂತಹವಾದರೂ ಅದು ಅಲ್ಪವೇ ಆಗುವುದು. ದೇವತಾ ಭಕ್ತರೆಲ್ಲರೂ ದೇವತೆಗಳನ್ನೇ ಹೊಂದಿದರೇ, ನನ್ನ ಭಕ್ತರು ಮಾತ್ರ ನನ್ನನ್ನು ಹೊಂದಬಲ್ಲರು" ಎಂದು ದೇವರು ಭಗವಂತನ ರೂಪದಲ್ಲಿ ಹೇಳುವುದು ನಡೆದಿದೆ. ಭಗವಂತನಾಗಿ ಹೇಳಿರುವ ವಿಷಯಗಳೆಲ್ಲಾ ನೋಡಿದರೇ ದೇವರು ಬೇರೆ, ದೇವತೆಗಳು ಬೇರೆ ಎಂದು ತಿಳಿದು ಹೋಗುತ್ತಿದೆ. ಮನುಷ್ಯ ತನ್ನ ಕೋರಿಕೆಗಳ ನಿಮಿತ್ತ ದೇವರನ್ನು ಬಿಟ್ಟು ದೇವತೆಗಳನ್ನು ಆಶ್ರಯಿಸುವುದು ನಡೆಯುತ್ತಿದೆ. ಮನುಷ್ಯರು ದೇವರ ಜ್ಞಾನ ತಿಳಿಯದಿರುವುದರಿಂದ ಅಜ್ಞಾನದಲ್ಲಿ ಪೂರ್ತಿ ಆಳವಾಗಿ ಸಿಲುಕಿಕೊಂಡಿರುವವರಾಗಿ ತಮಗೆ ಎಲ್ಲಾ ಕೊಡುವವನು ದೇವರು ಒಬ್ಬನೇ ಎಂದು ತಿಳಿಯದೆ, ದೇವರಿಂದ ಸೃಷ್ಟಿಸಲ್ಪಟ್ಟವರು, ಮಾನವರಹಾಗೆ ಮಾಯೆಯಲ್ಲಿ ಸಿಲುಕಿಕೊಂಡಿರುವವರಾದ ದೇವತೆಗಳನ್ನು ತಮಗಿಂತಲೂ ದೊಡ್ಡವರಾಗಿ ತಿಳಿದು, ಅವರು ಕಾಣದಿರುವು ದರಿಂದ ದೇವರೊಂದಿಗೆ ಸಮಾನವಾಗಿ ತಿಳಿದು, ತಾವು ಕೋರಿಕೊಂಡ ಕೋರಿಕೆಗಳನ್ನು ನೆರವೇರಿಸುತ್ತಾರೆಂದು ಅಪಾರ್ಥ ಮಾಡಿಕೊಂಡಿರುವವರಾಗಿ, ದೇವತೆಗಳನ್ನು ಪೂಜ್ಯರಾಗಿ ಭಾವಿಸಿ ಪೂಜಿಸುವುದು ಶುರು ಮಾಡಿದ್ದಾರೆ. ದೇವತೆಗಳನ್ನು ಪೂಜಿಸಿದವರ ಕೋರಿಕೆಗಳನ್ನು ತೀರಿಸುವರೆಂಬ ಅಪಾರ್ಥ ಮಾಡಿಕೊಂಡು ಆಸೆಯಿಂದ ಎಲ್ಲರನ್ನೂ ಮುಗಿಯಲು ಶುರುಮಾಡಿದ್ದಾರೆ.

ಭೂಮಿಮೇಲೆ ಪ್ರತಿ ಊರಿನಲ್ಲೂ ಕೆಲವರು ಮನುಷ್ಯರಿರುವಹಾಗೆ ಪ್ರತಿ ಊರಿನಲ್ಲು ಕೆಲವರು ದೇವತೆಗಳಿದ್ದಾರೆ. ಒಂದು ಊರಿನಲ್ಲಿ ಸಾವಿರಜನ ಜನಸಂಖ್ಯೆ ಇದೆಯೆಂದುಕೊಳ್ಳೋಣ. ಆ ಊರಿನಲ್ಲಿ ಸುಮಾರು ಇನ್ನೂರ

ಐವತ್ತು (250) ಜನರಿಂದ 300 ವರೆಗು ದೇವತೆಗಳಿರುತ್ತಾರೆ. ಹಾಗೆಯೆ ಇನ್ನೂರ ಐವತ್ತು(250) ರಿಂದ 300 ವರೆಗು ದೆವ್ವಗಳು ಇರುತ್ತವೆ. ಅದೇ ರೀತಿ 250ರಿಂದ 300ರರವರೆಗು ಪ್ರಾಣಿಗಳು, ಪಕ್ಷಿಗಳು, ಹಾವುಗಳು ಕ್ರಿಮಿಕೀಟ ಇತ್ಯಾದಿಗಳು ಇರುತ್ತವೆ. ಊರಿನಲ್ಲಿನ ಮನುಷ್ಯರು ಸಾವಿರ ಜನ ಕಾಣಿಸುತ್ತಿದ್ದರೇ, ಉಳಿದ ಮೂರು ವಿಧಗಳವರು ಕಾಣಿಸದೆ ಇದ್ದಾರೆ. ದೇವತೆಗಳು ಕಾಣಿಸುವುದಿಲ್ಲ ಅವರ ಹುಟ್ಟುವಿಕೆಯೇ ಹಾಗಿರುತ್ತದೆ. ದೇವತೆಗಳಿಗಿಂತಲೂ ಭಿನ್ನವಾದವರು ದೆವ್ವಗಳು. ದೆವ್ವಗಳೆಂದರೇ ಸತ್ತುಹೋಗಿ ಬದುಕಿರುವ ಮನುಷ್ಯರೇ ಎಂದು ಅರ್ಥ. ಹಾಗೆಯೇ ಮನುಷ್ಯರಹಾಗೆ ಸತ್ತುಹೋಗಿ ಬದುಕಿರುವ ಪ್ರಾಣಿಗಳು, ಪಕ್ಷಿಗಳು, ಹಾವುಗಳು, ಕ್ರಿಮಿಕೀಟ ಇತ್ಯಾದಿಗಳು ಮೊದಲಾದವೆಲ್ಲವೂ ದೆವ್ವಗಳ ಕೆಳಗೆಯೆ ಬರುತ್ತವೆ. ಈ ವಿಧವಾಗಿ ಭೂಮಿಮೇಲೆ ಕಾಣಿಸದೆ ಇರುವವರು ಮೂರು ವಿಧಗಳಾಗಿದ್ದರೂ ಅವರಲ್ಲಿ ದೆವ್ವಗಳಾಗಿರುವವರು ಸತ್ತುಹೋದರೂ, ಆಯಸ್ಸು ಮುಗಿಯದವರೆಂದು ಅರ್ಥ. ದೇವತೆಗಳ ಹುಟ್ಟಿವಿಕೆಯೆ ಸೂಕ್ಷ್ಮವಾದ್ದರಿಂದ ದೆವ್ವಗಳಹಾಗೆ ಕಾಣಿಸದೆ ದೇವತೆಗಳು ತಿರುಗುತ್ತಿರುತ್ತಾರೆ. ಸಾವಿರಜನರಿರುವ ಒಂದು ಊರಿನಲ್ಲಿ ಸುಮಾರು ಎಷ್ಟು ಸಂಖ್ಯೆಯಲ್ಲಿ ದೇವತೆಗಳಿರುತ್ತಾರೋ ತಿಳಿಯಿತು. ದೇವತೆಗಳಿಗೆ, ದೆವ್ವಗಳಿಗೆ ಸ್ಥೂಲ ಶರೀರವು ಇಲ್ಲದಿರುವುದರಿಂದ ದೆವ್ವಗಳು ದೇವತೆಗಳು ಎರಡೂ ಸೂಕ್ಷ್ಮ ಶರೀರದಿಂದಲೇ ಕಾಲ ಕಳೆಯುತ್ತಿವೆ. ದೇವತೆಗಳು ಸೂಕ್ಷ್ಮ ಶರೀರದಿಂದ ದೆವ್ವಗಳಹಾಗೆ ಇರುವುದರಿಂದ ದೇವತೆಗಳನ್ನು ದೊಡ್ಡ ದೆವ್ವಗಳೆಂದು, ದೆವ್ವಗಳನ್ನು ಚಿಕ್ಕ ದೆವ್ವಗಳೆಂದು ಹೇಳಬಹುದು. ಬದುಕಿರುವ ನಮಗೆ ತಿಳಿದಿಲ್ಲ ಆದರೇ, ದೇವತೆಗಳಿಗೆ ದೆವ್ವಗಳಿಗೆ ಆಗಾಗ ಅಲ್ಲಲ್ಲಿ ಚಿಕ್ಕಚಿಕ್ಕ ಘರ್ಷಣೆಗಳು ಸಹ ನಡೆಯುತ್ತಿರುತ್ತವೆ.

ಬದುಕಿರುವ ಮನುಷ್ಯರನ್ನು ಕಾಣಿಸದ ದೇವತೆಗಳು ಅನೇಕ ವಿಧಗಳಲ್ಲಿ ಮೋಸಗಳು ಮಾಡುತ್ತಿವೆ. ತಾವು ಮನುಷ್ಯರ ಕೋರಿಕೆಗಳನ್ನು ನೆರವೇರಿಸುವ ಶಕ್ತಿ ಇರುವವರೆಂದು ಪ್ರಚಾರ ಮಾಡಿಸಿಕೊಂಡಿವೆ. ಪ್ರಜೆಗಳಲ್ಲಿ ಮುಖ್ಯ ವಾದವರಾದ ಸ್ವಾಮೀಜಿಗಳು ಕೂಡಾ ದೇವತೆಗಳನ್ನು ಮುಗಿಯುವು ದರಿಂದ

ಉಳಿದ ಪ್ರಜೆಗಳೆಲ್ಲರೂ ದೇವತೆಗಳ ವಿಷಯದಲ್ಲಿ ಮೋಸಹೋಗುವುದು ನಡೆದಿದೆ. ಪ್ರತ್ಯೇಕವಾದ ಶಕ್ತಿಗಳು ಇಲ್ಲದ ದೇವತೆಗಳು, ಮನುಷ್ಯರ ಕೋರಿಕೆಗಳನ್ನು ತೀರಿಸುವವರಾಗಿ ಪ್ರಚಾರವಾಗಿದ್ದಾರೆ. ಪ್ರಜೆಗಳು ತಮ್ಮ ಅಜ್ಞಾನದಿಂದ ದೇವತೆಗಳು ತಮ್ಮ ಕೋರಿಕೆಗಳನ್ನು ನೆರವೇರಿಸುತ್ತಾರೆಂಬ ಭ್ರಮೆಯಿಂದ, ದೇವತೆಗಳಿಗಿರುವ ನಿಯಮಗಳ ಪ್ರಕಾರ ಆ ನಿಯಮಗಳನ್ನು ಆಚರಿಸುತ್ತಾ, ಶುಕ್ರವಾರ ಮುಗಿಯುವವರನ್ನು ಶುಕ್ರವಾರ, ಮಂಗಳವಾರ ಮುಗಿಯುವವರನ್ನು ಮಂಗಳವಾರ, ಶನಿವಾರ ಮುಗಿಯುವವರನ್ನು ಶನಿವಾರ ಮುಗಿಯುತ್ತಿದ್ದಾರೆ. ಮಾಂಸದಿಂದ ತೃಪ್ತಿ ಹೊಂದುವ ದೇವತೆಗಳಿಗೆ ಪ್ರಾಣಿಬಲಿಗಳು ಕೊಟ್ಟು ಮಾಂಸವನ್ನು ಅರ್ಪಿಸುತ್ತಿದ್ದಾರೆ. ಕೆಲವು ದೇವತೆಗಳಿಗೆ ಶಬ್ಧ ಸಡಗರ ಇಷ್ಟವಾದ್ದರಿಂದ ಅವರಿಗೆ ಅದೇ ವಿಧವಾಗಿ ಡೋಲು, ತಮ್ಮಟೆಗಳೊಂದಿಗೆ ಮೆರವಣಿಗೆ ಉತ್ಸವ ಮಾಡುತ್ತಿದ್ದಾರೆ. ಹೀಗೆ ಒಂದೊಂದು ದೇವತೆಗೆ ಒಂದೊಂದು ಆರಾಧನೆಯೊಂದಿಗೆ ಅವರ ನಿಯಮಗಳ ಪ್ರಕಾರ ಪೂಜೆಗಳು ಮಾಡುತ್ತಿದ್ದಾರೆ. ಹಾಗೆ ಪೂಜೆಗಳು ಮಾಡುವುದರಿಂದ ತಮ್ಮ ಕೋರಿಕೆಗಳು ನೆರವೇರುವುದೆಂದು ಪ್ರಜೆಗಳು ತಿಳಿಯುತ್ತಿದ್ದಾರೆ.

ಮನುಷ್ಯರು ಆಸೆಯಿಂದ ತಮ್ಮ ಕೋರಿಕೆಗಳ ನಿಮಿತ್ತ ದೇವತೆಗಳನ್ನು ಪೂಜಿಸಿದರೆ, ಅದನ್ನು ಗಮನಿಸಿದ ದೇವರು, ಮನುಷ್ಯ ಯಾವ ದೇವತೆಯನ್ನು ಶ್ರದ್ಧೆಯಿಂದ ಪೂಜಿಸುತ್ತಿದ್ದಾನೋ ಆ ದೇವತೆ ಮೇಲೆ ಶ್ರದ್ಧೆ ಇರುವಹಾಗೆ ಮಾಡುತ್ತಿದ್ದಾನೆ. ದೇವರಿಗೆ ಪ್ರತಿಯೊಂದು ತಿಳಿದಿದೆ, ಪ್ರತಿಯೊಂದನ್ನು ನೋಡುತ್ತಿದ್ದಾನೆ. ದೇವರಿಗೆ ತಿಳಿಯದೆ ನಡೆಯುವುದು ಯಾವುದೂ ಇಲ್ಲ. ಆದ್ದರಿಂದ ಮನುಷ್ಯನಿಗೆ ಯಾವ ದೇವತೆಯ ಮೇಲೆ ಹೆಚ್ಚು ಶ್ರದ್ಧೆ ಇರುತ್ತದೋ, ಆ ಶ್ರದ್ಧೆಯನ್ನು ಹಾಗೆಯೇ ಇರುವಂತೆ ದೇವರೇ ಮಾಡಿ, ಆ ದೇವತೆಯನ್ನೇ ಮನುಷ್ಯ ಪೂಜಿಸುವಹಾಗೆ ಮಾಡುವನು. ದೇವರು ಕೊಟ್ಟ ಶ್ರದ್ಧೆಯಿಂದ ಮನುಷ್ಯ ತಾನು ನಂಬಿದ ದೇವತೆಯನ್ನೇಕೋರಿಕೆಗಳ ನಿಮಿತ್ತ ಪೂಜಿಸುತ್ತಿರುವಾಗ, ಆ ಕೋರಿಕೆಗಳನ್ನು ದೇವರೇ ನೆರವೇರಿಸುತ್ತಿದ್ದಾನೆ. ಅದು ತಿಳಿಯದ ಮನುಷ್ಯರು ತನ್ನ ಕೋರಿಕೆಗಳನ್ನು ತಾನು ಪೂಜಿಸಿದ ದೇವತೆಯೆ ನೆರವೇರಿಸಿದೆ ಎಂದು

ಅಂದುಕೊಳ್ಳುತ್ತಿದ್ದಾನೆ. ಈ ವಿಧವಾಗಿ ನೆರವೇರುವ ಕೋರಿಕೆಗಳನ್ನು ನೋಡಿ, ಇನ್ನೂ ಬೇಕಾಗಿರುವ ಕೋರಿಕೆಗಳನ್ನು ಕೋರುತ್ತಾ, ಚಿರಕಾಲವು ದೇವತೆಯ ಭಕ್ತಿಯಲ್ಲಿ ಮುಳುಗಿ ಹೋಗುತ್ತಿದ್ದಾರೆ. ಮನುಷ್ಯನಿಗೆ ದೇವರ ಜ್ಞಾನ ತಿಳಿಯದಿರುವುದರಿಂದ, ತಿಳುವಳಿಕೆ ಇಲ್ಲದವನಂತೆ ನೆರವೇರುವ ಪ್ರಪಂಚ ಕೋರಿಕೆಗಳ ಕಡೆ ಹೋಗುತ್ತಿದ್ದಾನೆ. ಇಷ್ಟು ವಿಧಗಳಾಗಿ ದೇವತೆಗಳ ಭಕ್ತರು ದೇವತೆಗಳಕಡೆ ಹೋಗುತ್ತಿದ್ದರೇ, ದೇವರ ಭಕ್ತರು ಜ್ಞಾನ ತಿಳಿದಿರುವವರಾಗಿ ದೇವರ ಕಡೆ ಹೋಗುತ್ತಿದ್ದಾರೆ.

**ಅವರ ಪ್ರಶ್ನೆ:– ನೀವು ಹೇಳುವ ವಿಷಯವನ್ನು ಅನುಸರಿಸಿ ದೇವತೆಗಳು ಬೇರೆಯೆಂದು, ದೇವರು ಬೇರೆಯೆಂದು ಈ ವ್ಯತ್ಯಾಸವನ್ನು ಮನುಷ್ಯರು ತಿಳಿಯಲಾರದೆ, ದೇವತೆಗಳನ್ನು ದೇವರೊಂದಿಗೆ ಸಮಾನವಾಗಿ ಲೆಕ್ಕಿಸಿಕೊಂಡಿದ್ದಾರೆಂದು ತಿಳಿಯುತ್ತಿದೆ.ಆದರೇ ಮನುಷ್ಯರು ಕೋರಿದ ಕೋರಿಕೆಗಳನ್ನು ದೇವರು ಯಾಕೆ ನೆರವೇರಿಸಬೇಕು? ದೇವರು ನೆರವೇರಿಸಿದರೂ ಮನುಷ್ಯರು ಆ ವಿಷಯವನ್ನು ತಿಳಿಯದವರಾಗಿ ದೇವತೆಗಳೇ ನೆರವೇರಿ ಸಿದ್ದಾರೆಂದು ಅಂದುಕೊಳ್ಳುತ್ತಿದ್ದಾರೆ ಅಲ್ಲವೇ! ಆದ್ದರಿಂದ ದೇವರು ಮನುಷ್ಯರ ಕೋರಿಕೆಗಳನ್ನು ನೆರವೇರಿಸಿದರೂ, ಆ ಕೋರಿಕೆಗಳನ್ನು ಯಾರು ತೀರಿಸಿದ್ದಾರೆಂಬ ಸತ್ಯವನ್ನು ತಿಳಿಯದಿರುವಾಗ, ದೇವರು ಅವರ ಕೋರಿಕೆಗಳನ್ನು ತೀರಿಸಿ ಪ್ರಯೋಜನವಿಲ್ಲ ಅಲ್ಲವೆ! ದೇವರು ಮನುಷ್ಯರ ಕೋರಿಕೆಗಳನ್ನು ನೆರವೇರಿಸುತ್ತಿರುವುದರಿಂದ ಮನುಷ್ಯರು ದೇವರಿಗೆ ವಿರುದ್ಧವಾಗಿ, ದೇವತಾ ಭಕ್ತರಾಗಿ ಬದಲಾಗಿಹೋಗುತ್ತಿದ್ದಾರೆ ಅಲ್ಲವೇ! ಹಾಗಿರುವಾಗ ದೇವರು ಯಾಕೆ ಮನುಷ್ಯರ ಕೋರಿಕೆಗಳನ್ನು ನೆರವೇರಿಸುತ್ತಿದ್ದಾನೆ?**

**ನಮ್ಮ ಉತ್ತರ :–** ದೇವರು ತನ್ನ ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿ, ಹಾಗೆಯೇ ತನ್ನ ಕೊನೆಯ ದೈವಗ್ರಂಥ ಖುರಾನ್‌ನಲ್ಲಿ ಈ ವಿಷಯವನ್ನು ಕುರಿತು ಹೇಳಿದ್ದಾನೆ. ತನಗೆ ಇಷ್ಟವಾದವರನ್ನು ಮಾತ್ರವೇ ತನ್ನಕಡೆ ಬರುವಂತೆ ಮಾಡುವುದಕ್ಕೆ, ತನಗೆ ಇಷ್ಟವಿಲ್ಲದವರನ್ನು ತನ್ನ ಮಾರ್ಗದಿಂದ ದೂರವಾಗಿ ಹೋಗುವುದಕ್ಕೆ, ತನ್ನ ಕಡೆ ಬಾರದಂತೆ ಮಾಡುವುದಕ್ಕೆ, ದೇವರು ಮಾಡುವ ಕಾರ್ಯಗಳಲ್ಲಿ ಇದೊಂದು ಕಾರ್ಯ. ಈ ಕಾರ್ಯದಲ್ಲಿ ಮನುಷ್ಯರ

ಕೋರಿಕೆಗಳನ್ನು ನೆರವೇರಿಸಿ, ನೆರವೇರಿಸಿರುವುದು ದೇವತೆಗಳೇಯೆಂದು ಭ್ರಮಿಸುವಂತೆ ಮಾಡಿ ಮನುಷ್ಯರನ್ನು ತನ್ನಿಂದ ದೂರವಾಗಿ ಕಳುಹಿಸುತ್ತಿದ್ದಾನೆ. ದೇವರು ಅದೇ ಕೆಲಸವಾಗಿ ಮಾಡುತ್ತಿರುವ ಕಾರ್ಯಗಳಲ್ಲಿ ಇದೊಂದು. ದೇವರ ಕಾರ್ಯಗಳನ್ನು ಮನುಷ್ಯ ಸ್ವಲ್ಪವಾದರೂ ಗುರುತಿಸಲಾರನು. ಏಕೆಂದರೇ! ಇದು ದೇವರ ಕಾರ್ಯವೇ ಆದರೂ ಅದನ್ನು ಪ್ರಕೃತಿಯೇ ಮಾಡುತ್ತಿದೆ. ಆದ್ದರಿಂದ ದೇವರು ಮನುಷ್ಯನಿಗೆ ಒಳ್ಳೆಯದು ಮಾಡಿದರೂ, ಕೆಟ್ಟದು ಮಾಡಿದರೂ ಮನುಷ್ಯ ಸ್ವಲ್ಪವಾದರೂ ಗುರುತಿಸಲಾರನು.

**ಅವರ ಪ್ರಶ್ನೆ:– ದೇವರು ಮನುಷ್ಯನನ್ನು ತನ್ನಕಡೆಯಿಂದ ದಾರಿ ಮರಳಿಸಿ ಪಕ್ಕದಾರಿಯಲ್ಲಿ ಹೋಗುವಂತೆ ಮಾಡುವುದರಲ್ಲಿ ಇದೊಂದು ಕಾರ್ಯವೆಂದು ಹೇಳಿದ್ದಾರೆ. ದೇವರು ಮನುಷ್ಯರು ಕೋರಿಕೊಂಡ ಕೋರಿಕೆಗಳನ್ನು ನೆರವೇರಿಸುವುದೇ ಅಲ್ಲದೇ ಮನುಷ್ಯನನ್ನು ಅಜ್ಞಾನ ಮಾರ್ಗದೊಳಗೆ ಕಳುಹಿಸಿ, ಜ್ಞಾನ ಮಾರ್ಗದೊಳಗೆ ಬರದೆ ಮಾಡುವ ವಿಧಾನಗಳಲ್ಲಿ ಮತ್ತೊಂದು ವಿಧಾನವು ಹೇಗಿದೆಯೋ ತಿಳಿಸಿರಿ?**

**ನಮ್ಮ ಉತ್ತರ:–** ಸಾಧಾರಣ ಪ್ರಜೆಗಳನ್ನು ತನ್ನ ದಾರಿಯೊಳಗೆ ಬಾರದಂತೆ ಮಾಡುವುದಕ್ಕೆ ದೇವರು ಅದೇ ಕೆಲಸವಾಗಿ ಕಾಣಿಸದ ದೇವತೆಗಳನ್ನು ಸೃಷ್ಟಿಸಿದ್ದಾನೆ. ಸಾಮಾನ್ಯ ಪ್ರಜೆಗಳೆಲ್ಲರೂ ತಮ್ಮಲ್ಲಿನ ಕೋರಿಕೆಗಳ ಆಧಾರದಿಂದ ದೇವತೆಗಳಕಡೆ ಹೋಗಿ, ದೇವರು ಒಬ್ಬನಿದ್ದಾನೆಂಬ ವಿಷಯವನ್ನು ಕೂಡಾ ಮರೆತುಹೋಗಿದ್ದಾರೆ. ಇದೆಲ್ಲಾ ಸಾಮಾನ್ಯ ಪ್ರಜೆಗಳ ವಿಷಯವಾಗಿರುವಾಗ, 'ದೇವರು' ಎಂಬ ನಂಬಿಕೆ ಇರುವವರು ಕೆಲವರು ಪ್ರಜೆಗಳು ದೇವತೆಗಳನ್ನು ನಂಬದೇ ಹೋದರೂ, ವೇಷಧಾರಣೆಯಲ್ಲಿ ಸ್ವಾಮೀಗಳಾಗಿರುವ ಕೆಲವರು ಸ್ವಾಮೀಜಿಗಳನ್ನು ನಂಬಿ ಅವರನ್ನೇ ದೇವರಾಗಿ ಭಾವಿಸಿ, ಅವರನ್ನೇ ಅನುಸರಿಸುತ್ತಾ ದೇವರನ್ನು ಮರೆತುಹೋಗಿದ್ದಾರೆ. ಅವರು ಆಶ್ರಯಿಸಿರುವ ಸ್ವಾಮೀಜಿ, ಎಷ್ಟೋ ಮಹತ್ವಗಳು ಮಾಡುವವನಾಗಿ ಇದ್ದು, ತಮ್ಮ ಕೋರಿಕೆಗಳನ್ನು ನೆರವೇರಿಸುವೆನೆಂದು ಹೇಳುವವರಾಗಿ ಇರುವುದರಿಂದ, ಅವರು ಕೆಲವು ಕಾರ್ಯಗಳನ್ನು ನಂಬಲಾರದ ವಿಧವಾಗಿ ಮಾಡುವುದರಿಂದ, ಭಕ್ತರಾದವರು ಅವರನ್ನು ಪೂರ್ತಿಯಾಗಿ ನಂಬಿ

ಈತನೇ ಪ್ರತ್ಯಕ್ಷ ದೈವವೆಂದೂ, ಕಾಣಿಸುವ ದೇವರೆಂದು ಹೇಳುತ್ತಿರುತ್ತಾರೆ. ಅಂತಹವರಿಗೆ ದೇವರ ಜ್ಞಾನವು ಸ್ವಲ್ಪವಾದರೂ ರುಚಿಸುವುದಿಲ್ಲ. ದೇವರ ಜ್ಞಾನದೊಂದಿಗೆ ನಮಗೆ ಕೆಲಸವೇ ಇಲ್ಲ, ಅದರ ಅವಶ್ಯವೇ ಇಲ್ಲ ಎಂದು ಹೇಳುತ್ತಿರುತ್ತಾರೆ. ಈ ವಿಧವಾಗಿ ಕೆಲವರು ಭಕ್ತಿ ಹೊಂದಿದ್ದರೂ ಆ ಭಕ್ತಿಯನ್ನು ಕಾಣಿಸುವ ಬಾಬಾಗಳ ಮೇಲೆ, ಸ್ವಾಮೀಜಿಗಳ ಮೇಲೆ ತೋರುತ್ತಾ, ದೇವರ ಜ್ಞಾನವನ್ನು ದೇವರನ್ನು ಪೂರ್ತಿಯಾಗಿ ಪಕ್ಕಕ್ಕಿಟ್ಟವರು ಇದ್ದಾರೆ. ಕೆಲವರು ದೇವತೆಗಳ ಮೇಲೆ ಭಕ್ತಿಯೊಂದಿಗೆ ದೇವರನ್ನು ವಿಸ್ಮರಿಸಿದರೆ, ಕೆಲವರು ಬಾಬಾಗಳ ಮೇಲೆ ಭಕ್ತಿಯಿಂದ ಅವರನ್ನೇ ದೇವರೆಂದು ನಂಬಿ ದೇವರ ಜ್ಞಾನಕ್ಕೆ ದೂರವಾಗಿ ಹೋಗುತ್ತಿದ್ದಾರೆ. ಆ ವಿಧವಾಗಿ ದೇವರ ಜ್ಞಾನಕ್ಕೆ ದೂರವಾಗಿ ಹೋಗಿರುವ ಅನೇಕ ಸಂಘಟನೆಗಳು ಇವೆ. ಆದರೇ ಈ ಎರಡು ವಿಧಾನಗಳಲ್ಲಿಯೇ ಹೆಚ್ಚು ಜನ ಪ್ರಜೆಗಳು ದಾರಿತಪ್ಪಿ ಹೋಗುತ್ತಿದ್ದಾರೆ. ಅಂಥವರಿಗೆ ದೇವರನ್ನು ಕುರಿತು ಹೇಳಿದರೂ ಅವರುಸ್ವಲ್ಪವಾದರೂ ಕೇಳುವ ಸ್ಥಿತಿಯಲ್ಲಿ ಇರುವುದಿಲ್ಲ. ಕಾಣಿಸದ ದೇವತೆಗಳನ್ನು ನಂಬಿ, ದೇವರ ವಿಷಯವನ್ನು ಮರೆತು ಹೋದವವರನ್ನು, ಹಾಗೆಯೇ ಕಾಣಿಸುವ ಬಾಬಾಗಳನ್ನು, ಸ್ವಾಮೀಜಿಗಳನ್ನು ನಂಬಿ ದೇವರ ಜ್ಞಾನಕ್ಕೆ ದೂರವಾಗಿ ಇರುವವರನ್ನು ಸರಿಮಾಡಬೇಕೆಂದೂ, ಅವರಿಗು ಸಹ ದೇವರ ಜ್ಞಾನವನ್ನು ತಿಳಿಸಬೇಕೆಂದು ಯಾರಾದರೂ ಪ್ರಯತ್ನಿಸಿದರೂ, ಅಂಥವರನ್ನು ತಿಳುವಳಿಕೆ ಇಲ್ಲದವರಂತೆ ಲೆಕ್ಕಿಸಿ ಅವಹೇಳನ ಮಾಡುವವರು ಇದ್ದಾರೆ. ಅಜ್ಞಾನದಲ್ಲಿ ಮುಳುಗಿಹೋಗಿರುವವರು, ದೇವರಿಂದ ಅಜ್ಞಾನಿಗಳೆಂದು ಮುದ್ರೆ ಹಾಕಲ್ಪಟ್ಟಿರುವವರು, ದೇವರಿಂದ ಅಪಮಾರ್ಗದಲ್ಲಿ (ಅಜ್ಞಾನ ಮಾರ್ಗದಲ್ಲಿ) ಹೋಗಬೇಕೆಂದು ತೀರ್ಪು ಹಾಕಲ್ಪಟ್ಟವರು ಎಂದಿಗೂ ಜ್ಞಾನಿಗಳಾಗಿ ಬದಲಾಗುವುದಿಲ್ಲ, ಅವರಿಗೆ ಜ್ಞಾನವು ರುಚಿಸುವುದಿಲ್ಲ. ದೇವರೇ ಸ್ವತಃವಾಗಿ ಅವರನ್ನು ತಪ್ಪು ದಾರಿಯಲ್ಲಿ ಕಳುಹಿಸಿ ತನ್ನಕಡೆ ಬಾರದಂತೆ ಮಾಡಿಕೊಳ್ಳಬೇಕೆಂದು ಕೊಂಡಿದ್ದಾನೆ. ಆದಕಾರಣ ಅವರನ್ನು ಯಾರೂ ಬದಲಾಯಿಸಲಾರರು. ಅಂತಹ ಸ್ಥಿತಿಯಲ್ಲಿರುವವರು ಕೂಡಾ ತಾವು ಜ್ಞಾನಿಗಳೇ ಎಂದು ಹೇಳಿಕೊಳ್ಳುತ್ತಾ, ತಮಗೆ ತಿಳಿದಿರುವ ಜ್ಞಾನವನ್ನೇ ದೇವರ ಜ್ಞಾನವಾಗಿ

ಲೆಕ್ಕಿಸುತ್ತಿರುತ್ತಾರೆ. ಅವರ ಬಳಿ ಇರುವ ಜ್ಞಾನವು, ಅವರಿಗೆ ತಿಳಿದಿರುವ ಜ್ಞಾನವು ಪೂರ್ತಿ ಅಸತ್ಯವಾದುದೆಂದು ಅವರಿಗೆ ತಿಳಿದಿಲ್ಲ.

**ಅವರ ಪ್ರಶ್ನೆ:- ಕೆಲವರು ದೇವರಿದ್ದಾನೆಂದು, ದೇವರು ಒಬ್ಬನೇ ಎಂದು, ಇತರ ದೇವತೆಗಳನ್ನು ಪೂಜಿಸುವುದು ಅಜ್ಞಾನವೆಂದು ಕ್ರೈಸ್ತ, ಇಸ್ಲಾಮ್ ಸಮಾಜಗಳಲ್ಲಿ ಹೇಳುತ್ತಿರುತ್ತಾರೆ. ಇವರು ವಿಗ್ರಹಾರಾಧನೆ ಮಾಡುವುದಿಲ್ಲ. ವಿಗ್ರಹಾರಾಧನೆಯನ್ನು ಪೂರ್ತಿಯಾಗಿ ಖಂಡಿಸುವರು. ಆದರೂ ದೇವರು ಹೇಳಿರುವ ಜ್ಞಾನಕ್ಕೆ ಪೂರ್ತಿ ವಿರುದ್ಧ ಭಾವದಲ್ಲಿ ಇದ್ದೂ, ತಾವು ಸರಿಯಾದ ಭಾವದಲ್ಲಿ ಇದ್ದೇವೆಂದು, ತಮಗೆ ತಿಳಿದಿರುವುದೇ ನಿಜವಾದ ಜ್ಞಾನವೆಂದು ಹೇಳುತ್ತಿರುತ್ತಾರೆ. ವಿಗ್ರಹಾರಾಧಕರನ್ನು, ಬಾಬಾಗಳನ್ನು ಪೂರ್ತಿಯಾಗಿ ನಂಬಿದವರನ್ನು ಪೂರ್ತಿಯಾಗಿ ಅಜ್ಞಾನಿಗಳೆಂದೂ, ಅವರನ್ನು ದೇವರು ಅದೇಕೆಲಸವಾಗಿ ತಪ್ಪುದಾರಿಯಲ್ಲಿ ಕಳುಹಿಸುತ್ತಿದ್ದಾನೆಂದೂ, ಅವರಿಗೆ ಹಾಗೆ ತೀರ್ಪು ಹಾಕಲ್ಪಟ್ಟಿದೆಯೆಂದು ನೀವು ಹೇಳಿದ್ದೀರ. ವಿಗ್ರಹಾರಾಧನೆ ಮಾಡದಂತೆ ದೇವರು ಒಬ್ಬನೇ ಎಂದು ನಂಬಿರುವವರು ಬಹಳಜನ ಇದ್ದರೂ ಅವರಿಗೆ ದೇವರ ಜ್ಞಾನದಲ್ಲಿನ ನಿಜವಾದ ಭಾವ ತಿಳಿದಿಲ್ಲ. ದೈವಗ್ರಂಥಗಳಲ್ಲಿನ ದೇವರ ವಾಕ್ಯಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದ ಸ್ಥಿತಿಯಲ್ಲಿರುವವರು ಎಷ್ಟೋ ಜನರಿದ್ದಾರೆ. ಅಂಥವರು ತಮ್ಮ ಗುರುಗಳು, ಮತಹಿರಿಯರು ಹೇಳಿದಂತೆ ಕೇಳಿ ಅವರು ಹೇಳಿರುವುದೇ ನಿಜವಾದ ಜ್ಞಾನವೆಂದು ನಂಬಿರುತ್ತಾರೆ. ತಮ್ಮ ಮತ ಹಿರಿಯರು ಮತ ಜ್ಞಾನವನ್ನೇ ಹೇಳಿದರೇ ಅದನ್ನೇ ದೈವಜ್ಞಾನವಾಗಿ ನಂಬಿದವರು ಇದ್ದಾರೆ. ಅಂಥವರು ದೈವಗ್ರಂಥಗಳಲ್ಲಿನ ದೈವಜ್ಞಾನವನ್ನು ತಿಳಿಯದವರಾಗಿ ಇರುತ್ತಾರೆ. ವಿಗ್ರಹಾರಾಧಕರನ್ನು, ದೇವತೆಗಳ ಆರಾಧಕರನ್ನು, ಬಾಬಾಗಳನ್ನು, ಸ್ವಾಮೀಜಿಗಳನ್ನು ಅನುಸರಿಸುವವರನ್ನು ಮಾರ್ಗ ತಪ್ಪಿದವರಾಗಿ ಲೆಕ್ಕಿಸಿದಾಗ, ದೈವಜ್ಞಾನವನ್ನು ತಿಳಿಯದೇನೆ ತಿಳಿದಿದ್ದೇವೆಂದು ಅಂದುಕೊಳ್ಳುವವ ರನ್ನು ಏನೆನ್ನಬೇಕು.**

**ನಮ್ಮ ಉತ್ತರ:-** ದೇವರು ತನಗೆ ಇಷ್ಟವಿಲ್ಲದವರಿಗೆ ತನ್ನ ಜ್ಞಾನದ ಒಂದು ಗಟ್ಟು (ತೀರ) ಸಿಗದೆಯಿರುವಂತೆ ಮಾಡುತ್ತೇನೆಂದು" ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಹೇಳಿದ್ದಾನೆ ಹಾಗೆಯೆ ಕೊನೆಯ ದೈವಗ್ರಂಥ ಖುರಾನ್‌ನಲ್ಲಿ

ಕೂಡಾ ಹೇಳಿದ್ದಾನೆ. ಕಾಣಿಸದ ದೇವತೆಗಳನ್ನು ವಿಗ್ರಹಗಳಾಗಿ ಪೂಜಿಸುವವರನ್ನೇ ಅಲ್ಲದೇ, ಕಾಣಿಸುವ ಸ್ವಾಮೀಜಿಗಳು, ಬಾಬಾಗಳನ್ನು ನಂಬಿ ದೇವರನ್ನು ಲೆಕ್ಕ ಮಾಡದವರನ್ನು ತನ್ನಕಡೆಗೆ ಬರದಂತೆ ಮಾಡುವುದೆಂಬ ಎರಡು ವಿಧಾನಗಳೇ ಅಲ್ಲದೇ ಇನ್ನೂ ಎಷ್ಟೋ ವಿಧಾನಗಳ ಮೂಲಕ ದೇವರು ತನ್ನಿಂದ ದೂರ ಮಾಡುತ್ತಿದ್ದಾನೆ. ದೇವರು ಹೇಗೆ ಮಾಡುವನೋ ಮೊದಲೇ ಯಾರೂ ಊಹಿಸಲಾರರು. ನಮಗೆ ತಿಳಿದಿರುವ ವಿಧಾನಗಳು ಕೆಲವೇ ಆದರೇ ತಿಳಿಯದ ವಿಧಾನಗಳು ಎಷ್ಟೋ ಇವೆ. ಸಂಪೂರ್ಣ ಜ್ಞಾನಿಯಾದವನಿಗೆ ಮಾತ್ರ ಕೆಲವು ವಿಧಾನಗಳು ತಿಳಿಯುವವು. ಜ್ಞಾನ ಇಲ್ಲದವನಿಗೆ ಏನೂ ತಿಳಿದಿಲ್ಲ. ಜ್ಞಾನ ವಿಲ್ಲದವನು ದೇವರಿಗೆ ದೂರವಾದರೂ ನಾನು ಹತ್ತಿರವಾಗಿಯೇ ಇದ್ದೇನೆಂದು ಅಂದುಕೊಳ್ಳುತ್ತಿರುತ್ತಾನೆ. ಕಾಣಿಸದ ದೇವತೆಗಳನ್ನು, ಕಾಣಿಸುವ ಮನುಷ್ಯರನ್ನು ನಂಬಿದವರನ್ನು ಜ್ಞಾನ ಮಾರ್ಗದಲ್ಲಿ ಕಳುಹಿಸದೆ ದೇವರು ಅಪಮಾರ್ಗದಲ್ಲಿ ಕಳುಹಿಸುವನೆಂದು ಅಂದುಕೊಂಡಿದ್ದೇವೆ ಅಲ್ಲವೇ! ಅದೇ ಅಲ್ಲದೇ ತನ್ನ ಜ್ಞಾನದ ಮೇಲೆ ಶ್ರದ್ಧೆ ಇಲ್ಲದವನನ್ನು ಕೂಡಾ ದೇವರು ತನ್ನಕಡೆ ಬಾರದಂತೆ ಮಾಡಬಲ್ಲನು. **ದೇವರ ಮೇಲೆ ವಿಶ್ವಾಸವಿದ್ದು, ದೇವರ ಜ್ಞಾನದ ಮೇಲೆ ಶ್ರದ್ಧೆ ಇಲ್ಲದವನನ್ನು ಕೂಡಾ ದೇವರು ತನ್ನ ದಾರಿಯಿಂದ ತಪ್ಪಿಸಿ ದೂರವಾಗಿ ಕಳುಹಿಸುವನು. ದೇವರ ಮೇಲೆ ವಿಶ್ವಾಸ ಶೇ.ನೂರಕ್ಕೆ ನೂರು ಇದ್ದರೂ, ದೇವರ ಜ್ಞಾನದ ಮೇಲೆ ಶ್ರದ್ಧೇ ಇಲ್ಲದೇ ಹೋದರೇ ಅಂಥವರ ವಿಶ್ವಾಸವನ್ನು ದೇವರು ಲೆಕ್ಕಿಸುವುದಿಲ್ಲ. ಮನುಷ್ಯನ ಒಂದು ವಿಶ್ವಾಸವು ದೇವರಿಗೆ ಅವಶ್ಯವಿಲ್ಲ. ದೇವರ ಜ್ಞಾನದ ಮೇಲಿರುವ ಶ್ರದ್ಧೆ ಮಾತ್ರವೇ ದೇವರಿಗೆ ಅವಶ್ಯ.**

ಇಲ್ಲಿ ಒಂದು ಚಿಕ್ಕ ಉದಾಹರಣೆಯನ್ನು ಗಮನಿಸೋಣ. ಒಂದು ಜಿಲ್ಲೆಯ ಪ್ರಜೆಗಳೆಲ್ಲರೂ ಒಂದು ವಂಶದ ಹೆಸರು ಹೇಳುತ್ತಾ ನಾವೆಲ್ಲರೂ ಆ ವಂಶಕ್ಕೆ ಸಂಬಂಧಿಸಿದ ಭಕ್ತರೆಂದು ಹೇಳುತ್ತಿದ್ದರು. ಇನ್ನೂ ಕೆಲವರನ್ನು ವಿವರ ಕೇಳಿದರೇ ನಾವುಪಕ್ಕದ ದೇಶದಲ್ಲಿ ಗೋಟೂರು ಗುಡಾರಂ ರಾಜುರವರ ಭಕ್ತರೆಂದು ಹೇಳುತ್ತಿದ್ದರು. ಗೋಟೂರು ಗುಡಾರದ ರಾಜನ ಭಕ್ತರು ಯಾರಾದರೂ 'ಸಾಲ ಮಾಡುವುದಿಲ್ಲ, ಸಾಲ ಕೊಡುವುದಿಲ್ಲ' ಅದು ನಮ್ಮ ಭಕ್ತರ

ನಿಯಮವೆಂದೂ, ಸಾಲ ಕೇಳುವವನಾಗಲೀ, ಸಾಲ ಕೊಡುವವನಾಗಲೀ ಗುಡಾರದ ರಾಜನ ಭಕ್ತರಿಗೆ ಸಂಬಂಧಿಸಿದವರು ಅಲ್ಲವೆಂದು ಹೇಳುತ್ತಿದ್ದರು. ಹಾಗೆ ಒಂದು ಜಿಲ್ಲೆ ಪೂರ್ತಿ ಪ್ರಜೆಗಳಲ್ಲಿ ಶೇಕಡ 80 ಜನ ಗುಡಾರದರಾಜನ ಭಕ್ತರೆಂದು ಹೇಳಿಕೊಳ್ಳುತ್ತಿದ್ದರು. ಉಳಿದ ಸುಮಾರು ಶೇ. 20 ರಷ್ಟು ಜನ ಗುಡಾರದರಾಜನ ಭಕ್ತರಲ್ಲವೆಂದು ತಿಳಿದುಹೋಯಿತು. ಏಕೆಂದರೇ ಗುಡಾರದರಾಜನ ಭಕ್ತರು ತಲೆಮೇಲೆ ಗೂಡಾರದಂತಹ ಒಂದು ಟೋಪಿಯನ್ನು ಧರಿಸುತ್ತಿದ್ದರು. ಉಳಿದ ಪ್ರಜೆಗಳು ಟೋಪಿ ಧರಿಸುತ್ತಿರಲಿಲ್ಲ.. ಆದ್ದರಿಂದ ಗುಡಾರದರಾಜನ ಭಕ್ತರನ್ನು ಸುಲಭವಾಗಿ ಗುರುತಿಸಬಹುದು. ಗುಡಾರದ ರಾಜನ ಭಕ್ತರ ಕುಟುಂಬದಲ್ಲಿ ಹುಟ್ಟಿರುವವರೆಲ್ಲರೂ ದೊಡ್ಡವರಾದ ಮೇಲೆ ಗುಡಾರದ ರಾಜನ ಭಕ್ತರೆಂದು ಹೇಳಿಕೊಳ್ಳುತ್ತಿದ್ದರು. ಈ ವಿಧವಾಗಿ ಗುಡಾರದ ರಾಜನ ಭಕ್ತರ ಸಂಖ್ಯೆ ಬೆಳೆದು ಹೋಗುತ್ತಿತ್ತು. ಗುಡಾರದ ರಾಜನ ಭಕ್ತರಲ್ಲಿ ಕೆಲವು ಒಳ್ಳೆಯ ಲಕ್ಷಣಗಳು ಇರುತ್ತಿದ್ದವು. ಅವರು ಯಾರಬಳಿ ಸಾಲ ತೆಗೆದುಕೊಳ್ಳುವುದಿಲ್ಲ, ಆದಕಾರಣ ಅವರು ಸಾಲಗಳಪಾಲಾಗುವ ಅವಕಾಶವೇ ಇಲ್ಲ. ಹಾಗೆಯೇ ಅವರು ಸಾಲ ಕೊಡುವುದಿಲ್ಲ, ಆದಕಾರಣ ಅವರು ಬಡ್ಡಿ ಕಿತ್ತುಕೊಂಡು ಪಾಪ ಸಂಪಾದಿಸಿಕೊಳ್ಳುವ ಅವಕಾಶ ಕೂಡಾ ಇಲ್ಲ. ಇಂತಹ ಒಳ್ಳೆಯ ಕೆಲಸವೇ ಅಲ್ಲದೇ ತಮಗೆ ಗೋಟೂರು ಗುಡಾರದ ರಾಜ ಏನೂ ಕೊಡದೆ ಹೋದರೂ ಆತನ ಭಕ್ತರೆಂದು ನಿಸ್ವಾರ್ಥವಾಗಿ ಹೇಳಿಕೊಳ್ಳುತ್ತಿದ್ದರು. ಈ ವಿಧವಾಗಿ ಉಳಿದ ಪ್ರಜೆಗಳಿಗಿಂತಲೂ ಸ್ವಲ್ಪ ಪ್ರತ್ಯೇಕವಾಗಿ ಕಾಣಿಸುತ್ತಿದ್ದರು.

ಗೋಟೂರು ಗುಡಾರದ ರಾಜನ ಭಕ್ತರೆಂದು ಹೇಳಿಕೊಳ್ಳುವವರೆಲ್ಲಾ ಗುಡಾರಂರಾಜನನ್ನು ಕುರಿತು ಹೆಚ್ಚಾಗಿ ಹೊಗಳಿ ಹೇಳುತ್ತಿದ್ದರು. ಗುಡಾರದಂತಹ ಟೋಪಿಗಳು ಧರಿಸುವವರೆಲ್ಲರೂ ಗುಡಾರಂ ರಾಜನಿಗಿಂತಲೂ ಮೀರಿದ ರಾಜ ಭೂಮಂಡಲದಲ್ಲಿ ಇಲ್ಲವೆಂದು, ಆತನಿಗೆ ಸಮಾನವಾದ ರಾಜನು ಕೂಡಾ ಇಲ್ಲವೆಂದು ಹೇಳುತ್ತಿದ್ದರು. ಹಾಗೆ ಹೇಳುವುದೇ ಅಲ್ಲದೆ ಪ್ರತಿ ದಿನವು ಏಳು ಸಲ ಗೋಟೂರು ಗುಡಾರದ ರಾಜನನ್ನು ಪ್ರತ್ಯೇಕವಾಗಿ ಹೊಗಳುತ್ತಿದ್ದರು. ಪ್ರಾರ್ಥನಾ ಮಂದಿರಗಳನ್ನು ಹೋಲಿರುವ ಹೊಗಳಿಕೆ ಮಂದಿರಗಳನ್ನು

ನಿರ್ಮಿಸಿಕೊಂಡು ಗುಡಾರದ ರಾಜನನ್ನು ಎಲ್ಲರೂ ಸೇರಿ ಹೊಗಳುತ್ತಿದ್ದರು. ಅವರ ಹೃದಯಗಳಲ್ಲಿ ಗುಡಾರದ ರಾಜನನ್ನು ದೊಡ್ಡದಾಗಿ ಮುದ್ರಿಸಿಕೊಂಡಿದ್ದಾರೆ. ತಮ್ಮ ಕುಟುಂಬದಲ್ಲಿ ಹುಟ್ಟಿದ ಮಕ್ಕಳು ಕೂಡಾ ಗುಡಾರದ ರಾಜನ ಹಾಡನ್ನೇ ಹಾಡುತ್ತಿದ್ದರು. ಆತನ ಭಕ್ತರೆಂದೇ ಹೇಳುತ್ತಿದ್ದರು. ಗುಡಾರದ ಆಕಾರವಿರುವ ಟೋಪಿಯನ್ನೇ ಧರಿಸುತ್ತಿದ್ದರು. ಈ ವಿಧವಾಗಿ ಗುಡಾರದ ರಾಜನ ಭಕ್ತರಾಗಿ ಇರುವವರು ಉಳಿದ ಪ್ರಜೆಗಳಿಗಿಂತಲೂ ಜೀವನ ವಿಧಾನದಲ್ಲಾಗಲೀ, ಭಕ್ತಿ ವಿಧಾನದಲ್ಲಾಗಲೀ ಪ್ರತ್ಯೇಕತೆ ಹೊಂದಿ ಬದುಕುತ್ತಿದ್ದರು. ಪ್ರತ್ಯೇಕ ಸಮಾಜವಾಗಿ ತಯಾರಾದ ಗುಡಾರದ ರಾಜನ ಭಕ್ತರು ಮುಂದೆಬರುವ ಪೀಳಿಗೆಯವರು ಕೂಡಾ ಅದೇ ಭಕ್ತಿ ವಿಧಾನವು, ಅದೇ ಜೀವನ ವಿಧಾನವನ್ನು ಹೊಂದಿರಬೇಕೆಂದು ಎರಡು ಗ್ರಂಥಗಳನ್ನು ಬರೆದಿಟ್ಟುಕೊಂಡಿದ್ದಾರೆ. ಭಕ್ತಿ ವಿಧಾನ ಹೊಂದಿರುವ ವಿಷಯಗಳೆಲ್ಲಾ ಒಂದು ಗ್ರಂಥವಾಗಿ, ಜೀವನ ವಿಧಾನಗಳು ಹೊಂದಿರುವ ವಿಷಯಗಳೆಲ್ಲಾ ಒಂದು ಗ್ರಂಥವಾಗಿ ತಯಾರು ಮಾಡಿಕೊಂಡಿದ್ದಾರೆ.

ಕೆಲವು ನೂರು ವರ್ಷಗಳು ಕಳೆದರೂ ಪಕ್ಕದ ದೇಶದಲ್ಲಿರುವ ಗೋಟೂರು ಗುಡಾರದ ರಾಜನು ಸಜೀವವಾಗಿಯೇ ಇದ್ದನು. ಆಯಸ್ಸನ್ನು ಹೆಚ್ಚಿಸುವ ಒಂದು ಗಿಡ ಮೂಲಿಕೆ ಆತನ ಬಳಿ ಇರುವುದರಿಂದ ಗುಡಾರದ ರಾಜನ ಆಯಸ್ಸು ಮುಗಿದು ಹೋಗುವ ಪ್ರಸ್ತಾವನೆಯೇ ಇಲ್ಲದೇ ದಿನದಿನಕ್ಕು ಆಯಸ್ಸು ಬೆಳೆಯುತ್ತಿತ್ತು. ಆದ್ದರಿಂದ ಅಂದಿನ ಕಾಲದಲ್ಲಿ ಗುಡಾರದ ರಾಜ ಪ್ರತ್ಯೇಕತೆ ಹೊಂದಿದ್ದನು. ಗುಡಾರದ ರಾಜ ಎಲ್ಲರಹಾಗಿರುವ ಮನುಷ್ಯ ನಲ್ಲವೆಂದೂ, ಆತನು ದೊಡ್ಡ ವ್ಯಕ್ತಿ ಎಂದೂ ಹೇಳುವ ಗುಡಾರದ ಟೋಪಿ ಸಮಾಜದ ಮನುಷ್ಯರು ಯಾರಾಗಲಿ, ಗುಡಾರದ ರಾಜನನ್ನು ನೋಡಿರಲಿಲ್ಲ. ಎಷ್ಟು ವರ್ಷಗಳು ಬದಲಾದರೂ ಗುಡಾರದ ರಾಜ ಒಂದೇ ವಿಧವಾಗಿ ಇರುತ್ತಿದ್ದನು. ಆತನ ಭಕ್ತರೆಂದು ಹೇಳಿಕೊಳ್ಳುವವರು ಎಷ್ಟೋ ಜನ ಕಾಲಕ್ರಮದಲ್ಲಿ ಹೋದರೆ ಹೊಸಬರು ಬಹಳಜನ ಬಂದಿದ್ದರು. ಕಾಲಕಳೆಯುತ್ತಿದ್ದಂತೆ ಜೀವನ ವಿಧಾನದ ಮೇಲೆ ಗುಡಾರದ ರಾಜನ ಭಕ್ತರು ಹೆಚ್ಚಾಗಿ ಶ್ರದ್ಧೆ ತೋರಿಸಿದರು. ಆದರೇ ಭಕ್ತಿ ವಿಧಾನದ ಮೇಲೆ ಹೆಚ್ಚು ಶ್ರದ್ಧೆ ತೋರಲಾರದೆ ಹೋದರು.

ಇರುವ ಭಕ್ತಿಯನ್ನು ಕಳೆದುಕೊಳ್ಳದೇ ಗುಡಾರದ ರಾಜನನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು. ಹೀಗೆ ಕಾಲ ಕಳೆಯುತ್ತಿರುವಾಗ ಒಂದು ದಿನ ಇದ್ದಕ್ಕಿದ್ದಹಾಗೆ ಗುಡಾರದ ರಾಜ ಪಕ್ಕದ ದೇಶದಲ್ಲಿ ತನ್ನ ಭಕ್ತರಾಗಿ ಹೇಳಿಕೊಳ್ಳುತ್ತಿದ್ದವರ ಬಳಿಗೆ ಬಂದನು. ಗೋಟೂರಿ ಗುಡಾರದ ರಾಜನ ಭಕ್ತರೆಂದು ಹೇಳಿಕೊಳ್ಳುವ ಸಮಾಜದ ಒಂದು ಪ್ರಜೆಗಳ ಮಧ್ಯದೊಳಗೆ ರಾಜರವರು ಬಂದರೂ, ಆತನ ಮುಂದೆಯೇ ಆತನನ್ನು ಹೊಗಳುವ ಮನುಷ್ಯರು ಆತನನ್ನು ಗುರುತಿಸಲಿಲ್ಲ, ಕನಿಷ್ಟ ಮಾತನಾಡಿಸಲೂ ಇಲ್ಲ. ಗೋಟೂರು ಗುಡಾರದರಾಜ ಹೇಗಿರುವುದು ಯಾರಿಗೂ ತಿಳಿದಿಲ್ಲ, ಆದಕಾರಣ ಆತನು ಪ್ರತ್ಯಕ್ಷವಾಗಿ ಬಂದರೂ ಯಾರೂ ಮಾತನಾಡಿಸಲಿಲ್ಲ.

ಗೋಟೂರು ಗುಡಾರದ ರಾಜನ ಹೆಸರನ್ನು ಎಲ್ಲರೂ ಹೇಳುತ್ತಿದ್ದರೂ, ಆತನನ್ನು ಎಲ್ಲರೂ ಹೊಗಳುತ್ತಿದ್ದರೂ, ಆತನ ಹೆಸರಿರುವ ಟೋಪಿಯನ್ನು ಧರಿಸಿ ತಮ್ಮ ಭಕ್ತಿಯನ್ನು ತೋರಿಸಿಕೊಳ್ಳುತ್ತಿದ್ದರೂ, ಗುಡಾರದ ರಾಜ ಪ್ರತ್ಯಕ್ಷವಾಗಿ ಹೀಗಿರುವನೆಂಬ ವಿಷಯ ತಿಳಿಯದಿರುವುದರಿಂದ, ಆತನು ಅವರ ನಡುವೆ ಭಕ್ತಿ ಇದ್ದರೂ, ಗೌರವವಿಲ್ಲದೇ ಹೋಗಿದೆ. ಪ್ರತೀದಿನ ತನ್ನ ಗಂಡನನ್ನು ಹೊಗಳುವ ಹೆಂಡತಿಗೆ ಗಂಡನ ಮೇಲೆ ಭಕ್ತಿ ಇದ್ದರೂ ಹೆಂಡತಿಗೆ ದೃಷ್ಟಿ ಇಲ್ಲದ ಕಾರಣ, ಪೂರ್ತಿ ಕುರುಡಿಯಾದ್ದರಿಂದ ಗಂಡ ಮನೆಗೆ ಬಂದರೇ ಕಳ್ಳ ಬಂದಿದ್ದಾನೆಂದು ಅಂದುಕೊಂಡು ಕೋಲು ಬೀಸಿದಳಂತೆ. ಅದೇ ವಿಧವಾಗಿ ಗೋಟೂರು ಗುಡಾರದ ರಾಜನ ಮೇಲೆ ಎಷ್ಟೋ ಭಕ್ತಿ ಹೊಂದಿರುವ ಪ್ರಜೆಗಳು ಆತನನ್ನು ಎಂದೂ ನೋಡಲಿಲ್ಲ. ಆತನು ಹೇಗಿರುವನೆಂಬ ವಿಷಯವು ಕೂಡಾ ಅವರಿಗೆ ತಿಳಿದಿಲ್ಲ. ಆದಕಾರಣ ಗುಡಾರದ ರಾಜ ತನ್ನ ಸಮಾಜ ಪ್ರಜೆಗಳ ನಡುವೆ ಬಂದರೂ, ಒಬ್ಬನು ಕೂಡಾ ಆತನನ್ನು ಗೌರವಿಸಲಿಲ್ಲ, ಮಾತನಾಡಿಸಲೂ ಇಲ್ಲ. ಒಂದುಹೊತ್ತು ಊಟಕ್ಕೂ ಸಹ ತಮ್ಮ ಮನೆಗೆ ಕರೆಯಲಿಲ್ಲ. ಆಗ ಆ ರಾಜ ಗುಡಾರದ ಟೋಪಿ ಧರಿಸಿರುವ ಪ್ರಜೆಗಳನ್ನು ಕರೆದು, ತನ್ನನ್ನು ಸ್ವತಃವಾಗಿ ಪರಿಚಯ ಮಾಡಿಕೊಂಡು, ನಾನೇ ನೀವು ಹೊಗಳುತ್ತಿರುವ ಗುಡಾರದ ರಾಜ ಎಂದು ಹೇಳಿದನಂತೆ. ಆಗ ಅವರು "ನಮ್ಮ ರಾಜನನ್ನು ಹೋಲಿರುವ ರಾಜ

ಭೂಮಂಡಲದಲ್ಲಿ ಯಾರೂ ಇಲ್ಲ. ನಮ್ಮ ರಾಜನನ್ನು ಮೀರೀರುವವನಾಗಲೀ, ನಮ್ಮ ರಾಜನೊಂದಿಗೆ ಸಮಾನವಾದವನಾಗಲೀ ಇಲ್ಲವೇ ಇಲ್ಲ." ಎಂದು ಹೊಗಳುತ್ತಾ "ನೀನು ಯಾರೋ ಬಂದು ನಮ್ಮ ರಾಜನೆಂದು ಹೇಳಿದಷ್ಟು ಮಾತ್ರಕ್ಕೆ ನಿನ್ನ ಮಾತನ್ನು ನಂಬುವುದಕ್ಕೆ ನಾವು ದಡ್ಡರಾ!" ಎಂದು ಕೇಳುತ್ತಾರೆ. ಆಗ ಗುಡಾರದ ರಾಜ ಅವರ ಭಕ್ತಿಯನ್ನು ಸ್ವತಃವಾಗಿ ನೋಡಿದರೂ, ತನ್ನನ್ನು ಸ್ವಲ್ಪವಾದರೂ ಗೌರವಿಸದವರೊಂದಿಗೆ ನನಗೇನು ಕೆಲಸ, ಅವರ ಭಕ್ತಿಯೊಂದಿಗೆ ನನಗೇನು ಅವಶ್ಯವೆಂದು ಅಂದುಕೊಂಡು, ಇವರು ನನ್ನಬಳಿಗೆ ಬಂದರೂ ನೀವು ಯಾರೋ ನನಗೆ ತಿಳಿದಿಲ್ಲ ಎಂದು ಹೇಳುತ್ತೇನೆಂದು ಅಂದುಕೊಂಡನಂತೆ.

ಈ ವಿಧವಾಗಿ ಗುಡಾರದ ಟೋಪಿ ಸಮಾಜದ ಭಕ್ತರೆಲ್ಲರೂ ಗುಡಾರದ ರಾಜನ ಮೇಲೆ ಭಕ್ತಿಯಿದ್ದರೂ ಆತನನ್ನು ಗುರುತಿಸಲಾರದೆ ಹೋಗಿರುವುದರಿಂದ, ಆತನ ಮೇಲೆ ಶ್ರದ್ಧೆ ಗೌರವ ಇದ್ದರೂ ಪ್ರತ್ಯಕ್ಷವಾಗಿ ಆತನು ಬಂದರೂ ತೋರಿಸದೆ ಹೋಗಿರುವುದರಿಂದ, ಗುಡಾರದ ರಾಜನ ಒಂದು ಕರುಣೆಯನ್ನು ಗುಡಾರದ ಸಮಾಜದವರೆಲ್ಲಾ ಕಳೆದುಕೊಳ್ಳಬೇಕಾಗಿ ಬಂದಿದೆ. ಗುಡಾರದ ರಾಜ ತನ್ನ ಹೆಸರೊಂದಿಗೆ ಮೆರೆದ ಸಮಾಜವನ್ನು ನೋಡಿ ನನ್ನನ್ನು ಗುರುತು ಹಿಡಿಯದ, ನನ್ನನ್ನು ಗೌರವಿಸದ ಇವರ ಭಕ್ತಿ (ವಿಶ್ವಾಸ)ಯಿಂದ ನನಗೇನು ಕೆಲಸ ಎಂದುಕೊಂಡು ಅವರಮೇಲೆ ಅಶ್ರದ್ಧೆ ಹೊಂದಿರುತ್ತಾನೆ. ಗುಡಾರದ ರಾಜನಿಗೆ ಗುಡಾರದ ಟೋಪಿ ಸಮಾಜದವರ ಮೇಲೆ ಅಯಿಷ್ಟತೆ ಏರ್ಪಟ್ಟಿದೆ. ಗುಡಾರದ ರಾಜ ಆತನ ಹೆಸರಿನ ಮೇಲಿರುವ ಸಮಾಜದವರೊಂದಿಗೆ ನನಗೇನು ಕೆಲಸ? ಎಂದು ಅಂದುಕೊಂಡನು. ಅವರು ನನಗೆ ಉಪಯೋಗಪಡದೆ ಇರುವಾಗ ನಾನು ಯಾಕೆ ಅವರಿಗೆ ಉಪಯೋಗ ಪಡಬೇಕು? ಎಂದು ಅಂದುಕೊಂಡನು. ಸ್ವಲ್ಪ ಕಾಲಕ್ಕೆ ಪಕ್ಕದ ದೇಶದಲ್ಲಿನ ಗುಡಾರದ ರಾಜನ ಬಳಿಗೆ ಗುಡಾರದ ಸಮಾಜದವರು ಬಂದಾಗ, ರಾಜರವರು ಅವರನ್ನು ನೋಡಿ ನೀವುಯಾರೋ ನನಗೆ ತಿಳಿದಿಲ್ಲವೆಂದು ಹೇಳಿದನಂತೆ! ಅಷ್ಟೇ ಅಲ್ಲದೇ ಗುಡಾರದ ಟೋಪಿ ಧರಿಸಿದವರು ಯಾರಾದರಾಗಲಿ ತನ್ನ ಬಳಿಗೆ ಬಾರದಂತೆ ತನ್ನ ಅಡ್ರಸ್ ಇಲ್ಲಿ ಇಲ್ಲವೆಂದು, ತನ್ನ ಬಳಿಗೆ ಬರುವ ದಾರಿ ಇದಲ್ಲವೆಂದೂ, ಆ ಸಮಾಜದ

ಪ್ರಜೆಗಳಿಗೆ ತಿಳಿಸಿ ಅವರು ಯಾರೂ ತನ್ನ ಬಳಿಗೆ ಬರದೇ ಪೂರ್ತಿಯಾಗಿ ದಾರಿ ಮರಳಿಸಿದ್ದಾನೆ. ಪಕ್ಕದ ದೇಶದಲ್ಲಿನ ಪ್ರಜೆಗಳು ಗುಡಾರದ ಸಮಾಜವನ್ನು ಸ್ಥಾಪಿಸಿ ಗುಡಾರದ ರಾಜನನ್ನು ನಿತ್ಯವು ಹೊಗಳಿದರೂ, ಆತನ ಭಕ್ತರಾಗಿದ್ದರೂ, ಆತನು ಹೇಗಿರುವನೋ ತಿಳಿಯದೆ ಹೋಗಿರುವುದರಿಂದ ಅವರ ವಿಶ್ವಾಸ, ಅವರ ಭಕ್ತಿ, ಅವರ ಹೊಗಳಿಕೆ, ಅವರ ಪ್ರಾರ್ಥನೆ ಎಲ್ಲಾ ಗುಡಾರದ ರಾಜನ ಇಷ್ಟತೆಯನ್ನು ಸಂಪಾದಿಸಿಕೊಳ್ಳಲಾರದೆ ಹೋಗಿವೆ. ನಾನು ಯಾರೋ ತಿಳಿಯದ ಅವರ ಭಕ್ತಿಯಿಂದ ನನಗೇನು ಕೆಲಸ, ನನಗೇನು ಅವಶ್ಯ? ಎಂದು ಆ ರಾಜರವರು ಅಂದುಕೊಂಡನು. ಗುಡಾರದ ರಾಜನ ಮೇಲೆ ವಿಶ್ವಾಸವಿದ್ದರೂ ಆತನ ಗುರುತು ಇಲ್ಲದಿರುವುದರಿಂದ ಗುಡಾರದ ಸಮಾಜದವರು ಆತನ ಕರುಣೆಯನ್ನು ಕಳೆದುಕೊಂಡಿದ್ದಾರೆ.

ಖಚಿತವಾಗಿ ಇದೇ ಪದ್ಧತಿಯೇ, ಇದೇ ವಿಶ್ವಾಸವೇ, ಇದೇ ಭಕ್ತಿಯೇ ಕೆಲವರಲ್ಲಿ ಇರುವುದರಿಂದ ದೇವರು ಕೂಡಾ ನನ್ನನ್ನು ಗುರುತಿಸದವರ ವಿಶ್ವಾಸದೊಂದಿಗೆ ನನಗೇನು ಕೆಲಸ? ಅಂದುಕೊಂಡನು. ಆದ್ದರಿಂದ ಕೆಲವರು ಪ್ರಜೆಗಳು ದೇವರಿಗೆ ಅಯಿಷ್ಟರಾಗಿ ಬದಲಾಗಿ ಹೋಗಿದ್ದಾರೆ. ಅಯಿಷ್ಟರಾಗಿ ಬದಲಾಗಿಹೋದ್ದರಿಂದ ದೇವರ ಜ್ಞಾನವು ಅವರಿಗೆ ಸ್ವಲ್ಪವೂ ತಿಳಿಯದೇ ಹೋಗಿದೆ. ದೇವರು ದೈವಗ್ರಂಥವನ್ನು ಕೊಟ್ಟು ಅದರಲ್ಲಿ ತನ್ನ ನಿಜ ಭಾವ ಹೇಗಿರುವುದೋ ತಿಳಿಸಿದರೂ, ಅದರ ಪ್ರಕಾರ ದೇವರಿದ್ದಾನೆಂದು ತಿಳಿಯದೆ, ಆತನಿಗೆ ಇಷ್ಟವಿಲ್ಲದ ಅವಶ್ಯವಿಲ್ಲದ ಹೊಗಳಿಕೆಯಿಂದ ಮುಳುಗಿಸುತ್ತಾರೆ. ಅಂಥವರನ್ನು ಗಮನಿಸಿದ ದೇವರು ಅವರಿಗೆ ತನ್ನ ಜ್ಞಾನವನ್ನು ಅರ್ಥವಾಗದಂತೆ ಮಾಡಿ, ಬೇರೆ ವಿಧದಲ್ಲಿ ಅರ್ಥವಾಗುವಂತೆ ಮಾಡಿ ತನ್ನಿಂದ ದೂರವಾಗಿ ಕಳುಹಿಸುತ್ತಿದ್ದಾನೆ. ಹಾಗೆ ದೇವರ ಅಯಿಷ್ಟತೆಗೆ ಒಳಗಾಗಿರುವವರು ದೈವಗ್ರಂಥದಲ್ಲಿನ ಜ್ಞಾನದ ಒಂದು ನಿಜ ಭಾವವನ್ನು ತಿಳಿಯಲಾರದೆ ದೇವರಿಗೆ ದೂರವಾಗಿ ಹೋಗುತ್ತಿದ್ದಾರೆ. ಹಾಗೆ ಅಪಮಾರ್ಗ ಹಿಡಿದು ಹೋಗುವವರು ತಮಗೆ ದೇವರ ಜ್ಞಾನವು ಸಂಪೂರ್ಣವಾಗಿ ತಿಳಿದಿದೆ ಎಂದು, ತಾವೇ ನಿಜವಾಗಿ ದೇವರಿಗೆ ಹತ್ತಿರವಾಗಿ ಇದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ದೈವಗ್ರಂಥದಲ್ಲಿನ

ಜ್ಞಾನವು ಅರ್ಥವಾಗಲಿಲ್ಲವೆಂದು ಅವರಿಗೆ ತಿಳಿದಿಲ್ಲ. ಯಾರಾದರೂ ದೈವಗ್ರಂಥದಲ್ಲಿನ ವಾಕ್ಯಗಳಿಗೆ ನಿಜ ಭಾವವನ್ನು ತಿಳಿಸಿದರೂ, ಅವರ ಮೇಲೆ ದೇವರ ಶಾಪವಿರುವುದರಿಂದ ಅವರಿಗೆ ಅದು ಗ್ರಹಿಸುವುದಕ್ಕೆ ಬರುವುದಿಲ್ಲ. ಅವರ ದೃಷ್ಟಿಯಲ್ಲಿ ನಿಜವಾದ ಜ್ಞಾನವು ಸಹ ಅಜ್ಞಾನವಾಗಿ ಕಾಣಿಸುವುದು. ಅವರಬಳಿ ಇರುವ ಅಜ್ಞಾನವೇ ನಿಜವಾದ ಜ್ಞಾನವಾಗಿ ಕಾಣಿಸುವುದು. ಆದ್ದರಿಂದ ಎಷ್ಟೋ ದೊಡ್ಡ ಜ್ಞಾನಿಗಳನ್ನು ಸಹಿತ ಅವರು ಎದುರಿಸಿ ಮಾತನಾಡುತ್ತಿರುತ್ತಾರೆ. ತಮ್ಮದೇ ಜ್ಞಾನವೆಂದೂ, ಇತರರದು ಅಜ್ಞಾನವೆಂದೂ, ತಾವೇ ದೇವರಿಗೆ ಹತ್ತಿರವಾಗಿ ಇರುವವರೆಂದು ಅಂದುಕೊಳ್ಳುತ್ತಿರುತ್ತಾರೆ.

**ಅವರ ಪ್ರಶ್ನೆ:– ನೀವು ಹೇಳಿದಂತೆ ಇಂತಹ ಅಜ್ಞಾನ ಎಲ್ಲಾ ಮತಗಳಲ್ಲಿಯೂ ಹರಡಿದೆ. ಎಲ್ಲಾ ಸಮಾಜಗಳು ತಮ್ಮ ಜ್ಞಾನವೇ ದೊಡ್ಡದೆಂದು ಒಬ್ಬರಿಗೊಬ್ಬರು ವಾದಿಸಿಕೊಳ್ಳುವುದು ಪ್ರತ್ಯಕ್ಷವಾಗಿ ಕಾಣಿಸುತ್ತಿದೆ. ಮೂರು ಸಮಾಜದವರು ಅಜ್ಞಾನದಲ್ಲಿ ಮುಳುಗಿ ಹೋಗಿದ್ದಾರೆ. ಒಬ್ಬರನ್ನು ಕಡಿಮೆ ಇನ್ನೊಬ್ಬರನ್ನು ಹೆಚ್ಚು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ದೈವಜ್ಞಾನದಲ್ಲಿ ಸ್ವಲ್ಪವಾದರೂ ವಿಚಕ್ಷಣೆ ಇಲ್ಲದ ಮನುಷ್ಯರು ತಮ್ಮ ಬಳಿ ಇರುವುದು ಅಜ್ಞಾನವೆಂದು ಗುರುತಿಸದೆ, ಇತರ ಮತಗಳವರ ಮೇಲೆ ಅಸೂಯೆಯಿಂದ, ಆಕ್ರೋಷದಿಂದ ನೋಡುತ್ತಿದ್ದಾರೆ. ಒಬ್ಬರಿಗೊಬ್ಬರು ವಿರುದ್ಧ ಭಾವನೆಗಳೊಂದಿಗೆ ನೋಡಿಕೊಳ್ಳುತ್ತಾ ಶತ್ರುಗಳಾಗಿ ಬದಲಾಗಿ ಹೋಗುತ್ತಿದ್ದಾರೆ. ಎಲ್ಲಿ ಇಲ್ಲದ ಶತ್ರುತ್ವವು ದೇವರ ವಿಷಯಗಳಲ್ಲೇ ಹೆಚ್ಚಾಗಿದೆಯೆಂದು ಅರ್ಥವಾಗುತ್ತಿದೆ. ಇಂತಹ ಪರಿಸ್ಥಿತಿಯಿಂದ ಮನುಷ್ಯರು ಹೊರ ಬೀಳುವುದಕ್ಕೆ ಯಾವುದಾದರೂ ಉಪಾಯ ಇದೆಯೇನೋ ಹೇಳಿರಿ?**

**ನಮ್ಮ ಮಾತು:–** ಜ್ಞಾನ ವಿಷಯಗಳೆಲ್ಲವನ್ನು ತೌರಾತ್ ಗ್ರಂಥ (ಭಗವದ್ಗೀತೆ)ದಿಂದ ಪರಿಷ್ಕಾರ ಮಾಡಿಕೊಳ್ಳುತ್ತಿದ್ದರೆಂದು ಅಂತಿಮ ದೈವಗ್ರಂಥದಲ್ಲಿ ಸೂರಾ 5, ಆಯತ್ 44ರಲ್ಲಿ ಹೇಳುವುದು ನಡೆದಿದೆ. ಜ್ಞಾನವಾಕ್ಯಗಳ ಮೂಲಕ ತೃಪ್ತಿ ಹೊಂದುವವರಿಗಾದರೇ ದೈವಗ್ರಂಥದಿಂದ ಪರಿಷ್ಕಾರ ಮಾಡಬಹುದು. ನನಗೆ ತಿಳಿದಿರುವುದೆ ಜ್ಞಾನ ನಿಮಗೆ ತಿಳಿದಿರುವುದೆಲ್ಲಾ ಅಜ್ಞಾನವೆನ್ನುವವರಿಗೆ ಯಾರೂ

ಏನೂ ಹೇಳಲಾರರು. ಅವರಿಗೆ ದೈವಗ್ರಂಥಗಳು ಕೂಡಾ ಯಾವ ಪರಿಷ್ಕಾರ ಮಾಡಲಾರವು. ದೇವರು ಕೂಡಾ ಅವರನ್ನು ಬದಲಾಯಿಸಲಾರನು. ದೇವರು ಅಂದುಕೊಂಡರೇ ಯಾವುದಾದರೂ ಸಾಧ್ಯವೇ ಆದರೂ ದೇವರು ಅವರನ್ನು ಬದಲಾಯಿಸುವುದಿಲ್ಲ. ಏಕೆಂದರೇ! ದೇವರೇ ಅವರನ್ನು ಅಜ್ಞಾನ ಮಾರ್ಗದಲ್ಲಿ ಹೋಗುವಂತೆ ನಿರ್ಣಯ ಮಾಡಿರುತ್ತಾನೆ. ಒಂದುಬಾರಿ ದೇವರ ನಿರ್ಣಯವಾದ ನಂತರ ಅದು ಪ್ರಕೃತಿ ಕೈಗೆ ಹೋರಟು ಹೋಗುತ್ತದೆ. ಆಗ **ಪ್ರಕೃತಿ ದೇವರ ಆಜ್ಞೆಯನ್ನು ಅನುಸರಿಸಿ ದೇವರಿಗೆ ಇಷ್ಟವಿಲ್ಲದವರನ್ನು ದೇವರಕಡೆ ಹೋಗದಂತೆ ಮಾಡಿ ತನ್ನಕಡೆ ಬರುವಂತೆ ಮಾಡುವುದು.**

ಒಂದು ಸಲ ದೇವರಿಗೆ ಅಯಿಷ್ಟನಾದವನು ಪ್ರಕೃತಿಯಿಂದ ಹುಟ್ಟಿ ಮಾನವ ಶರೀರದಲ್ಲಿ ಗುಣರೂಪವಾಗಿರುವ ಮಾಯೆ ಕೈಯಲ್ಲಿ ಬಿದ್ದುಹೋಗುವನು. ಒಂದು ಸಲ ಮಾಯೆ ಕೈಯಲ್ಲಿ ಬಿದ್ದವನು ತಿರುಗಿ ಹೊರಗೆ ಬೀಳುವುದು ಅಸಾಧ್ಯ. ಆದ್ದರಿಂದ ದೇವರು ತನ್ನ ಮಾಯೆಯನ್ನು ಕುರಿತು ಹೇಳುತ್ತಾ, ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 14ನೆ ಶ್ಲೋಕದಲ್ಲಿ ***"ದೈವೀಹ್ಯೇಷಾ ಗುಣಮಯಾ ಮಮ ಮಾಯಾ ದುರತ್ಯಯಾ"*** **'ನನ್ನ ಮಾಯೆ ದುಸ್ಸಾಧ್ಯವಾದುದು, ಅದನ್ನು ಯಾರೂ ಜಯಿಸಲಾರರು'** ಎಂದು ಹೇಳಿದ್ದಾನೆ. ಅಂತಹ ಅಸಾಧ್ಯವಾದ ಮಾಯೆ ಕೈಯಲ್ಲಿ ಬಿದ್ದವನನ್ನು ಮಾಯೆ ತನ್ನ ಗುಣಗಳಲ್ಲಿ ಮುಳುಗಿಸಿ ಗುಣಗಳ ಆಸಕ್ತಿಯಲ್ಲಿಯೇ ಮಾತನಾಡುವಂತೆ ಮಾಡುವುದು. ಗುಣಮಯನಾದವನಿಗೆ ದೇವರ ಜ್ಞಾನವು ಸರಿಹೋಗುವುದಿಲ್ಲ. ಆತನ ಮೆದುಳಿನಲ್ಲಿ ಎಲ್ಲಾ ಪ್ರಕೃತಿ ಜ್ಞಾನವೇ ತುಂಬಿಹೋಗಿರುತ್ತದೆ. ಪ್ರಕೃತಿ ಸ್ಥೂಲವಾದುದು, ಪರಮಾತ್ಮ ಎನ್ನುವ ದೇವರು ಸೂಕ್ಷ್ಮವಾದವನು. ಮಾಯೆ ಕೈಯಲ್ಲಿ ಬಿದ್ದವನಿಗೆ ದೇವರ ಸೂಕ್ಷ್ಮವಾದ ಜ್ಞಾನ ಅರ್ಥವಾಗುವುದಿಲ್ಲ. ಸ್ಥೂಲವಾದ ಜ್ಞಾನವೇ ಅರ್ಥವಾಗುವುದು. ಸ್ಥೂಲವಾದ ಜ್ಞಾನವೇ ನಿಜವಾದ ಜ್ಞಾನವೆಂದು, ಸೂಕ್ಷ್ಮವಾದ ಜ್ಞಾನ ಅಸತ್ಯಜ್ಞಾನವೆಂದು ಹೇಳುತ್ತಿದ್ದಾರೆ. ದೇವರು ಸೂಕ್ಷ್ಮವಾದವನು, ದೇವರ ಜ್ಞಾನವು ಸೂಕ್ಷ್ಮವಾಗಿಯೇ ಇರುವುದೆಂಬ ಸೂತ್ರವನ್ನು ಮಾಯೆ ಅಧೀನದಲ್ಲಿ ಇರುವವರು ಮರೆತುಹೋಗಿರುತ್ತಾರೆ. ಆದ್ದರಿಂದ ಅವರು

ಸ್ಥೂಲ ಜ್ಞಾನವನ್ನು ಕುರಿತೇ ಮಾತನಾಡುತ್ತಿರುತ್ತಾರೆ. ಅವರಿಗೆ ದೈವಗ್ರಂಥದಲ್ಲಿನ ಸೂಕ್ಷ್ಮ ವಾಕ್ಯಗಳ ಜ್ಞಾನವು ಅರ್ಥವಾಗುವುದಿಲ್ಲ. ಆದ್ದರಿಂದ ಅವರು ದೇವರ ಜ್ಞಾನವನ್ನು ಬಿಟ್ಟು ಪಕ್ಕದ ದಾರಿಯಲ್ಲಿ ಹೋಗುವವರಾಗಿ ಬದಲಾಗಿಹೋಗುವರು. ಅಂತಹ ಸ್ಥಿತಿಯಿಂದ ಅವರನ್ನು ಯಾರೂ ಬದಲಾಯಿಸಲಾರರು. ಮಾಯೆ ಅಧೀನದಲ್ಲಿ ಬಿದ್ದಿರುವವರು ತಿರುಗಿ ಹೊರ ಬೀಳುವುದು ಅಸಾಧ್ಯವಾದ ಕೆಲಸವಾಗುವುದು. ದೇವರಿಗೆ ಅಯಿಷ್ಟರಾಗಿ ಬದಲಾದವನನ್ನು ಮಾಯೆ ತನ್ನ ಅಧೀನದಲ್ಲಿ ಇಟ್ಟುಕೊಂಡು ತನ್ನ ಪ್ರಭಾವದಿಂದ ಜ್ಞಾನವನ್ನು ಅರ್ಥವಾಗದಂತೆ ಮಾಡುವುದು. ಆದ್ದರಿಂದ ದೇವರು ಅಂದುಕೊಂಡಹಾಗೆ ಅವರು ದೇವರಿಗೆ ದೂರವಾಗಿ ಹೋಗುತ್ತಿರುತ್ತಾರೆ. ಅಂಥವರನ್ನು ಭೂಮಿಮೇಲೆ ಯಾರೂ ಬದಲಾಯಿಸಲಾರರು.

**ಅವರ ಪ್ರಶ್ನೆ:– ಮಾಯೆ ಪ್ರಭಾವದಲ್ಲಿ ಸಿಲುಕಿಕೊಂಡು ದೇವರಿಗೆ ವಿರುದ್ಧ ದಿಕ್ಕಿನಲ್ಲಿ ಇದ್ದೂ ಸಹ ನಾವು ಸಕ್ರಮವಾಗಿ ಇದ್ದೇವೆಂದುಕೊಳ್ಳುವವರು ಮೂರು ಸಮಾಜಗಳಲ್ಲಿ ಇದ್ದಾರೆಂದು ನೀವು ಹೇಳುತ್ತಿದ್ದೀರ. ಹಿಂದೂ ಸಮಾಜದಲ್ಲಿ ಇರುವವರು ಸೂಕ್ಷ್ಮವಾಗಿ ಕಾಣಿಸದೆ ಇರುವ ದೇವರನ್ನು ಬಿಟ್ಟು ಸ್ಥೂಲವಾದ ವಿಗ್ರಹಾರಾಧನೆಯಲ್ಲಿ ಬಿದ್ದುಹೋಗುತ್ತಿದ್ದಾರೆ. ಅವರಿಗೆ ಸೂಕ್ಷ್ಮವಾದ ಕಾಣಿಸದ ದೇವರು ಒಬ್ಬ ಪ್ರತ್ಯೇಕವಾಗಿ ಇರುವನೆಂಬ ವಿಷಯವೇ ತಿಳಿದಿಲ್ಲ. ಉಳಿದವರು ಸೂಕ್ಷ್ಮವಾದ ದೇವರಿದ್ದಾನೆಂದು ಹೇಳುತ್ತಿದ್ದರೂ ಅವರು ಸ್ಥೂಲವಾದ ಜ್ಞಾನವನ್ನು ಆಶ್ರಯಿಸಿ ಸೂಕ್ಷ್ಮವಾದ ಜ್ಞಾನವನ್ನು ಬಿಟ್ಟುಹಾಕಿದ್ದಾರೆ. ಇವರಿಬ್ಬರಲ್ಲಿ ಯಾರು ಉತ್ತಮರು?**

**ನಮ್ಮ ಉತ್ತರ:–** ಇಬ್ಬರು ಮನುಷ್ಯರಲ್ಲಿ ಒಬ್ಬನು ಮುಖದ ಮೇಲೆ ಬಟ್ಟೆ ಹೊದ್ದುಕೊಂಡಿದ್ದಾನೆ, ಮತ್ತೊಬ್ಬನು ಕಾಗದವನ್ನು ಮುಚ್ಚಿಕೊಂಡಿದ್ದಾನೆ. ಅವರಿಬ್ಬರಲ್ಲಿ ಯಾರ ಮುಖ ಕಾಣಿಸುವುದು ಎಂದು ಕೇಳಿದರೇ ಬಟ್ಟೆಯಿಂದ ಮುಚ್ಚಿಕೊಂಡರೂ, ಕಾಗದವನ್ನು ಹೊದ್ದುಕೊಂಡರೂ ಎರಡೂ ಮುಖವನ್ನು ಕಾಣಿಸದಂತೆ ಮಾಡುತ್ತಿವೆ. ಆದ್ದರಿಂದ ಇಬ್ಬರ ಮುಖಗಳು ಕಾಣಿಸುವುದಿಲ್ಲವೆಂದೇ ಹೇಳಬೇಕು. ಅವರಿಬ್ಬರು ಬೇರೆಬೇರೆ ವಿಧಗಳಲ್ಲಿ ಮುಖವನ್ನು ಮರೆಮಾಚಿ

ಕೊಂಡಿರುವವರೇ ಆಗುತ್ತಾರೆ. ಅದೇ ವಿಧವಾಗಿ ಮೂರು ಸಮಾಜಗಳಲ್ಲಿನ ಮನುಜರು ಹಿಂದೂಗಳು ಸ್ಥೂಲ ಆಕಾರದ ಮೇಲೆ ಆಧಾರಪಟ್ಟು ಸೂಕ್ಷ್ಮವನ್ನು ಮರೆತುಹೋಗಿದ್ದಾರೆ. ಹಾಗೆಯೇ ಉಳಿದ ಸಮಾಜದವರು ಸ್ಥೂಲ ಜ್ಞಾನದ ಮೇಲೆ ಆಧಾರಪಟ್ಟು ಸೂಕ್ಷ್ಮ ಜ್ಞಾನವನ್ನು ಬಿಟ್ಟು ಹಾಕಿದ್ದಾರೆ. ಇಬ್ಬರೂ ಸ್ಥೂಲವನ್ನೇ ಆಶ್ರಯಿಸಿ ಸೂಕ್ಷ್ಮವನ್ನು ಬಿಟ್ಟು ಹಾಕುವುದರಿಂದ ಇಬ್ಬರು ಒಂದೇ ಗುಂಪಿಗೆ ಸೇರಿರುವವರಾಗಿದ್ದಾರೆ, ಆದಕಾರಣ ಅವರಿಬ್ಬರದು ತಪ್ಪುದಾರಿಯೇ ಆಗುತ್ತದೆ. ಇಬ್ಬರ ಮಾರ್ಗವು ಸ್ಥೂಲದಕಡೆ ಹೋಗುವುದರಿಂದ, ಸೂಕ್ಷ್ಮವನ್ನು ತಿಳಿಯದೆ ಹೋಗಿರುವುದರಿಂದ ಇಬ್ಬರೂ ಅಸಲು ದಾರಿ ತಪ್ಪಿದವರೇ ಆಗುತ್ತಾರೆ.

ಹಿಂದೂ ಸಮಾಜದವರನ್ನು ಸ್ಥೂಲವಾದ ವಿಗ್ರಹಾರಾಧನೆ ಮಾಡುತ್ತಿದ್ದಾರೆಂದು ಅವರಿಗೆ ದೇವರ ಜ್ಞಾನ ತಿಳಿದಿಲ್ಲವೆಂದೂ ಉಳಿದ ಸಮಾಜದವರು ಅನ್ನುತ್ತಿದ್ದರೇ, ನಾವು ಉಳಿದ ಸಮಾಜದವರನ್ನು ಈ ವಿಧವಾಗಿ ಪ್ರಶ್ನಿಸುತ್ತಿದ್ದೇವೆ. ನೀವು ಅವರಿಗಿಂತಲೂ ಯಾವುದರಲ್ಲಿ ಗಣ್ಯರು? ಎಂದು ಕೇಳುತ್ತಿದ್ದೇವೆ. ಅವರು ಸ್ಥೂಲವಾದ ವಿಗ್ರಹವನ್ನು ಆರಾಧಿಸಿ ಸೂಕ್ಷ್ಮವಾದ ಜ್ಞಾನವನ್ನು ತಿಳಿಯದಂತೆ, ನೀವು ಕೂಡಾ ಸ್ಥೂಲವಾದ ಜ್ಞಾನವನ್ನು ಆಶ್ರಯಿಸಿ ಸೂಕ್ಷ್ಮವಾದ ಜ್ಞಾನವನ್ನು ಬಿಟ್ಟುಹಾಕಿದ್ದೀರಲ್ಲವೇ! ಹಿಂದೂಗಳು ಕಾಣಿಸುವ ಸ್ಥೂಲವಾದ ಆಕಾರವನ್ನು ಆರಾಧಿಸಿದರೇ, ಉಳಿದವರು ಕೂಡಾ ಇನ್ನೊಂದು ವಿಧವಾಗಿ ಕಾಣಿಸುವ ಸ್ಥೂಲವಾದ ಜ್ಞಾನವನ್ನು ಆರಾಧಿಸಿ ಪರೋಕ್ಷವಾಗಿ ತಪ್ಪುದಾರಿ ಹಿಡಿದಂತೆಯೇ ಅಲ್ಲವೇ! ಮುಖದ ಮೇಲೆ ಬಟ್ಟೆ ಹಾಕಿಕೊಂಡರೂ, ಕಾಗದವನ್ನು ಹಾಕಿಕೊಂಡರೂ ಇಬ್ಬರೂ ಪ್ರತ್ಯಕ್ಷವಾಗಿ ಮುಖವನ್ನು ಮುಚ್ಚಿಕೊಂಡಹಾಗೆಯೇ ಆಗುತ್ತದೆ. ಹಾಗೆಯೇ ದೇವರ ವಿಷಯದಲ್ಲಿ ವಿಗ್ರಹಾರಾಧನೆ ಅಥವಾ ದೇವತಾರಾಧನೆ ಎಂಬ ಸ್ಥೂಲ ಆರಾಧನೆ ಮಾಡಿದರೂ, ಸ್ಥೂಲವಾದ ಜ್ಞಾನವನ್ನು ಆಶ್ರಯಿಸಿದರೂ, ಇಬ್ಬರೂ ಸೂಕ್ಷ್ಮವಾದ ಜ್ಞಾನವನ್ನು ಬಿಟ್ಟುಹಾಕಿ ಸ್ಥೂಲವಾದ ಜ್ಞಾನವನ್ನು ಆಶ್ರಯಿಸಿದಂತೆಯೇ ಅಲ್ಲವೇ! ಕಾಣಿಸುವ ಸ್ಥೂಲ ಜ್ಞಾನವನ್ನು ಆಶ್ರಯಿಸಿದರೂ, ಕಾಣಿಸುವ ಸ್ಥೂಲ ಆಕಾರವನ್ನು ಆಶ್ರಯಿಸಿದರೂ ಇಬ್ಬರೂ ಬೇರೆಬೇರೆ ವಿಧಗಳ ಸೂಕ್ಷ್ಮ ಜ್ಞಾನವನ್ನು

ಬಿಟ್ಟುಹಾಕಿರುವವರೇ ಆಗುತ್ತಿದ್ದಾರೆ. ಇವರಿಬ್ಬರೂ ಒಂದೇ ರೀತಿ ತಪ್ಪು ಮಾಡಿರುವವರಾಗುತ್ತಾರೆ, ಅಷ್ಟೇ ಹೊರತು ಒಬ್ಬರು ಉತ್ತಮರೆಂದು ಮತ್ತೊಬ್ಬರು ಉತ್ತಮರಲ್ಲವೆಂದು ಹೇಳಲಾರೆವು. ಗುಹೆಯಲ್ಲಿ ತೂರಿರುವವನಾಗಲೀ, ಬಯಲು ಪ್ರದೇಶದಲ್ಲಿ ನೆರಳಿನಲ್ಲಿ ಇರುವವನಾಗಲೀ ಇಬ್ಬರೂ ಸೂರ್ಯರಶ್ಮಿ ಬೀಳದವರೇಯೆಂದು, ಇಬ್ಬರೂ ನೆರಳಿನಲ್ಲಿ ಇರುವವರೇ ಎಂದು ಹೇಗೆ ಹೇಳಬಹುದೋ, ಹಾಗೆಯೇ ಸ್ಥೂಲ ಆಕಾರವನ್ನು ಆಶ್ರಯಿಸಿದವ ನಾಗಲೀ, ಸ್ಥೂಲಜ್ಞಾನವನ್ನು ಆಶ್ರಯಿಸಿದವನಾಗಲೀ, ಇಬ್ಬರೂ ಸೂಕ್ಷ್ಮಕ್ಕೆ ದೂರವಾಗಿ ಇರುವವರೇ ಎಂದು, ಸೂಕ್ಷ್ಮವನ್ನು ತಿಳಿಯದವರೇ ಎಂದು ಹೇಳಬಹುದು. ಒಂದು ವಿಧವಾಗಿ ಇಬ್ಬರೂ ವಿಗ್ರಹಾರಾಧಕರೆಂದೇ ಹೇಳಬಹುದು.

**ಅವರ ಪ್ರಶ್ನೆ:– ಇಲ್ಲಿ ನೀವು ನಮ್ಮನ್ನು ಸಂಶಯಕ್ಕೆ ಗುರಿಮಾಡುತ್ತಿದ್ದೀರ. ಪ್ರತ್ಯಕ್ಷವಾಗಿ ಕಾಣಿಸುವ ರೂಪವಿರುವುದನ್ನು ವಿಗ್ರಹ ಎನ್ನುತ್ತಿದ್ದೇವೆ. ಜ್ಞಾನ ಅಂಥದಲ್ಲ ಅಲ್ಲವೇ! ಜ್ಞಾನಕ್ಕೆ ಕಾಣಿಸುವ ಆಕಾರವಿಲ್ಲ. ಜ್ಞಾನ ಮಾತುಗಳ ರೂಪವಾದದ್ದು. ಜ್ಞಾನವು ಶಬ್ಧ ರೂಪವಾದದ್ದು, ಶಬ್ಧಕ್ಕೆ ಆಕಾರವಿಲ್ಲ. ಹಾಗಿರುವಾಗ ಮಾತುಗಳ ರೂಪವಾದ ಜ್ಞಾನವನ್ನು ಸಹ ಕಾಣಿಸುವ ವಿಗ್ರಹದ ಕೆಳಗೆಯೇ ಜಮಕಟ್ಟುವುದು ಸರಿಯಾದುದೇ ಎಂದು ನೀವು ಹೇಳಬಲ್ಲಿರಾ?**

**ನಮ್ಮ ಉತ್ತರ :–** ಜ್ಞಾನವೆನ್ನುವುದು ಮಾತುಗಳ ರೂಪದಲ್ಲಿ ಶಬ್ಧವಾಗಿದ್ದರೂ, ಕೇಳಿಸುವ ಆ ಶಬ್ಧದಲ್ಲಿನ ಸಾರಾಂಶವು ಸ್ಥೂಲವಾದುದಾಗಿ ಒಂದು ವಿಧ, ಸೂಕ್ಷ್ಮವಾದುದಾಗಿ ಒಂದು ವಿಧ ಇದೆ. ಆದ್ದರಿಂದ ಶಬ್ಧರೂಪವಾದ ಜ್ಞಾನವನ್ನು ಎರಡು ವಿಧಗಳಾಗಿ ದೊಡ್ಡವರು ವಿಂಗಡಿಸಿ ಒಂದನ್ನು ಸ್ಥೂಲ ಜ್ಞಾನವೆಂದು, ಎರಡನೆಯದನ್ನು ಸೂಕ್ಷ್ಮ ಜ್ಞಾನವೆಂದು ಹೇಳಿದ್ದಾರೆ. ಜ್ಞಾನದಲ್ಲಿ ಎರಡು ವಿಧಗಳ ಜ್ಞಾನಗಳಿವೆಯೆಂದು ಅವುಗಳಲ್ಲಿ ಒಂದನ್ನು ಸ್ಥೂಲ ಜ್ಞಾನವೆಂದು, ಮತ್ತೊಂದನ್ನು ಸೂಕ್ಷ್ಮ ಜ್ಞಾನವೆಂದು ಅನ್ನುತ್ತಾರೆಂದು ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿಯು ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿಯೂ ಹೇಳಿರುವುದಾಗಿದೆ. ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆಂಬ

ಅಧ್ಯಾಯದಲ್ಲಿ ಮೊದಲ ಒಂದು, ಎರಡು ಶ್ಲೋಕಗಳಲ್ಲಿ ಈ ವಿಷಯ ಹೇಳಿದಂತೆ, ಪೂರ್ತಿ ಅರ್ಥವಾಗುವಂತೆ ಖುರಾನ್ ಗ್ರಂಥದಲ್ಲಿ 'ಅಲೀ ಇಮ್ರಾನ್' ಎಂಬ ಮೂರನೆಯ ಸೂರಾದಲ್ಲಿ ಏಳನೆಯ ಆಯತ್‌ನಲ್ಲಿ ಕೂಡಾ ಹೇಳಿದ್ದಾರೆ. **(3–7) "ಓ ಪ್ರವಕ್ತಾ! ನಿನ್ನ ಮೇಲೆ ಈ ಗ್ರಂಥವನ್ನು ಅವತರಿಸುವಂತೆ ಮಾಡಿದವನು ದೇವರೇ. ಇದರಲ್ಲಿ ಸುಸ್ಪಷ್ಟವಾಗಿ ಅರ್ಥ ತಿಳಿಯುವ ಸ್ಥೂಲವಾದ (ಮುಹ್ಕಮಾತ್) ವಾಕ್ಯಗಳು ಇವೆ. ಅವು ಗ್ರಂಥಕ್ಕೆ ಬುನಾದಿಯಂಥವು. ಇನ್ನೂ ಕೆಲವು ಅಸ್ಪಷ್ಟವಾಗಿ ಅರ್ಥವನ್ನು ಕೊಡುವ ಸೂಕ್ಷ್ಮವಾದ (ಮುತಷಾಬಿಹಾತ್) ವಾಕ್ಯಗಳು ಇವೆ".** ಎಂದು ಹೇಳುವುದರಿಂದ ಬ್ರಹ್ಮವಿದ್ಯೆ ಶಾಸ್ತ್ರಬದ್ಧವಾಗಿ ಜ್ಞಾನವು ಎರಡು ವಿಧಗಳೆಂದು, ಒಂದು ಸ್ಥೂಲಜ್ಞಾನ, ಎರಡು ಸೂಕ್ಷ್ಮ ಜ್ಞಾನವೆಂದು ತಿಳಿದುಹೋಗಿದೆ.

ಇಲ್ಲಿ ಮುಖ್ಯವಾಗಿ ನಮ್ಮ ಬುದ್ಧಿಯನ್ನು ಉಪಯೋಗಿಸಿ ತಿಳಿಯಬೇಕಾದ ವಿಷಯವೇನೆಂದರೇ! ಮಾತುಗಳ ರೂಪವಾದ ಜ್ಞಾನವು ಯಾವ ವಿಧವಾಗಿ ಸ್ಥೂಲ, ಸೂಕ್ಷ್ಮಗಳಾಗಿದೆಯೋ ಹಾಗೆಯೇ! ದೃಶ್ಯರೂಪದಲ್ಲಿರುವ ಗೊಂಬೆಗಳಲ್ಲಿ ಕೂಡಾ ಸ್ಥೂಲವು ಇದೆ, ಸೂಕ್ಷ್ಮವು ಇದೆ. ಯಾವ ವಿಧವಾಗಿ ಶಬ್ಧರೂಪ ಜ್ಞಾನಗಳಲ್ಲಿ ಸ್ಥೂಲಜ್ಞಾನ ಪ್ರಪಂಚ ಸಂಬಂಧವಾದುದು (ಪ್ರಕೃತಿ ಸಂಬಂಧವಾದುದು) ಸೂಕ್ಷ್ಮ ಜ್ಞಾನ ದೈವಸಂಬಂಧವಾದುದು ಎಂದು ಹೇಳುತ್ತಿದ್ದೇವೋ, ಹಾಗೆಯೇ ದೃಶ್ಯರೂಪ ಆರಾಧನೆಯ ಜ್ಞಾನಗಳಲ್ಲಿ ಸ್ಥೂಲಜ್ಞಾನ, ಸೂಕ್ಷ್ಮಜ್ಞಾನ ಎಂದು ಎರಡು ವಿಧಗಳ ಜ್ಞಾನಗಳು ಇವೆ. ದೃಶ್ಯರೂಪ ಆರಾಧನೆ ಜ್ಞಾನಗಳಲ್ಲಿ ಸ್ಥೂಲ ರೂಪವಾದುದು ಪ್ರಕೃತಿ (ಪ್ರಪಂಚ) ಸಂಬಂಧವಾದ ಜ್ಞಾನದೊಂದಿಗೆ ಕೂಡಿಕೊಂಡಿರುವುದಾಗಿ ಇದ್ದರೇ, ಸೂಕ್ಷ್ಮ ರೂಪವಾದುದು ದೈವಸಂಬಂಧ ಜ್ಞಾನದೊಂದಿಗೆ ಕೂಡಿಕೊಂಡಿದೆ.

ಮನುಷ್ಯ ಶಬ್ಧ, ರೂಪ, ಸ್ಪರ್ಶ, ರುಚಿ, ವಾಸನೆ ಎಂಬ ಜ್ಞಾನಗಳನ್ನು ತನ್ನ ಪಂಚೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳ ಮೂಲಕ ಗ್ರಹಿಸುತ್ತಿದ್ದಾನೆ. ಮನುಷ್ಯ ಗ್ರಹಿಸುವ ಐದು ಜ್ಞಾನಗಳನ್ನು ಪ್ರಪಂಚ ಜ್ಞಾನಗಳು ಎನ್ನುತ್ತೇವೆ. ಐದು ಪ್ರಪಂಚ ಜ್ಞಾನಗಳು ಸ್ಥೂಲವಾದವುಗಳೇ ಆಗುತ್ತವೆ. ಸ್ಥೂಲವಾದ ಐದು ಪ್ರಪಂಚ ಜ್ಞಾನಗಳನ್ನು ಗ್ರಹಿಸುವ ಐದು ಅವಯವಗಳು

ಶರೀರಕ್ಕೆ ತಗಲಿಕೊಂಡಿದ್ದು ಜ್ಞಾನೇಂದ್ರಿಯಗಳೆಂದು ಹೆಸರುಪಡೆದಿವೆ. ಮನುಷ್ಯನ ಶರೀರದಲ್ಲಿ ಐದು ಜ್ಞಾನೇಂದ್ರಿಯಗಳು ಇವೆಯೆಂದು ಅಜ್ಞಾನಿಗೆ ಸಹ ತಿಳಿದಿದೆ. ಮನುಷ್ಯನಿಗೆ ಐದು ಜ್ಞಾನೇಂದ್ರಿಯಗಳ ಮೂಲಕ ತಿಳಿಯಲ್ಪಡುವುದು ಪ್ರಪಂಚ ಜ್ಞಾನವೇ ಆದರೂ, ಸ್ಥೂಲ ಜ್ಞಾನವೇ ಆದರೂ ಅದರಲ್ಲಿ ದೈವಜ್ಞಾನವು ಸಹ ಒಳಗೊಂಡಿದೆ. ವಿವರವಾಗಿ ತಿಳಿಯುವುದಾದರೇ ಜ್ಞಾನ ಎರಡು ವಿಧಗಳಾಗಿ ಇದೆ. ಒಂದು ಪ್ರಪಂಚ ಜ್ಞಾನ, ಎರಡು ಪರಮಾತ್ಮ ಜ್ಞಾನ ಎಂದರೇ ದೈವಜ್ಞಾನ. ಪ್ರಪಂಚ ಜ್ಞಾನದಿಂದಲೇ ಪರಮಾತ್ಮ ಜ್ಞಾನವನ್ನು ಸಹ ತಿಳಿಯಬೇಕು. ಶಬ್ಧ, ದೃಶ್ಯಗಳು ಎರಡೂ ಪ್ರಪಂಚ ಜ್ಞಾನಗಳೇ. ಕಿವಿ, ಕಣ್ಣಿನ ಮೂಲಕ ತಿಳಿಯಲ್ಪಡುವ ಜ್ಞಾನಗಳೇ. ಆದರೂ ಈ ಎರಡರಲ್ಲಿ ಪರಮಾತ್ಮ ಜ್ಞಾನ ಒಳಗೊಂಡಿದೆ. ದೃಶ್ಯ ರೂಪದಲ್ಲಿ ಆಕೃತಿ (ಆಕಾರ) ಇರುವಾಗ, ಆಕೃತಿಯಲ್ಲಿ ನಿರಾಕಾರವಾದ ದೈವವಿದೆ. ಹಾಗೆಯೇ ಸಾಕಾರವಾದ ವಿಗ್ರಹ ಇದೆ. ಕಣ್ಣಿನಿಂದ ನೋಡಿದರೇ ದೃಶ್ಯರೂಪದಲ್ಲಿ ಒಂದು ಗೊಂಬೆ ಕಾಣಿಸಿದೆಯೆಂದುಕೊಳ್ಳೋಣ. ಗೊಂಬೆ ಪ್ರಾಣವಿರುವುದು ಆಗಿರಬಹುದು, ಪ್ರಾಣವಿಲ್ಲದ್ದು ಆಗಿರಬಹುದು. ಉದಾಹರಣೆಗೆ ನನಗೆ ಮನುಷ್ಯನ ಆಕಾರ ಕಾಣಿಸಿದೆ ಎಂದುಕೊಳ್ಳೋಣ. ನನ್ನ ಸ್ನೇಹಿತನು 'ನಾರಾಯಣ' ಎಂಬ ವ್ಯಕ್ತಿ ಕಾಣಿಸಿದ್ದಾನೆಂದುಕೊಳ್ಳೋಣ. ಆಗ ಅದು ನನಗೆ ದೃಶ್ಯವೇ ಆಗುವುದು. ಆ ದೃಶ್ಯವು ಒಬ್ಬ ಮನುಷ್ಯನ ಆಕಾರದಲ್ಲಿದ್ದರೂ, ಅದರಲ್ಲಿ ನಾವು ಸುಲಭವಾಗಿ ಇಂತಹ ವ್ಯಕ್ತಿ ಎಂದು ತಿಳಿಯುತ್ತಿದ್ದೇವೆ. ಆ ವ್ಯಕ್ತಿ ಯಾವ ವಿಷಯವನ್ನಾದರೂ ಗ್ರಹಿಸುವ ಶಕ್ತಿ ಹೊಂದಿದ್ದಾನೆ. ಆದಕಾರಣ ಗ್ರಹಿಸುವ ಶಕ್ತಿ ಇರುವವನನ್ನು **'ಗ್ರಹ'** ಎಂದು ಹೇಳಬಹುದು. ಕಾಣಿಸುವ ವ್ಯಕ್ತಿ ನನಗೆ ಸ್ನೇಹಿತನೇ ಆಗಿರಬಹುದು. ಆತನ ಹೆಸರು ಕೂಡಾ ನನಗೆ ತಿಳಿದಿರಬಹುದು. ಆದರೂ ಆತನು ನಾನು ಹೇಳುವ ಮಾತನ್ನು, ತೋರಿಸುವ ದೃಶ್ಯವನ್ನು ಗ್ರಹಿಸುವ ಸಾಮರ್ಥ್ಯವಿರುವವನು ಆಗಿರುವುದರಿಂದ ಆತನನ್ನು 'ಗ್ರಹ' ಎಂದು ಹೇಳಬಹುದು. ಗ್ರಹಿಸುವ ಯಾವುದಾದರೂ, ಯಾರಾದರೂ 'ಗ್ರಹ' ಎಂದು ಹೇಳಬಹುದು.

ಪ್ರಾಣವಿರುವ ಆಕಾರದಲ್ಲಿ ಗ್ರಹಿಸುವ ಶಕ್ತಿ ಇದೆ. ಆದಕಾರಣ ಅದನ್ನು 'ಗ್ರಹ' ಎಂದು ಅನ್ನುತ್ತಿದ್ದೇವೆ. ಹಾಗೆಯೇ ಪ್ರಾಣವಿಲ್ಲದ ಆಕಾರದಲ್ಲಿ ಗ್ರಹಿಸಿಕೊಳ್ಳುವ

ಶಕ್ತಿಯಿರುವುದಿಲ್ಲ. ಆದ್ದರಿಂದ ಅದನ್ನು ಗ್ರಹ ಎನ್ನುವುದಕ್ಕೆ ಸಾಧ್ಯವಿಲ್ಲ. ಆದರೇ ಈದಿನ ಬಹಳಜನ ಹಿಂದುಗಳು ಯಾವುದೋ ಒಂದು ಗೊಂಬೆಯನ್ನು ಹಿಡಿದುಕೊಂಡು, ಆ ಗೊಂಬೆಗೆ ಒಂದು ಹೆಸರಿಟ್ಟು, ಅದು ತಮ್ಮ ಆರಾಧ್ಯ ದೈವವೆಂದು ನಂಬಿ ಪೂಜೆಗಳು ಮಾಡುತ್ತಿದ್ದಾರೆ. ಈ ವಿಧವಾಗಿ ಎಷ್ಟೋಜನ ಎಷ್ಟೋ ಆಕಾರಗಳನ್ನು ಇಟ್ಟುಕೊಂಡು ಪೂಜಿಸುತ್ತಿದ್ದಾರೆ. ಅಂತಹ ಪೂಜೆಗಳನ್ನು ಆಕಾರ ಪೂಜೆಯೆಂದು ಅನ್ನುತ್ತಿದ್ದೇವೆ. ಇಂತಹ ಪೂಜೆಗಳನ್ನು ಮುಸ್ಲಿಮ್‌ರು ಪೂರ್ತಿ ಖಂಡಿಸುತ್ತಿದ್ದಾರೆ. ದೇವರ ಸ್ಥಾನದಲ್ಲಿ ಇತರ ದೇವತೆಗಳನ್ನು ಇಟ್ಟು ಪೂಜಿಸುತ್ತಿದ್ದಾರೆಂದು ಆರೋಪಣೆ ಮಾಡುತ್ತಿದ್ದಾರೆ. ಎಲ್ಲಿ ಯಾವ ಗೊಂಬೆಯನ್ನು ಪೂಜಿಸಿದರೂ ಅದನ್ನು ವಿಗ್ರಹ ಪೂಜೆ ಎನ್ನುತ್ತಿದ್ದಾರೆ. ಅವರು ತಿಳಿದು ಹೇಳಿದರೂ, ತಿಳಿಯದೆ ಹೇಳಿದರೂ ಅದನ್ನು ವಿಗ್ರಹ ಪೂಜೆ ಎಂದು ನಾವು ಒಪ್ಪಿಕೊಳ್ಳುತ್ತಿದ್ದೇವೆ. ನಾವು ಮೊದಲಿನಿಂದ ವಿಗ್ರಹಾರಾಧನೆಯನ್ನು ಖಂಡಿಸುತ್ತಿದ್ದೇವೆ. ಆದರೂ ಎಷ್ಟೋ ವಿವರ ಜ್ಞಾನ ತಿಳಿದ ನಮ್ಮನ್ನು ಕೂಡಾ ವಿಗ್ರಹಾರಾಧನೆ ಮಾಡುವವರೊಂದಿಗೆ ಸೇರಿಸಿ ಕೆಲವರು ನಮ್ಮನ್ನು ವಿಗ್ರಹಾರಾಧಕರೆಂದು ಅನ್ನುತ್ತಿದ್ದಾರೆ.

**ಅವರ ಪ್ರಶ್ನೆ:- ನೀವು ಶ್ರೀಕೃಷ್ಣನ ಆಕಾರವನ್ನು 'ಪ್ರತಿಮೆ' ಎನ್ನುತ್ತಿದ್ದೀರ. ನೀವು ಎಲ್ಲಿ ಯಾವ ಪೂಜೆ ಮಾಡದಿದ್ದರೂ ನಿಮ್ಮ ಅನುಯಾಯಿಗಳೆಲ್ಲರೂ ಕೃಷ್ಣನನ್ನು ದೇವರೆಂದು ಪೂಜಿಸುತ್ತಿದ್ದಾರೆ. ಕೃಷ್ಣಾಷ್ಟಮಿ ಸಮಯದಲ್ಲಿ ಕೃಷ್ಣ ಪೂಜೆಗಳು ಮಾಡಿ ಕೃಷ್ಣ ಪ್ರತಿಮೆಯನ್ನು ವಿಜೃಂಭಣೆಯಿಂದ ಉತ್ಸವ ಮಾಡುತ್ತಿದ್ದಾರೆ. ನೀವು ಅದನ್ನು ಸಮರ್ಥಿಸುತ್ತಿದ್ದೀರ. ಅಷ್ಟೇ ಅಲ್ಲದೆ ನಿಮ್ಮ ಸಲಹೆ ಮೇರೆಗೆ ಎಲ್ಲರೂ ಕೃಷ್ಣಾಷ್ಟಮಿ ಮಾಡುತ್ತಿರುವ ಹಾಗೆ ನಾವು ಕೇಳುತ್ತಿದ್ದೇವೆ. ಕೃಷ್ಣನನ್ನು 'ಪ್ರತಿಮೆ' ಎಂದು ವಿಗ್ರಹ ಅಲ್ಲವೆಂದು ನೀವು ಹೇಳುತ್ತಿದ್ದೀರ. ಕೃಷ್ಣನ ಆಕಾರವನ್ನು ಭಗವಂತನ ಪ್ರತಿರೂಪ ಎನ್ನುತ್ತಿದ್ದೀರ. ಭಗವಂತನು ದೇವರ ಮಾರುವೇಷ ಎನ್ನುತ್ತಿದ್ದೀರ. 'ಅದನ್ನೇ ಭಗವಂತನ ಆಕಾರ ಎಂದು ಕೂಡಾ ಎನ್ನುತ್ತಿದ್ದೀರ. 'ದೇವರು ಭಗವಂತನಾಗಿ ಕಾಣಿಸುವ ಮನುಷ್ಯನಾಗಿ ಬಂದು ತನ್ನ ಜ್ಞಾನವನ್ನು ಹೇಳಿ ಹೋಗುವನು' ಎಂದು ಹೇಳುತ್ತಿದ್ದೀರ. ನೀವು ಕೃಷ್ಣನ ಆಕಾರವನ್ನು ಪೂಜಿಸುವುದನ್ನು ಸಮ್ಮತಿಸುತ್ತಿದ್ದೀರ**

**ಅಲ್ಲವೇ! ಅದರಿಂದ ನೀವು ವಿಗ್ರಹಾರಾಧನೆಯನ್ನು ಪ್ರೋತ್ಸಾಹ ಮಾಡಿದಂತೆಯೆ ಅಲ್ಲವೇ! ಎಂದು ಇತರರು ನಿಮ್ಮನ್ನು ಕೇಳಿದರೇ ನಾವು ವಿಗ್ರಹಾರಾಧನೆ ಮಾಡಲಿಲ್ಲ, ಪ್ರತಿಮೆಯ ಆರಾಧನೆ ಮಾತ್ರ ಮಾಡುತ್ತಿದ್ದೇವೆ ಎಂದು ಹೇಳುತ್ತಿದ್ದೀರ. ಪ್ರತಿಮೆ ಆದರೂ ವಿಗ್ರಹ ಆದರೂ ಮನುಷ್ಯರು ಮಾಡಿರುವ ಆಕಾರವೇ ಅಲ್ಲವೇ! ಮನುಷ್ಯರು ತಯಾರಿ ಮಾಡಿರುವುದನ್ನು ದೇವರಾಗಿ ಹೇಳಬಹುದಾ? ದೇವರ ಸ್ಥಾನದಲ್ಲಿ ಇಟ್ಟು ಪೂಜಿಸಬಹುದಾ? ಎಂದು ಮುಸ್ಲಿಮ್‌ರಾಗಿ ಇರುವವರು ಪ್ರಶ್ನಿಸುತ್ತಿದ್ದಾರೆ. ಇದಕ್ಕೆ ನೀವು ಏನು ಉತ್ತರವನ್ನು ಹೇಳುತ್ತೀರಾ? ಪ್ರತಿಮೆ ಆರಾಧನೆ ವಿಗ್ರಹ ಆರಾಧನೆ ಅಲ್ಲವೇ! ಎಂದು ಕೇಳುವ ಪ್ರಶ್ನೆಗೆ ಏನು ಉತ್ತರ ಹೇಳುತ್ತೀರಾ?**

**ನಮ್ಮ ಉತ್ತರ:–** ಶಾಸ್ತ್ರಾಧಾರ ಇಲ್ಲದೆ, ಪ್ರತ್ಯಕ್ಷ ನಿರೂಪಣೆಗೆ ಬಾರದಿರುವುದನ್ನು ನಾವು ಎಂದಿಗೂ ಹೇಳುವುದಿಲ್ಲ. **ನಾವು ಏನು ಹೇಳಿದರೂ ಅದು ಶಾಸ್ತ್ರಾಧಾರವಾಗಿ, ಸತ್ಯ ನಿರೂಪಣೆಯಾಗಿ ಇರುತ್ತದೆ.** ಪ್ರತಿಮೆ ಆರಾಧನೆ ಬೇರೆ, ವಿಗ್ರಹ ಆರಾಧನೆ ಬೇರೆಯೆಂದು ಹೇಳುತ್ತಿದ್ದೇವೆ. ಈ ಮಾತು ಕೆಲವರಿಗೆ ವಿಚಿತ್ರವಾಗಿ, ಆಶ್ಚರ್ಯವಾಗಿ ಕಾಣಿಸಿದರೂ ಯಾವಕಡೆ ನೋಡಿದರೂ ಪ್ರತಿಮೆ ಬೇರೆ, ವಿಗ್ರಹ ಬೇರೆಯಾಗಿ ಇವೆ. ನಿಮಗೆ ಅರ್ಥವಾಗುವುದಕ್ಕೆ ಬೇಕಾಗಿರುವ ವಿವರವನ್ನು ನಾವು ನೀಡಬಲ್ಲೆವು. ಇದಕ್ಕು ಮೊದಲು ಒಂದು ಆಕಾರವು ಗ್ರಹಿಸುವುದಾಗಿದ್ದರೇ ಗ್ರಹ ಎನ್ನುತ್ತೇವೆಂದು ಹೇಳಿದ್ದೇವೆ. ಆಕಾರಕ್ಕೆ ಪ್ರಾಣವಿರುವಾಗ ಗ್ರಹಿಸುವ ಶಕ್ತಿ ಇರುತ್ತದೆ ಆದಕಾರಣ ಆಕಾರವನ್ನು ಗ್ರಹವೆಂದು ಹೇಳುತ್ತಿದ್ದೇವೆ. ಒಂದುವೇಳೆ ಆಕಾರವು ಪ್ರಾಣವಿಲ್ಲದಾದರೇ ಅದರಲ್ಲಿ ಗ್ರಹಿಸಿಕೊಳ್ಳುವ ಶಕ್ತಿ ಇರುವುದಿಲ್ಲ. ಆಗ ಅದನ್ನು ಗ್ರಹ ಎನ್ನುವುದಕ್ಕೆ ಸಾಧ್ಯವಿಲ್ಲ. ಪ್ರಾಣವಿಲ್ಲದ ಆ ಗೊಂಬೆ ಯಾರ ಆಕಾರವನ್ನು ಹೋಲಿದ್ದರೇ ಅವರ ಒಂದು ಪ್ರತಿಮೆ ಎಂದು ಹೇಳಬಹುದು. ಪ್ರತಿಮೆ ಎಂದರೇ ಪ್ರತಿರೂಪವೆಂದು ಹೇಳಬಹುದು. ಪ್ರಾಣವಿಲ್ಲದ ಆಕಾರವು ವಾಸ್ತವವಾಗಿ ಪ್ರತಿಮೆಯೆ ಆಗುವುದು. ಪ್ರಾಣವಿರುವುದೆಲ್ಲಾ ಸತ್ಯವಾಗಿ ಗ್ರಹವೇ ಆಗುವುದು. ಗ್ರಹಗಳಲ್ಲಿ ಸ್ವಲ್ಪ ಪ್ರತ್ಯೇಕ ಶಕ್ತಿಯಿರುವ ಅವುಗಳನ್ನು ವಿಗ್ರಹ ಎನ್ನುತ್ತಿದ್ದೇವೆ. ವಿಗ್ರಹ ಎಂದರೇ ಗ್ರಹದಹಾಗೆ ಅಲ್ಲದೆ ಸ್ವಲ್ಪ ಪ್ರತ್ಯೇಕತೆಯನ್ನು ಹೊಂದಿರುವುದನ್ನು ವಿಗ್ರಹವೆಂದು ಹೇಳಬಹುದು.

**ಅವರ ಪ್ರಶ್ನೆ :– ಪ್ರಾಣವಿಲ್ಲದ ಗೊಂಬೆಗಳನ್ನು ಎಲ್ಲರೂ ವಿಗ್ರಹ ಎಂದು ಅನ್ನುತ್ತಿದ್ದಾರೆ ಅಲ್ಲವೇ! ನೀವೇನೋ ಪ್ರಾಣವಿರುವ ಅವುಗಳನ್ನೇ ಗ್ರಹಗಳೆಂದಾಗಲೀ ವಿಗ್ರಹಗಳೆಂದಾಗಲೀ ಅನ್ನಬಹುದೆಂದಿದ್ದೀರ. ಪ್ರಾಣವಿಲ್ಲದವುಗಳನ್ನು 'ಪ್ರತಿಮೆ' ಎಂದು ಅದು ವಿಗ್ರಹ ಅಲ್ಲವೆಂದು ಹೇಳುತ್ತಿರುವಿರಿ. ಹಾಗಿರುವಾಗ ಪ್ರಾಣವಿಲ್ಲದ ಪ್ರತಿಮೆಗಳನ್ನು ವಿಗ್ರಹಗಳೆಂದು ಬಹಳಜನ ಯಾಕೆ ಅಂದುಕೊಳ್ಳುತ್ತಿದ್ದಾರೆ?**

**ನಮ್ಮ ಉತ್ತರ:–** ನಾನು ಆ ವಿಷಯವನ್ನೇ ಹೇಳುತ್ತಿದ್ದೇನೆ. ಅಷ್ಟರಲ್ಲಿಯೇ ನೀವು ಪ್ರಶ್ನೆ ಕೇಳಿದ್ದೀರ. ನಿಮ್ಮ ಪ್ರಶ್ನೆಗೆ ಉತ್ತರವನ್ನು ಹೇಳುವೆನು ಕೇಳಿರಿ. ಮನುಷ್ಯರಿಗೆ ಸ್ಥೂಲ ದೃಷ್ಠಿ ಮಾತ್ರವೇ ಇದೆ. ಸ್ಥೂಲ ದೃಷ್ಠಿಯಿಂದ ಸ್ಥೂಲದೃಶ್ಯ ಕಾಣಿಸಿದರೂ, ದೃಶ್ಯರೂಪದಲ್ಲಿ ತಿಳಿದಿರುವ ಜ್ಞಾನದಲ್ಲಿ ಸ್ಥೂಲ ಜ್ಞಾನ, ಸೂಕ್ಷ್ಮ ಜ್ಞಾನ ಎರಡು ವಿಧಗಳ ಜ್ಞಾನ ಇರುವುದೆಂದು ಮೊದಲೇ ಹೇಳಿದ್ದೇನೆ. ಒಬ್ಬ ವ್ಯಕ್ತಿಯ ಆಕಾರವನ್ನು ನೋಡಿದಾಗ ಆಕಾರದಲ್ಲಿನ ಕದಲಿಕೆಗಳನ್ನು ಅನುಸರಿಸಿ ಆತನು ಪ್ರಾಣವಿರುವ ವ್ಯಕ್ತಿ ಎಂದು ಸ್ಥೂಲ ಜ್ಞಾನದ ಮೂಲಕ ನಿರ್ಣಯಿಸಿ, ಆತನ ಶರೀರದಲ್ಲಿ ಗ್ರಹ ಇದೆಯೆಂದು ಹೇಳುತ್ತಿದ್ದೇವೆ. ಆತನ ಶರೀರದಲ್ಲಿ ಅತನೇ ಗ್ರಹವಾಗಿ ಇದ್ದಾನೆ. ಗ್ರಹಿಸುವ ಶಕ್ತಿ ಇರುವವನನ್ನು 'ಗ್ರಹ' ಎಂದು ಅನ್ನುತ್ತಿದ್ದೇವೆಂದು ಮೊದಲೇ ಹೇಳಿದ್ದೇವೆ. ಆ ಲೆಕ್ಕದ ಪ್ರಕಾರ ನಾವು ಎಲ್ಲರು ಪ್ರತಿಯೊಂದನ್ನು ಗ್ರಹಿಸುವವರೇ. ಕೇಳುವುದನ್ನು ಗ್ರಹಿಸುತ್ತಿದ್ದೇವೆ. ನೋಡುವುದನ್ನು ಗ್ರಹಿಸುತ್ತಿದ್ದೇವೆ. ಆದ್ದರಿಂದ ಪ್ರಾಣವಿರುವ, ಜೀವವಿರುವ ಪ್ರತಿ ವ್ಯಕ್ತಿ ಗ್ರಹವೇ ಆಗುವನು. ಆದರೇ ಇಲ್ಲಿ ಬಂದಿರುವ ಸಮಸ್ಯೆ ಪ್ರಾಣವಿಲ್ಲದ ಒಂದು ಕಲ್ಲಿನ ಪ್ರತಿಮೆಯನ್ನು ವಿಗ್ರಹ ಎಂದು ಯಾಕೆ ಅನ್ನುತ್ತಿದ್ದಾರೆನ್ನುವುದೇ ಪ್ರಶ್ನೆ, ಅದಕ್ಕೆ ಉತ್ತರ ಗ್ರಹಿಸಿದರೆ ಹೀಗಿದೆ. ಗ್ರಹಕ್ಕಿಂತಲೂ ವಿಗ್ರಹವು ಸ್ವಲ್ಪ ಪ್ರತ್ಯೇಕತೆ ಹೊಂದಿರುತ್ತದೆಂದು ಸಹ ಹೇಳಿಕೊಂಡಿದ್ದೇವೆ. ಮೊದಲಿಗೆ ಪ್ರಾಣವಿಲ್ಲದ ಕಲ್ಲಿನ ಗೊಂಬೆಯಲ್ಲಿ ವಿಗ್ರಹ ಹೇಗೆ ಇರುತ್ತದೆಂದು, ಪ್ರಾಣವಿರುವುದರಲ್ಲಿ ಗ್ರಹವೊ ಅಥವಾ ವಿಗ್ರಹವೊ ಇದೆಯೆಂದರೇ ಅದಕ್ಕೆ ಅರ್ಥವಿದೆ. ಪ್ರಾಣವೇ ಇಲ್ಲದಿರುವುದರಲ್ಲಿ ವಿಗ್ರಹ ಇದೆಯೆಂದರೇ ಹೇಗೆ ನಂಬಬೇಕು? ಅದು ಪೂರ್ತಿ ಅಸತ್ಯ ಅಲ್ಲವೇ? ಎಂದು ಕೆಲವರು ಪ್ರಶ್ನಿಸಬಹುದು. ಇದು ಸಹಜವಾಗಿ

ಎಲ್ಲರಿಗೂ ಬರುವ ಸಂಶಯವೇ! ಈ ಸಂಶಯವನ್ನು ಪರಿಹರಿಸಿಕೊಳ್ಳುವುದಕ್ಕೆ ಸ್ಥೂಲ, ಸೂಕ್ಷ್ಮ ಜ್ಞಾನಗಳ ಹತ್ತಿರ ಹೋಗಿ ನೋಡೋಣ.

ಮನುಷ್ಯನಿಗಿರುವ ಐದು ಜ್ಞಾನೇಂದ್ರಿಯಗಳ ಮೂಲಕ ಹೊರಗಿನ ಜ್ಞಾನವನ್ನು ತಿಳಿಯಬಹುದು. ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ ಚರ್ಮ ಎಂಬ ಐದು ಇಂದ್ರಿಯಗಳು ಸ್ಥೂಲ ಅವಯವಗಳೇ ಆಗಿರುವುದರಿಂದ ಅವುಗಳಿಂದ ಸ್ಥೂಲ ಜ್ಞಾನವೇ ತಿಳಿಯುವುದು. ಆದರೂ ಕಣ್ಣು, ಕಿವಿ, ಮೂಲಕ ತಿಳಿಯುವ ಎರಡು ಜ್ಞಾನಗಳಲ್ಲಿ ಸೂಕ್ಷ್ಮ ಜ್ಞಾನವು ಕೂಡಾ ಒಳಗೊಂಡಿದೆ. ಕಣ್ಣಿಂದ ನೋಡುವ ದೃಶ್ಯದಲ್ಲಿ ಮನುಷ್ಯ ಗ್ರಹವೆಂದು ಸ್ಥೂಲ ದೃಷ್ಠಿ ಮೂಲಕ ತಿಳಿಯಬಹುದು. ಆದರೇ ಕಣ್ಣು ನೋಡಿರುವ ದೃಷ್ಠಿಯಲ್ಲಿ ಸೂಕ್ಷ್ಮ ಜ್ಞಾನವು ಸಹ ಇರುವುದರಿಂದ, ಒಂದು ಆಕಾರದಲ್ಲಿ ಪ್ರಾಣವಿರುವುದು, ಪ್ರಾಣ ಇಲ್ಲದಿರುವುದು ಗ್ರಹಿಸಬಹುದು. ಇದನ್ನು ಅನುಸರಿಸಿ ಕಣ್ಣು, ಕಿವಿಗೆ ಬಾಹ್ಯ ಪ್ರಪಂಚ ದೃಷ್ಠಿಯೇ ಅಲ್ಲದೇ, ಅಂತರಂಗ ದೈವ ದೃಷ್ಠಿ ಕೂಡಾ ಇದೆಯೆಂದು ಹೇಳಬಹುದು. ಕಿವಿಗೆ ಕೇಳಿಸುವ ಮಾತುಗಳಲ್ಲಿನ ಬಾಹ್ಯ ಅರ್ಥವನ್ನೇ ಅಲ್ಲದೇ ಅಂತರಂಗ ಆತ್ಮ ಜ್ಞಾನವನ್ನು ತಿಳಿಯುವ ಶಕ್ತಿ (ಗ್ರಹಿಸುವ ಶಕ್ತಿ ಇದೆಯೆಂದು ಹೇಳಬಹುದು. ಪ್ರಾಣವಿರುವ ಆಕಾರವನ್ನು ನೋಡಿದಾಗ ಅದರಲ್ಲಿ ಗ್ರಹವಿದೆಯೆಂದು ಹೇಳುವುದು ಸ್ಥೂಲ ದೃಷ್ಠಿಯಾದರೇ, ಕಲ್ಲಿನ ಗೊಂಬೆಯನ್ನು ನೋಡಿದಾಗ ಅಂತರಂಗ ಜ್ಞಾನದ ಪ್ರಕಾರ ಅಂದರೇ ಸೂಕ್ಷ್ಮ ದೃಷ್ಠಿ ಪ್ರಕಾರ ಕಲ್ಲಿನ ಗೊಂಬೆಯಲ್ಲಿ ಪ್ರಾಣವಿದೆಯೋ ಇಲ್ಲವೋ ಹೇಳಬಹುದು. ಹಾಗೆ ತಿಳಿಯುವ ಸೂಕ್ಷ್ಮ ಜ್ಞಾನವನ್ನೇ ಆಧ್ಯಾತ್ಮಿಕ ಜ್ಞಾನವೆಂದು ಕೂಡಾ ಅನ್ನಬಹುದು. ಆಧ್ಯಾತ್ಮಿಕ ಜ್ಞಾನ ತಿಳಿದಿರುವವರು ಯಾವ ಗೊಂಬೆಯಲ್ಲಿ ಯಾವ ಶಕ್ತಿ ಇರುವುದೋ, ಎಷ್ಟು ಗ್ರಹಿಸುವ ಶಕ್ತಿ ಇರುವುದೋ ತಿಳಿಯಬಲ್ಲರು. ಕಲ್ಲಿನ ಗೊಂಬೆಗಳಲ್ಲಿ ಸಹ ಜೀವಿಯು ಇದ್ದಾನೆಂದು ತಿಳಿದಾಗ ಹಾಗೆ ಇರುವವನನ್ನು ವಿಗ್ರಹ ಎನ್ನುತ್ತೇವೆ. ತೊಗಲು ಗೊಂಬೆಯಲ್ಲಿ ಜೀವಿ(ಜೀವಾತ್ಮ) ಇದ್ದರೆ ಅವನನ್ನು ಗ್ರಹ ಎನ್ನುತ್ತೇವೆ. ಹಾಗೆಯೇ ಕಲ್ಲಿನ ಗೊಂಬೆಯಲ್ಲಿ ಜೀವಿಯಿದ್ದರೆ ಅವನನ್ನು ವಿಗ್ರಹ ಎನ್ನುತ್ತೇವೆ. ಎಲ್ಲಾದರೂ ಗೊಂಬೆ ಇದ್ದು

ಅದರಲ್ಲಿ ಜೀವಿಯು ಇಲ್ಲದಿದ್ದರೇ ಆ ಗೊಂಬೆಯನ್ನು ಪ್ರತ್ಯೇಕಿಸಿ 'ಪ್ರತಿಮೆ' ಎನ್ನುತ್ತೇವೆ. ಪ್ರತಿರೂಪ ಹೊಂದಿರುವುದು ಪ್ರತಿಮೆ ಎಂದು ಹೇಳಬಹುದು. ಕೃಷ್ಣನ ಗೊಂಬೆಯಲ್ಲಿ ಎಲ್ಲಾದರಾಗಲಿ ಜೀವಿಯು ಇರುವುದಿಲ್ಲ. ಆದ್ದರಿಂದ ಕೃಷ್ಣನ ಗೊಂಬೆಯನ್ನು ಪ್ರತಿಮೆ ಎಂದು ಕರೆಯಬೇಕು. ವಿಗ್ರಹ ಎಂದು ಹೆಸರಿಟ್ಟು ಹೇಳಬಾರದು. ಹಾಗೆಯೇ ಜೀವಿ ಇರುವ ಯಾವ ಆಕಾರವನ್ನಾದರೂ ವಿಗ್ರಹವೇ ಎಂದು ಹೇಳಬೇಕೆ ಹೊರತು 'ಪ್ರತಿಮೆ' ಎಂದು ಕರೆಯಬಾರದು.

ಈಶ್ವರ ಲಿಂಗವನ್ನು ಬಹಳ ಜನ ನೋಡಿರುತ್ತೇವೆ. ಈಶ್ವರ ಲಿಂಗದಲ್ಲಿ ಎಲ್ಲಿಯೂ ಕೂಡಾ ಜೀವಿಯು ಇರುವುದಿಲ್ಲ. ಆದ್ದರಿಂದ ಈಶ್ವರ ಲಿಂಗವನ್ನು ಕೂಡಾ 'ಈಶ್ವರ ಪ್ರತಿಮೆ' ಎಂದು ಹೇಳಬಹುದು. ಸೃಷ್ಠಿಕರ್ತನಾದ ದೇವರಿಗೆ ಪ್ರತಿರೂಪವಾಗಿರುವ ಯಾವ ಗೊಂಬೆಯಲ್ಲಿ ಕೂಡಾ ಜೀವಿಯು ಇರುವುದಿಲ್ಲ. ಆದ್ದರಿಂದ ಆ ಗೊಂಬೆಗಳು ಪ್ರತಿಮೆಗಳೇ ಹೊರತು ವಿಗ್ರಹಗಳಲ್ಲ. ಹಾಗೆಂದು ನಮಗಿಷ್ಟಬಂದ ಗೊಂಬೆಯನ್ನು ದೇವರ ಪ್ರತಿರೂಪವಾಗಿ ಹೇಳಿಕೊಳ್ಳುವುದಕ್ಕೆ ಅವಕಾಶವಿಲ್ಲ. ಗತ ಚರಿತ್ರೆಯಲ್ಲಿ ಎಂದಾದರೂ ದೇವರು ಆ ರೂಪದಲ್ಲಿ ಇದ್ದಿದ್ದರೇ, ಆ ಆಕಾರ ಮಾತ್ರ ಪ್ರತಿಮೆ ಆಗುವುದಕ್ಕೆ ಅವಕಾಶವಿರುವುದು. ಉಳಿದ ಯಾವ ಆಕಾರದಲ್ಲಾದರೂ ಜೀವಿಯು ಇರುತ್ತಾನೆ. ಆದಕಾರಣ ಆಕಾರ ಗೊಂಬೆಗಳೆಲ್ಲಾ ವಿಗ್ರಹಗಳೇ ಆಗುತ್ತವೆ. ಪ್ರತ್ಯೇಕಿಸಿ ಒಬ್ಬ ಕೃಷ್ಣನ ಆಕಾರದಲ್ಲಿ ಮಾತ್ರ ಯಾವ ಜೀವಿಯು ಸೇರುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಕೃಷ್ಣನ ಆಕಾರವನ್ನು ಮಾತ್ರವೇ ಪ್ರತಿಮೆ ಎನ್ನುತ್ತಿದ್ದೇವೆ. ಕೃಷ್ಣನ ಆಕಾರ ಒಂದನ್ನು ಮಾತ್ರ ನಾವು ಗೌರವಿಸುತ್ತಿದ್ದೇವೆ. ಅಷ್ಟೇ ಹೊರತು ಭೂಮಿಮೇಲೆ ಯಾವ ಆಕಾರವನ್ನು ನಾವು ಆಶ್ರಯಿಸಲಿಲ್ಲ. ದೇವರು ಭಗವಂತನಾಗಿ ಬಂದಿರುವ ಆಕಾರವಾದುದರಿಂದ ಕೃಷ್ಣನ ಗೊಂಬೆ ಮಾತ್ರ ಪ್ರತಿಮೆಯಾಗಿ ಇದೆ. ಆ ವಿಷಯವನ್ನು ತಿಳಿದಿರುವುದರಿಂದ ನಾವು ಕೃಷ್ಣ ಪ್ರತಿಮೆಯನ್ನು ಗೌರವಿಸುವುದು ನಡೆಯುತ್ತಿದೆ. ನಾವು ಕುರುಡರಂತೆ ಏನೂ ಮಾಡಲಿಲ್ಲ. ಭೂಮಿಮೇಲೆ ಎಷ್ಟೋ ಗೊಂಬೆಗಳನ್ನು ವಿಗ್ರಹಗಳೆನ್ನುವುದಕ್ಕೆ, ಕೃಷ್ಣನ ಗೊಂಬೆಯನ್ನು ಪ್ರತಿಮೆ ಎನ್ನುವುದಕ್ಕೆ ನಮ್ಮ ಹತ್ತಿರ ಪೂರ್ತಿ ಶಾಸ್ತ್ರ ಬದ್ಧವಾದ ಆಧಾರವಿದೆ. ಈ ವಿವರವೆಲ್ಲವೂ

ಅವರಿಗೆ ತಿಳಿಯದಿರುವುದರಿಂದ ಮುಸ್ಲಿಮ್‌ರು ನಮ್ಮನ್ನು ಕೂಡಾ ವಿಗ್ರಹಾರಾಧನೆಯವರೊಂದಿಗೆ ಸೇರಿಸಿ ಹೇಳಿರಬಹುದು. ಅವರಿಗೆ ತಿಳಿದಿರುವುದು ಅವರು ಹೇಳಿದ್ದಾರೆ. ಅಷ್ಟು ಮಾತ್ರಕ್ಕೆ ಅದರ ಬಗ್ಗೆ ಏಕೆ ತಲೆ ಕೆಡಿಸಿಕೊಳ್ಳಬೇಕು? ನಾವು ಯಾರಾಗಿರುವುದೂ, ನಾವು ಯಾರನ್ನು ಆರಾಧಿಸುವುದೂ ನಮಗೆ ತಿಳಿದಿದೆ ಅಲ್ಲವೇ! ನಾವು ಅಸಲಾದ ದೇವರನ್ನೇ ಆಶ್ರಯಿಸಿದಾಗ, ಚಿಲ್ಲರೆ ದೇವತೆಗಳನ್ನು ಆಶ್ರಯಿಸದೆ ಇರುವಾಗ ವಿಗ್ರಹಾರಾಧನೆ ಮಾಡದಿರುವಾಗ ನಾವು ಏಕೆ ಬೆಚ್ಚಿ ಬೀಳಬೇಕು?

ಪ್ರತಿಮೆಯನ್ನಾದರೂ, ವಿಗ್ರಹವನ್ನಾದರೂ ಮನುಷ್ಯರು ತಯಾರಿ ಮಾಡಿದ್ದರೇ ತಯಾರಾದ ಆಕಾರಗಳೇ ಅಲ್ಲವೇ! ಹಾಗಿರುವಾಗ ಅವು ದೇವರೊಂದಿಗೆ ಸಮಾನವಾಗುವುದಾ ಎಂದು ಕೆಲವರು ಕೇಳುವುದನ್ನು ನಾವು ಸಹ ಕೇಳಿದ್ದೇವೆ. ಮನುಷ್ಯರು ತಯಾರಿ ಮಾಡಿದಷ್ಟು ಮಾತ್ರಕ್ಕೆ ಅವುಗಳನ್ನು ಕಡಿಮೆಯಾಗಿ ನೋಡಬಾರದು. ಒಂದು ಗೊಂಬೆಯಲ್ಲಿರುವ ಶಕ್ತಿಯನ್ನು ತೆಗೆದುಹಾಕಲಾರೆವು. ಹಾಗೆಯೇ ಇಲ್ಲದ ಶಕ್ತಿಯನ್ನು ತುಂಬಲಾರೆವು. ಆ ಮಾತಿಗೆ ಬಂದರೇ ಈದಿನ ನಮ್ಮ ಮುಂದಿರುವ ಮೂರು ದೈವಗ್ರಂಥಗಳನ್ನು ಮನುಷ್ಯರು ಮುದ್ರಿಸಿ ಗ್ರಂಥಗಳಾಗಿ ತಯಾರಿ ಮಾಡಿದ್ದಾರೆ. ಅವುಗಳನ್ನು ಮನುಷ್ಯರು ಮಾಡಿರುವ ಗ್ರಂಥಗಳೆಂದು, ಅವುಗಳಲ್ಲಿ ಶಕ್ತಿ ಇಲ್ಲವೆಂದು ಹೇಳಬಲ್ಲೆವಾ! ಆ ಗ್ರಂಥಗಳಲ್ಲಿ ದೈವಶಕ್ತಿ ತುಂಬಿದೆ. ಆದರೇ ಆ ಶಕ್ತಿಯನ್ನು ಗ್ರಂಥವನ್ನು ತಯಾರಿ ಮಾಡಿರುವ ಮನುಷ್ಯರು ತುಂಬಲಿಲ್ಲ ಅಲ್ಲವೇ! ಮನುಷ್ಯನ ಮೂಲಕ ದೇವರೇ ಎಲ್ಲವನ್ನೂ ಸೃಷ್ಟಿಸುತ್ತಿದ್ದಾನೆ. ದೇವರು ಯಾವುದರಲ್ಲಿ ಯಾವ ಶಕ್ತಿಯನ್ನು ತುಂಬಿದ್ದಾನೋ ನಮಗೆ ತಿಳಿದಿಲ್ಲ. ಆದ್ದರಿಂದ ಮನುಷ್ಯನ ಕೈಯಿಂದ ತಯಾರಾದ ಪ್ರತಿಮೆಯಲ್ಲಿ ದೈವಶಕ್ತಿ ಇದೆಯೆಂದೇ ಹೇಳಬಹುದು.

**'ದೇವರು ಭೂಮಿಮೇಲೆ ಅವತರಿಸುತ್ತಾನೆಂದು'** ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಆರನೆಯ ಶ್ಲೋಕದಲ್ಲಿ, ರಾಜವಿದ್ಯಾ ರಾಜಗುಹ್ಯಾ ಯೋಗವೆಂಬ ಅಧ್ಯಾಯದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿಯೂ

ಹೇಳಿರುವುದಾಗಿದೆ. ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಸೂರಾ 89ರಲ್ಲಿ, ಆಯತ್ 22ರಲ್ಲಿ ಸಹ ದೇವರು ಅವತರಿಸುತ್ತಾನೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೇ ಸೂರಾ 15ರಲ್ಲಿ ಆಯತ್ 29ರಲ್ಲಿ **(15–29) "ನಾನು ಮಣ್ಣಿನಿಂದ ಗೊಂಬೆಯನ್ನು ಮಾಡಿ ಅದರೊಳಗೆ ನನ್ನ ಆತ್ಮವನ್ನೇ ಊದಿ ಭೂಮಿ ಮೇಲಕ್ಕೆ ಕಳುಹಿಸುತ್ತಿದ್ದೇನೆ. ನಾನು ನನ್ನ ಆತ್ಮವನ್ನು ಊದಿ ಕಳುಹಿಸಿದ ವ್ಯಕ್ತಿಯನ್ನು ನೋಡಿ ದೇವದೂತರೆಲ್ಲರೂ ಸಾಷ್ಟಾಂಗ ನಮಸ್ಕಾರ ಮಾಡುವರು. ನೀವು ಕೂಡಾ ಸಾಷ್ಟಾಂಗ ನಮಸ್ಕಾರ ಮಾಡಿರಿ"** ಎಂದು ದೇವರೇ ಹೇಳಿರುವಾಗ, ಆ ಮಾತನ್ನು ಗ್ರಹಿಸದ ಮನುಷ್ಯರು, ದೇವರು ತನ್ನ ಆತ್ಮವಾಗಿ ಕಳುಹಿಸಿದವನು ಯಾರೋ ತಿಳಿಯದ ಮನುಷ್ಯರು, ಬಂದಿರುವವನಿಗೆ ನಮಸ್ಕರಿಸುತ್ತಿಲ್ಲ. ದೇವರು ತನ್ನ ಆತ್ಮವನ್ನು ಊದಿ ಕಳುಹಿಸುವನೆಂದು ಹೇಳಿದಾಗ ತನ್ನ ಪ್ರತಿನಿಧಿಯನ್ನು ಕಳುಹಿಸುವನೆಂದೇ ಅಲ್ಲವೇ ಅರ್ಥ. ಆದರೂ ಕೆಲವರು ನಾವು ಮನುಷ್ಯನಾಗಿ ಬಂದಿರುವ ಯಾರಿಗೂ ಮುಗಿಯುವುದಿಲ್ಲ ಎಂದು ಖುರಾನ್ ವಾಕ್ಯವನ್ನೇ ಎದುರಿಸಿ ಮಾತನಾಡುತ್ತಿದ್ದಾರೆ. ದೇವರು ತನ್ನ ಪ್ರತಿನಿಧಿಯಾಗಿ ಕಳುಹಿಸಿರುವವನನ್ನೇ ನಾವು **ಭಗವಂತನು** ಎಂದು ಹೇಳುತ್ತಿದ್ದೇವೆ. ಅಂತಹ ಅವತಾರವಾಗಿ ಬಂದಿರುವವನೇ **ಕೃಷ್ಣನು.** ಆದ್ದರಿಂದ ಕೃಷ್ಣನ ಆಕಾರವನ್ನು ಪ್ರತಿಮೆ ಎಂದು ಹೇಳುತ್ತಿದ್ದೇವೆ. ದೇವರ ಪ್ರತಿನಿಧಿಯಾಗಿ ಬಂದು, ದೇವರ ಜ್ಞಾನವನ್ನು ಹೇಳಿ ಹೋಗಿರುವ ವ್ಯಕ್ತಿ ವಿಗ್ರಹವಲ್ಲ. ಆತನು ದೇವರ ಪ್ರತಿರೂಪವಾಗಿ ಬಂದಿರುವವನಾಗಿರುವುದರಿಂದ ದೇವರ ಪ್ರತಿರೂಪವನ್ನು 'ಪ್ರತಿಮೆ' ಎನ್ನುತ್ತಿದ್ದೇವೆ. ದೇವರು ಅಂತಿಮ ದೈವಗ್ರಂಥದಲ್ಲಿ 42ನೇ ಸೂರಾ 51ನೇ ಆಯತ್‌ನಲ್ಲಿ **"ನಾನು ಮೂರು ವಿಧಗಳಲ್ಲಿ ನನ್ನ ಜ್ಞಾನವನ್ನು ಭೂಮಿಮೇಲೆ ಪ್ರಜೆಗಳಿಗೆ ತಿಳಿಸುತ್ತೇನೆಂದು"** ಹೇಳಿದ್ದಾನೆ. ಆ ಮೂರು ವಿಧಾನಗಳಲ್ಲಿ ಒಂದು ವಿಧಾನವಾಗಿ **ಭಗವಂತನು** ಎಂಬ ಮಾರುವೇಷದಲ್ಲಿ **ದೇವರು** ಬಂದು ತನ್ನ ಜ್ಞಾನವನ್ನು ಹೇಳಿ ಹೋಗುವನು.

ಹಾಗೆ ಬಂದಿರುವ ರೂಪವನ್ನೇ ದೇವರ ಪ್ರತಿರೂಪವೆಂದು ಅನ್ನುತ್ತಿದ್ದೇವೆ. ಹಾಗೆ ದೈವಶಕ್ತಿಯೊಂದಿಗೆ ಕೂಡಿಬಂದಿರುವವನನ್ನು ದೇವದೂತರು ಗುರುತಿಸಿ, ಆತನು ಮಾನವಾಕಾರದಲ್ಲಿ ಇದ್ದರೂ ದೇವದೂತರೆಲ್ಲರೂ

ಮುಗಿಯುತ್ತಿದ್ದಾರೆ. ಅಂತಹ ದೇವರ ಪ್ರತಿರೂಪಕ್ಕೆ, ದೇವರ ಆತ್ಮ ತುಂಬಿರುವವನನ್ನು ಭಗವಂತನಾಗಿ ಗುರುತಿಸಿ, ದೇವರ ಮಾರುವೇಷವಾಗಿ ಗುರುತಿಸಿ ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿರೆಂದು ಸ್ವತಃವಾಗಿ ಅಲ್ಲಾಹ್‌ನೇ ಖುರಾನ್‌ನಲ್ಲಿ 15–29ನೇ ವಾಕ್ಯದಲ್ಲಿ ಹೇಳಿದ್ದಾನೆ. ದೇವರೇ ತಾನು ಕಳುಹಿಸಿರುವ ಮನುಷ್ಯನಿಗೆ ನಮಸ್ಕಾರ ಮಾಡಿರೆಂದು ಹೇಳಿದ್ದಾನೆಂದರೇ ಆ ಬಂದಿರುವ ವ್ಯಕ್ತಿ ಸಾಮಾನ್ಯನಲ್ಲವೆಂದು ಅರ್ಥವಾಗಿ ಹೋಗುತ್ತಿದೆ. ಈ ಮಾತು ಸ್ವತಃ ಅಂತಿಮ ದೈವ ಗ್ರಂಥ ಖುರಾನ್‌ನಲ್ಲಿ ಇದ್ದರೇ, ಆ ಮಾತನ್ನು ಗ್ರಹಿಸಿಕೊಳ್ಳದ ಮುಸ್ಲಿಮ್‌ರು ದೇವರು ಹೇಳಿರುವ ಧರ್ಮವನ್ನು (ಮಾತನ್ನು) ಬಿಟ್ಟು, ತಮ್ಮ ಮತ ಧರ್ಮದ ಪ್ರಕಾರ ಮನುಷ್ಯನಾಗಿರುವ ಯಾರಿಗೂ ಮುಗಿಯಬಾರದು, ನಾವು ಮುಗಿಯುವುದಿಲ್ಲ ಎಂದು ಕಡಾಖಂಡಿತವಾಗಿ ಹೇಳುತ್ತಿದ್ದಾರೆ. ನಮ್ಮ ನಿಯಮದ(ಷರಿಯತ್) ಪ್ರಕಾರ ಯಾರಿಗೂ ನಮಸ್ಕರಿಸುವುದಿಲ್ಲ ಎಂದು ಅದೇ ಆಯತ್ ಕೆಳಗೆ ವಿವರದಲ್ಲಿ ಬರೆದುಕೊಂಡಿದ್ದಾರೆ. ಇದನ್ನನುಸರಿಸಿ ನೋಡಿದರೆ ಅಲ್ಲಾಹ್ ಹೇಳಿರುವ ವಾಕ್ಯಕ್ಕಿಂತಲೂ, ದೇವರು ಹೇಳಿರುವ ನಿಯಮಕ್ಕಿಂತಲೂ, ಮತ ಹೇಳಿರುವ ನಿಯಮವೇ ದೊಡ್ಡದಾಗಿ ಇರುವಂತೆ ತಿಳಿಯುತ್ತಿದೆ. ಮತ ನಿಯಮದ ಮುಂದೆ, ಮನುಷ್ಯರು ತಯಾರು ಮಾಡಿಕೊಂಡಿರುವ ಮತ ಧರ್ಮದ ಮುಂದೆ, ಖುರಾನ್‌ನಲ್ಲಿ ದೇವರು ಹೇಳಿರುವ ಅಲ್ಲಾಹ್ ವಾಕ್ಯವು ನಿಲ್ಲಲಿಲ್ಲವೆಂದು ಅರ್ಥವಾಗಿದೆ. ಹೊರಗೆ ಮನುಷ್ಯರಿಗೆಲ್ಲರಿಗೂ ತಿಳಿಯುವ ವಿಧವಾಗಿ ಅಲ್ಲಾಹ್ ದೊಡ್ಡವನು, ಆತನು ಹೇಳಿರುವ ಖುರಾನ್ ಜ್ಞಾನವು ದೊಡ್ಡದೆಂದು ಹೇಳುವ ಮುಸ್ಲಿಮ್ ಸಮಾಜದವರು, ದೇವರು ನಾನು ಕಳುಹಿಸಿರುವ ಮನುಷ್ಯನಿಗೆ ನಮಸ್ಕರಿಸೆಂದು ಹೇಳಿದರೂ ನಾವು ನಮಸ್ಕರಿಸುವುದಿಲ್ಲ ಎಂದು ಹೇಳುವುದು ವಿಡ್ಡೂರವಾಗಿದೆ.

ದೇವರೇ ತನ್ನ ಗ್ರಂಥದಲ್ಲಿ ಒಬ್ಬ ವ್ಯಕ್ತಿಯನ್ನು ಪ್ರತ್ಯೇಕವಾಗಿ ಹೇಳಿ ದೇವದೂತರು ಸಹಿತ ನಮಸ್ಕರಿಸುತ್ತಿದ್ದಾರೆ, ನೀವು ಕೂಡಾ ಸಾಷ್ಟಾಂಗ ನಮಸ್ಕಾರ ಮಾಡಿರೆಂದು ಹೇಳಿದ್ದಾನೆಂದರೇ ಆ ವ್ಯಕ್ತಿ ಸಾಮಾನ್ಯವಾದ ಮನುಷ್ಯನಲ್ಲ

ಎಂದು ಅರ್ಥವಾಗುತ್ತಿದೆ. ಹಾಗೆ ಬಂದಿರುವವನು ದೇವರ ಪ್ರತಿನಿಧಿಯೆಂದು, ಆತನ ಪ್ರತಿರೂಪವೆಂದು ತಿಳಿಯುತ್ತಿದೆ. ಆತನನ್ನೇ ಭಗವಂತನೆಂದು ಅನ್ನಬಹುದು. ದೇವರ ಆತ್ಮದಿಂದ ಹುಟ್ಟಿರುವವನು ದೇವರೇ ಆದರೂ, ಹುಟ್ಟಿರುವವನನ್ನು 'ದೇವರು' ಎಂದು ಕರೆಯಬಾರದು. ಆದ್ದರಿಂದ ಗರ್ಭದಿಂದ ಬಂದಿರುವವನೆಂದು ಹೇಳುತ್ತಾ **ಭಗವಂತನು** ಎಂದು ಕರೆದಿದ್ದಾರೆ. ಭಗ ಎಂದರೆ ತಾಯಿಗರ್ಭ ಎಂದು ಅರ್ಥ. ಭಗವಂತನು ಎಂದರೇ ತಾಯಿ ಗರ್ಭದಿಂದ ಬಂದಿರುವವನೆಂದು ತಿಳಿಯುತ್ತಿದೆ. ಹಾಗೆ ತಾಯಿ ಗರ್ಭದಿಂದ ಹುಟ್ಟಿರುವ ಪ್ರತ್ಯೇಕವಾದ ಮನುಷ್ಯ **ಶ್ರೀಕೃಷ್ಣನು**. ಆದ್ದರಿಂದ ಕೃಷ್ಣನ ರೂಪವನ್ನು ಗ್ರಹ ಎಂದಾಗಲೀ, ವಿಗ್ರಹ ಎಂದಾಗಲೀ ಕರೆಯುತ್ತಿಲ್ಲ. ಕೃಷ್ಣನ ರೂಪವನ್ನು 'ಪ್ರತಿಮೆ' ಎಂದು ಕರೆಯುತ್ತಿದ್ದೇವೆ. ಭೂಮಿ ಮೇಲೆ ಆಕಾರ ಹೊಂದಿದ್ದು, ವಿಗ್ರಹ ಅಲ್ಲದೇ ಪ್ರತಿಮೆಯಾಗಿರುವುದು ಒಂದೇ ಒಂದು ಕೃಷ್ಣನ ಆಕಾರವೇ ಎಂದು ಎಲ್ಲರೂ ನೆನಪಿಟ್ಟುಕೊಳ್ಳಬೇಕು. ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿರುವ ಆರನೆಯ ಶ್ಲೋಕದ ಪ್ರಕಾರ, ಹಾಗೆಯೇ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿರುವ ಹನ್ನೊಂದನೆಯ ಶ್ಲೋಕದ ಪ್ರಕಾರ, ಹಾಗೆಯೇ ಅಂತಿಮ ದೈವಗ್ರಂಥವಾದ ಖುರಾನ್‌ನಲ್ಲಿ ಸೂರಾ 89 ಆಯತ್ 22ರ ಪ್ರಕಾರ, ಸೂರಾ 15 ಆಯತ್ 29ರ ಪ್ರಕಾರ ಕೃಷ್ಣನನ್ನು ದೇವರ ಅವತಾರವಾಗಿಯೂ, ಆತನ ರೂಪವನ್ನು ಪ್ರತಿಮೆಯಾಗಿಯು ಹೇಳುತ್ತಿದ್ದೇವೆ.

ದೇವರು ಭೂಮಿಮೇಲೆ ಹುಟ್ಟುವುದಿಲ್ಲವೆಂದು ಕೆಲವರು ಹೇಳುತ್ತಿದ್ದರೂ, ದೈವಗ್ರಂಥಗಳಾದ ಮೂರು ಗ್ರಂಥಗಳಲ್ಲಿ ದೇವರು ಹುಟ್ಟುವನೆಂದೇ ಇದೆ. ಆದರೇ ದೇವರ ಪ್ರಾರ್ಥಮಿಕ ಧರ್ಮಕ್ಕೆ ಮುಪ್ಪು ಉಂಟಾಗದಂತೆ ದೇವರು ದೇವರಾಗಿ ಹುಟ್ಟುವುದಿಲ್ಲ. ದೇವರು ಮತ್ತೊಬ್ಬನಾಗಿ ಹುಟ್ಟುತ್ತಿದ್ದಾನೆ. ದೇವರು ದೇವರಾಗಿ ಬಂದರೂ, ಅಥವಾ ಮಾರು ವೇಷದಲ್ಲಿ ಬಂದರೂ ಆತನು ಬಂದಂತೆಯೆ ಅಲ್ಲವೇ! ದೈವಗ್ರಂಥದಲ್ಲಿ ನನ್ನ ಜ್ಞಾನವು ನನಗೆ ಹೊರತು ಯಾವ ಮಾನವನಿಗೂ ತಿಳಿದಿಲ್ಲ ಎಂದಿದ್ದಾನೆ. ಆ ಮಾತು ನೂರಕ್ಕೆ ನೂರು ಪಾಲು ಸತ್ಯ. ಅದೇ ದೈವಗ್ರಂಥದಲ್ಲಿ ಮತ್ತೊಂದು ಕಡೆ **"ನಾನು ಪ್ರತ್ಯಕ್ಷವಾಗಿ**

**ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ ಎಂದು ಹೇಳುತ್ತಾ, ನನ್ನ ಜ್ಞಾನವನ್ನು ಮೂರು ವಿಧಗಳಾಗಿ ಮನುಷ್ಯರಿಗೆ ತಿಳಿಸುವೆನು"** ಎಂದಿದ್ದಾನೆ. ಆಗ ಆತನ ಮಾತನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕೋ ಕೆಲವರಿಗೆ ಅರ್ಥವಾಗದೆ ಹೋಗಿರಬಹುದು. ನಮಗೆ ಮಾತ್ರ ಸುಲಭವಾಗಿ ಆ ಮಾತು ಅರ್ಥವಾಗಿದೆ.

ಇಲ್ಲಿ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಒಬ್ಬ ದೊಡ್ಡ ಮನುಷ್ಯನಿಗೆ ಚತುಷಷ್ಠೀ ವಿದ್ಯೆಗಳು ಬರುತ್ತವೆ. ಅಂದರೇ ಅರವತ್ತು ನಾಲ್ಕು ವಿದ್ಯೆಗಳು ಬರುತ್ತವೆಂದು ಅರ್ಥ. ಆದರೇ ಆ ದೊಡ್ಡ ಮನುಷ್ಯ ಹತ್ತುಜನ ತನ್ನ ಅನುಯಾಯಿಗಳೊಂದಿಗೆ ಸೇರಿ ವಿದೇಶೀ ಯಾತ್ರೆಗೆ ಹೋದನು. ವಿದೇಶೀ ಯಾತ್ರೆಯಲ್ಲಿ ಮೂರು ತಿಂಗಳ ಕಾಲ ಇರಬೇಕೆಂದು ಅದಕ್ಕೆ ತಕ್ಕ ಹಣವನ್ನು ತೆಗೆದುಕೊಂಡು ಹೊರಟನು. ಅಲ್ಲಿ ಒಂದು ತಿಂಗಳ ಕಾಲ ಕಳೆಯಿತು. ತನ್ನ ಹತ್ತುಜನ ಅನುಯಾಯಿಗಳ ಖರ್ಚೆಲ್ಲವೂ ಆ ದೊಡ್ಡ ಮನುಷ್ಯನೇ ನೋಡಿಕೊಳ್ಳುತ್ತಿದ್ದನು. ಆಗ ಆ ದೊಡ್ಡ ಮನುಷ್ಯನ ಬಳಿಯಿರುವ ಹಣವನ್ನು ಆ ದೇಶದ ಕಳ್ಳರು ಕದ್ದಿದ್ದಾರೆ. ದೊಡ್ಡಮನುಷ್ಯನ ಬಳಿಯಿದ್ದ ಹಣವೆಲ್ಲಾ ಹೋಯಿತು. ಪಕ್ಕದಲ್ಲಿ ಇಟ್ಟುಕೊಂಡ ಸ್ವಲ್ಪ ಹಣ ಮಾತ್ರ ಉಳಿದಿದೆ. ಆ ಉಳಿದ ಹಣ ಮೂರು ಅಥವಾ ನಾಲ್ಕು ದಿನಗಳಿಗೆ ಸರಿಹೋಗಬಹುದು. ನಂತರ ಹಣವಿಲ್ಲದೇ ವಿದೇಶದಲ್ಲಿ ಕಷ್ಟ ಪಡಬೇಕಾಗಿಬರುತ್ತದೆ. ಆ ಸಮಯದಲ್ಲಿ ಎಲ್ಲರಿಗೂ ನಾಯಕನಾಗಿ ಇದ್ದ ದೊಡ್ಡ ಮನುಷ್ಯ ಚೆನ್ನಾಗಿ ಆಲೋಚಿಸಿ ಒಂದು ನಿರ್ಣಯಕ್ಕೆ ಬಂದನು. ಆ ನಿರ್ಣಯವನ್ನು ಯಾರಿಗೂ ಹೇಳಬಾರದೆಂದುಕೊಂಡನು. ಏಕೆಂದರೇ ಆ ನಿರ್ಣಯವು ತನ್ನ ಯೋಗ್ಯತೆಗೆ ತಕ್ಕಂತಹದ್ದಲ್ಲ. ಆದ್ದರಿಂದ ಆತನು ನಿರ್ಣಯವನ್ನು ಹೊರಗೆ ಹೇಳದೆ, ಆ ನಿರ್ಣಯವನ್ನು ಮರುದಿನವೇ ಕಾರ್ಯ ರೂಪಕ್ಕೆ ತಂದನು. ತನ್ನ ಕಾರ್ಯವು ಯಾರಿಗೂ ತಿಳಿಯಬಾರದು, ಆದಕಾರಣ ಅಲ್ಲಿಯವರೆಗು ದೊಡ್ಡಮನುಷ್ಯ ನಾಗಿರುವ ಆತನು ತನ್ನನ್ನು ಯಾರೂ ಗುರುತಿಸದಹಾಗೆ ತನ್ನ ವೇಷವನ್ನು ಬದಲಾಯಿಸಿಕೊಂಡನು. ಶರೀರವೆಲ್ಲಾ ಮುಸುಗು ಧರಿಸಿದನು. ಆಗ ಆತನನ್ನು ದೊಡ್ಡ ಮನುಷ್ಯ ಎಂದು ಯಾರೂ ಗುರುತಿಸಲಾರರು. ಆ ವಿಧವಾಗಿ ತನ್ನನ್ನು

ಯಾರೂ ಗುರುತಿಸಲಾರದ ವಿಧವಾಗಿ ತಯಾರಾದ ದೊಡ್ಡ ಮನುಷ್ಯ, ತಾನು ಮೊದಲೇ ಕಲಿತ 64 ವಿದ್ಯೆಗಳಲ್ಲಿ ಒಂದಾದ ಚೋರಕಳ (ಕಳ್ಳತನ ಮಾಡುವುದು) ಉಪಯೋಗಿಸಿ ಹಣವನ್ನು ಪಡೆಯಬೇಕೆಂದುಕೊಂಡನು. ಹೋದ ಹಣ ತಿರುಗಿ ಬರುವುದಕ್ಕೆ ಆ ದಾರಿ ಬಿಟ್ಟು ಬೇರೆ ದಾರಿ ಕಾಣಿಸಲಿಲ್ಲ. ಯಾರೂ ಗುರುತಿಸದಹಾಗೆ ಮಾರುವೇಷದಲ್ಲಿರುವ ದೊಡ್ಡ ಮನುಷ್ಯ, ತಾನು ಕಲಿತ ವಿದ್ಯೆಗಳಲ್ಲಿ ಒಂದಾದ ಅದನ್ನು ಪ್ರದರ್ಶಿಸಿ ಎರಡನೆಯ ದಿನವೇ ಹಣವನ್ನು ಸಂಪಾದಿಸಿದನು. ಆ ಹಣದಿಂದ ತಮ್ಮ ವಿದೇಶೀ ಯಾತ್ರೆಯನ್ನು ನೆರವೇರಿಸಿಕೊಂಡು ಬಂದರು. ಮುಸುಗಿನಲ್ಲಿರುವ ದೊಡ್ಡ ಮನುಷ್ಯ ಬ್ಯಾಂಕಿನ ಹತ್ತಿರ ಇತರರ ಹಣವನ್ನು ಅಪಹರಿಸುವುದು ತಮ್ಮ ಗುಂಪಿನವರು ನೋಡಿದರೂ, ಆ ಕಳ್ಳತನ ಮಾಡಿರುವುದು ತಮ್ಮ ದೊಡ್ಡ ಮನುಷ್ಯನೇ ಎಂದು ಅವರಿಗೆ ತಿಳಿದಿಲ್ಲ. ಕಳ್ಳತನ ನಡೆದಾಗ ವಿದೇಶೀ ಯಾತ್ರೆಗೆ ಹೋದ ದೊಡ್ಡ ಮನುಷ್ಯನ ಗುಂಪು ಮನುಷ್ಯರೆಲ್ಲರೂ ಅದನ್ನು ನೋಡಿದರು, ಕಳ್ಳತನ ಮಾಡಿದ ಮನುಷ್ಯನನ್ನು ನೋಡಿದರು. ಆದರೇ ಆ ಮನುಷ್ಯ ಮುಸುಗು ಧರಿಸಿರುವುದರಿಂದ ಆತನು ಯಾರಾಗಿರುವುದು ಗುರುತಿಸುವುದಕ್ಕೆ ಅವಕಾಶವಿಲ್ಲದೇ ಹೋಗಿದೆ.

ಅಲ್ಲಿ ಕಳ್ಳನಾಗಿ ಮುಸುಗು ಹಾಕಿಕೊಂಡ ಮನುಷ್ಯ ಐದು ನಿಮಿಷಗಳಲ್ಲಿ ಕಳ್ಳತನವನ್ನು ಎಷ್ಟೋ ಬುದ್ಧಿವಂತಿಕೆಯಿಂದ ಮಾಡಿರುವನೆಂದು ನೋಡಿರುವ ದೊಡ್ಡ ಮನುಷ್ಯನಿಗೆ ಸಂಬಂಧಿಸಿದ ಮನುಷ್ಯರೇ ಹೇಳುತ್ತಿದ್ದರೂ, ಆ ಕಳ್ಳತನವನ್ನು ಮಾಡಿದವನು ತಮ್ಮ ನಾಯಕನೇ ಎಂದು ಅವರಿಗೆ ತಿಳಿದಿಲ್ಲ. ದೊಡ್ಡಮನುಷ್ಯ ಮುಸುಗು ಧರಿಸಿರುವುದರಿಂದ ತನ್ನ ಮನುಷ್ಯರೇ ಆತನನ್ನು ಗುರುತಿಸಲಾರದೇ ಹೋದರು. ಉಳಿದ ವಿದೇಶೀ ಯಾತ್ರೆ ಎರಡು ತಿಂಗಳು ಕಳೆದುಹೋಯಿತು. ಅವರೆಲ್ಲರೂ ತಿರುಗು ಪ್ರಯಾಣ ಮಾಡಿ ಸ್ವಂತ ದೇಶಕ್ಕೆ, ಸ್ವಂತ ಮನೆಗೆ ಸೇರಿಕೊಂಡಿದ್ದಾರೆ. ಹಾಗೆ ಮನೆಗೆ ಸೇರಿದವರೆಲ್ಲರೂ ಒಂದು ದಿನ ಭೇಟಿಯಾಗಿ ತಮ್ಮ ವಿದೇಶೀ ಯಾತ್ರೆಯನ್ನು ಕುರಿತು ಚರ್ಚೆ ಮಾಡಿಕೊಂಡರು. ಅಲ್ಲಿ ನಡೆದ ಚರ್ಚಾವೇದಿಕೆಯಲ್ಲಿ ದೊಡ್ಡಮನುಷ್ಯನಾಗಿದ್ದ ವ್ಯಕ್ತಿ ತಮ್ಮ ಗುಂಪಿನಲ್ಲಿನ ಯಾರಿಗೂ ಅಲ್ಲಿಯ ವರೆಗು ತಿಳಿಯದ ರಹಸ್ಯವನ್ನು ಹೇಳಿದನು. ಅದೇನೆಂದರೇ!

"ತಮ್ಮ ಗುಂಪಿನಲ್ಲಿ ಒಬ್ಬ ವ್ಯಕ್ತಿಗೆ ನಾನು ಹಣ ಕೊಟ್ಟು ಹುಷಾರಾಗಿ ಇಟ್ಟುಕೋಯೆಂದು ಹೇಳಿದೆನು. ಆದರೂ ಆ ಹಣವನ್ನು ಆ ವ್ಯಕ್ತಿ ಕಳೆದುಕೊಂಡಿದ್ದಾನೆ. ನಂತರ ಆ ಹಣ ಪುನಃ ಸಂಪಾದಿಸಿ ತನ್ನ ಬಳಿ ಹಣ ಹೋದ ವಿಷಯ ಯಾರಿಗೂ ತಿಳಿಯದಹಾಗೆ ಮಾಡಬೇಕೆಂದುಕೊಂಡನು. ತನ್ನ ವಿಷಯ ಹೊರಬೀಳದೆ ಇರುವುದಕ್ಕೆ ಬೇಗನೇ ಹಣ ಸಂಪಾದಿಸಬೇಕೆಂದೂ, ಬೇಗನೆ ಹಣ ಸಂಪಾದಿಸುವುದಕ್ಕೆ ಕಳ್ಳತನ ಒಂದೇ ಮಾರ್ಗವೆಂದು ಯೋಚಿಸಿ, ಆ ವ್ಯಕ್ತಿ ಕಳ್ಳತನ ಮಾಡಿ ಹಣವನ್ನು ಸಂಪಾದಿಸಿ, ನಮ್ಮ ಪ್ರಯಾಣ ಸುಲಭವಾಗಿ ಸಾಗುವಂತೆ ಮಾಡಿದನು. ಆದರೇ ಆ ವ್ಯಕ್ತಿ ಯಾರು? ಎಂಬ ವಿಷಯವು ನನಗೆ ಮಾತ್ರ ಗೊತ್ತಿದೆ. ಆ ವ್ಯಕ್ತಿ ತನ್ನಷ್ಟಕ್ಕೆ ತಾನೇ ಹೊರಗೆ ಬಂದು ನಾನೇ ಈ ಕೆಲಸ ಮಾಡಿದ್ದೇನೆ ಎಂದು ಹೇಳಿದರೇ, ಆತನು ಯಾರಾಗಿರುವುದು ಉಳಿದವರಿಗೆ ಕೂಡಾ ತಿಳಿಯಬಲ್ಲದು" ಎಂದು ದೊಡ್ಡ ಮನುಷ್ಯ ಹೇಳುವುದು ನಡೆಯಿತು. ದೊಡ್ಡಮನುಷ್ಯನ ಮೂಲಕ ಆಗಲೇ ಆ ವಿಷಯವನ್ನು ಕೇಳಿದ ಹತ್ತುಜನ ತಮ್ಮ ಗುಂಪಿನಲ್ಲಿ ಯಾರೋ ಒಬ್ಬನು ಆ ಕೆಲಸ ಮಾಡಿದ್ದಾನೆ ಎಂದು ತಿಳಿದುಕೊಂಡಿದ್ದಾರೆ ಆದರೇ, ಆ ಮನುಷ್ಯ ಯಾರಾಗಿರುವುದು ಯಾರಿಗೂ ತಿಳಿದಿಲ್ಲ.

ದೊಡ್ಡ ಮನುಷ್ಯ ತಮ್ಮ ಸಮಾವೇಶದಲ್ಲಿ ತಮ್ಮ ಗುಂಪಿನಲ್ಲಿ ಒಬ್ಬನು ಹಣವನ್ನು ಕಳೆದುಕೊಳ್ಳುವುದು ಪುನಃ ಕಳ್ಳತನದ ಮೂಲಕ ಸಂಪಾದಿಸುವುದು ನಡೆದಿದೆ ಎಂದು ಹೇಳುತ್ತಿದ್ದರೂ ಅದನ್ನು ಗ್ರಹಿಸಲಾರದೆ ಹೋದರು. ಕಳ್ಳತನ ನಡೆದ ದಿನ ಮುಸುಗು ಧರಿಸಿದ ಮನುಷ್ಯನನ್ನು ಅವರು ನೋಡಿದ್ದರು. ಮುಸುಗು ಮನುಷ್ಯ ಆದಿನ ಕಳ್ಳ ಎಂದು ತಿಳಿದಿದೆ. ಆದರೇ ಆ ಕಳ್ಳ ತಮ್ಮ ಗುಂಪಿನೊಳಗಿನವನು ಎಂದಾಗಲೀ, ತಮ್ಮ ನಾಯಕನೇ ಎಂದಾಗಲೀ ಅವರ್‍ಯಾರಿಗೂ ತಿಳಿದಿಲ್ಲ. ತಮ್ಮ ಗುಂಪಿನಲ್ಲಿ ನಡೆದ ವಿಷಯವು ಎಲ್ಲರಿಗೂ ತಿಳಿದರೂ, ಕಳ್ಳ ತಮ್ಮ ಗುಂಪಿನಲ್ಲಿ ಇದ್ದಾನೆಂದು ತಿಳಿದರೂ, ಇಂಥವನೆಂದು ನಿರ್ಣಯಿಸುವುದಕ್ಕೆ ಅವಕಾಶವಿಲ್ಲ. ಕಳ್ಳತನ ನಡೆದ ದಿನ ಮುಸುಗು ಮನುಷ್ಯನನ್ನು ನೋಡಿದರೂ ಮುಸುಗು ಮನುಷ್ಯ ಇಂಥವನೆಂದು ಹೇಳುವುದಕ್ಕೆ ಸಾಧ್ಯವಿಲ್ಲ.

ಕಳ್ಳತನ ಮಾಡಿದ ಕಳ್ಳ ತಮ್ಮ ಗುಂಪಿನಲ್ಲಿ ಇರುವುದು ನಿಜವೇ ಎಂದು ಎಲ್ಲರಿಗೂ ತಿಳಿದರೂ, ಯಾರಾಗಿರುವುದು ಗುರುತಿಸಲಾರದೆ ಹೋದರು. ಅದೇ ವಿಧವಾಗಿ ಮಾನವ ಗುಂಪಿನೊಳಗೆ ದೇವರು ಕಳ್ಳನಾಗಿ ಬಂದು ಹೋಗಿದ್ದಾನೆ. ದೊಡ್ಡ ಮನುಷ್ಯ ಮುಸುಗು ಧರಿಸಿ ಬಂದು ಕಳ್ಳತನ ಮಾಡಿಹೋದಂತೆ, ದೇವರು ಮಾನವ ಸಮಾಜಕ್ಕೆ ದೊಡ್ಡವನಾಗಿದ್ದು ತನ್ನನ್ನು ಗುರುತು ಹಿಡಿಯದಂತೆ ಶರೀರವೆಂಬ ಮುಸುಗು ಧರಿಸಿ ಕಳ್ಳನಹಾಗೆ ಬಂದು, ತಾನು ಮಾಡಬೇಕಾಗಿರುವುದನ್ನು ಮಾಡಿ ಕಳ್ಳನಹಾಗೆ ಯಾರಿಗೂ ತಿಳಿಯದಂತೆ ಹೋಗಿದ್ದಾನೆ. ದೊಡ್ಡಮನುಷ್ಯ ತಮ್ಮ ವಿದೇಶೀ ಯಾತ್ರೆಯಲ್ಲಿ ಒಬ್ಬ ಕಳ್ಳನಾಗಿ ಬದಲಾಗಿದ್ದಾನೆಂದು ಹೇಳಿದ್ದಾನೆ. ಹಾಗೆಯೇ ದೇವರು ಮನುಷ್ಯನಾಗಿ ಮಾನವ ಸಮಾಜದಲ್ಲಿನ ಮನುಷ್ಯನಾಗಿ ಬಂದಿದ್ದಾನೆಂದು ಹೇಳಿದ್ದಾನೆ. ಗುಂಪಿನಲ್ಲಿ ಕಳ್ಳನಿದ್ದರೂ ಹೇಗೆ ಗುರುತಿಸಲಾರದೆ ಹೋದರೋ, ಹಾಗೆಯೇ ಮಾನವ ಸಮಾಜದಲ್ಲಿ ಕಳ್ಳನಹಾಗೆ ದೇವರಿದ್ದರೂ ಯಾರೂ ಗುರುತಿಸಲಾರದೆ ಹೋಗಿದ್ದಾರೆ. ದೊಡ್ಡಮನುಷ್ಯ ಕಳ್ಳನಹಾಗೆ ಬಂದಾಗ ಮುಸುಗಿನೊಂದಿಗೆ ಬಂದಿರುವುದರಿಂದ ಆತನನ್ನು ಯಾರೂ ಗುರುತಿಸಲಾರದೇ ಹೋಗಿದ್ದಾರೆ. ಹಾಗೆಯೇ ದೇವರು ಭೂಮಿಮೇಲೆ ತನ್ನ ಬೋಧನೆಯನ್ನು ತಿಳಿಸುವುದಕ್ಕೆ ಬಂದಾಗ ಗುರುತಿಸಲ್ಪಡದ ಮನುಷ್ಯ ಎನ್ನುವ ಮಾರುವೇಷದೊಂದಿಗೆ ಬಂದಿರುವುದರಿಂದ ಆತನನ್ನು ಎಲ್ಲರೂ ಮನುಷ್ಯನೇ ಅಂದುಕೊಂಡಿದ್ದಾರೆ ಹೊರತು, ದೇವರು ಎಂದು ಯಾರೂ ಗುರುತು ಹಿಡಿಯಲಿಲ್ಲ. ದೊಡ್ಡಮನುಷ್ಯ ಮುಸುಗಿನೊಂದಿಗೆ ಬಂದಿರುವುದರಿಂದ ಆತನನ್ನು ಗುರುತಿಸಲಾರದೆ ಮುಸುಗಿನ ಮನುಷ್ಯ ಎನ್ನುವಂತೆ, ದೊಡ್ಡ ಮನುಷ್ಯ ಎಂದು ಹೇಳಲಾರದಂತೆ, ದೇವರು ಮನುಷ್ಯ ಎಂಬ ವೇಷದಲ್ಲಿ ಭೂಮಿಮೇಲೆ ಬಂದಿರುವುದರಿಂದ ಆತನನ್ನು ದೇವರಾಗಿ ಯಾರೂ ಗುರುತಿಸಲಾರದೆ ಹೋಗಿದ್ದಾರೆ. ದೊಡ್ಡಮನುಷ್ಯನೇ ತನ್ನ ಸಮಾವೇಶದಲ್ಲಿ ಕಳ್ಳನ ವಿಷಯವನ್ನು ಪ್ರಸ್ತಾಪಿಸಿದಹಾಗೆ, ದೇವರೇ ತನ್ನ ಗ್ರಂಥದಲ್ಲಿ ಅವತಾರವನ್ನು ಕುರಿತು ಪ್ರಸ್ತಾಪಿಸಿದ್ದಾನೆ.

ದೊಡ್ಡಮನುಷ್ಯನೇ ಕಳ್ಳನಾಗಿ ತಯಾರಾಗಿದ್ದಾನೆಂದು ತಿಳಿಯದ ಮನುಷ್ಯರು, ದೇವರೇ ಮನುಷ್ಯನಾಗಿ ಬಂದಿದ್ದಾನೆಂದು ತಿಳಿಯಲಾರದೆ ಹೋಗಿದ್ದಾರೆ. ಎಲ್ಲಾ ವಿದ್ಯೆಗಳು ತಿಳಿದಿರುವವನು ದೊಡ್ಡ ಮನುಷ್ಯನೇ ಎಂದು ತಿಳಿದು, ಕಳ್ಳತನವು ಸಹ ಆತನೇ ಯಾರೂ ಗುರುತಿಸದಂತೆ ಮಾರುವೇಷದಲ್ಲಿ ಮಾಡಿರಬಹುದೆಂದು ಅಂದುಕೊಳ್ಳಲಾರದೆ ಹೋಗಿದ್ದಾರೆ. ಅದೇ ವಿಧವಾಗಿ ಎಲ್ಲ ರಹಸ್ಯಗಳು ದೇವರಿಗೇ ತಿಳಿದಿದೆಯೆಂದು, ದೇವರೇ ಜ್ಞಾನ ತಿಳಿಸುವ ನಿಮಿತ್ತ ಮನುಷ್ಯನಾಗಿ ಯಾರೂ ಗುರುತಿಸದಂತೆ ಬಂದಿರಬಹುದೆಂದು ತಿಳಿಯಲಾರದೆ ಹೋಗಿದ್ದಾರೆ. ದೊಡ್ಡ ಮನುಷ್ಯನನ್ನು ದೊಡ್ಡ ಮನುಷ್ಯನಾಗಿಯೇ ನೋಡಬೇಕೆಂದೂ, ಬೇರೆಯವರೊಂದಿಗೆ ಹೋಲಿಸಬಾರದೆಂಬ ನಿಯಮವನ್ನು ಹಿಡಿದುಕೊಂಡು, ದೊಡ್ಡಮನುಷ್ಯನೇ ಕಳ್ಳನಾಗಿದ್ದಾನೆಂಬ ಸತ್ಯವನ್ನು ಮರೆತುಹೋದಂತೆ, ದೇವರನ್ನು ದೇವರಾಗಿಯೇ ನೋಡಬೇಕು ಕೆಳಗಿನವ ರೊಂದಿಗೆ ಆತನನ್ನು ಹೋಲಿಸಬಾರದೆಂಬ ನಿಯಮವನ್ನು ಇಟ್ಟುಕೊಂಡು, ದೇವರು ಮನುಷ್ಯನಾಗಿದ್ದಾನೆ ಎಂಬ ಸತ್ಯವನ್ನು ಮನುಷ್ಯ ಅಲ್ಲಗಳೆಯುತ್ತಿದ್ದಾನೆ. ದೊಡ್ಡಮನುಷ್ಯನಿಗೆ 64 ಕಲೆಗಳು ಬರುತ್ತವೆಂದು, ಆತನು ಏನಾದರೂ ಮಾಡಬಲ್ಲನೆಂಬ ಸೂತ್ರವನ್ನು ಮರೆತುಹೋಗಿ, ದೊಡ್ಡಮನುಷ್ಯ ಕಳ್ಳತನ ಮಾಡುವುದಿಲ್ಲವೆನ್ನುವಂತೆ, ದೇವರು ಸರ್ವವ್ಯಾಪಿ, ಸರ್ವ ಶಕ್ತಿವಂತನು ಎಂಬ ಜ್ಞಾನವನ್ನು ಮರೆತುಹೋಗಿ, ದೇವರು ಮನುಷ್ಯನಾಗಿ ಜೀವಿಸುವುದಿಲ್ಲ, ಮನುಷ್ಯನಾಗಿ ಕೆಲಸ ಮಾಡುವುದಿಲ್ಲ ಎನ್ನುತ್ತಿದ್ದಾರೆ. ಈ ವಿಧವಾಗಿ ಒಬ್ಬ ದೊಡ್ಡಮನುಷ್ಯನ ವಿಷಯದಲ್ಲಿ ಮನುಷ್ಯರು ಹೇಗೆ ತಪ್ಪು ಮಾಡಿದ್ದಾರೋ ಅದೇ ವಿಧವಾಗಿ ದೇವರ ವಿಷಯದಲ್ಲಿ ಕೂಡಾ ತಪ್ಪು ಮಾಡಿದ್ದೇವೆಂದು ಅರ್ಥ ಮಾಡಿಕೊಳ್ಳಲಾರದೇ ಇದ್ದಾರೆ.

ಪ್ರಥಮ ದೈವಗ್ರಂಥದಲ್ಲಿ ಜ್ಞಾನಯೋಗದಲ್ಲಿ ಆರನೆಯ ಶ್ಲೋಕದಲ್ಲಿ, ರಾಜವಿದ್ಯಾ ರಾಜಗುಹ್ಯಾ ಯೋಗದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿ ದೇವರು ಮನುಷ್ಯನಾಗಿ ಅವತರಿಸುತ್ತಾನೆಂದು ಇದೆ. ಹಾಗೆಯೇ ದ್ವಿತೀಯ ದೈವಗ್ರಂಥದಲ್ಲಿ ಬೈಬಲ್‌ನಲ್ಲಿ ಕೂಡಾ ದೇವರು ಆದರಣಕರ್ತನಾಗಿ ಅವತರಿಸುತ್ತಾ ನೆಂದು

ಯೋಹಾನ್ ಸುವಾರ್ತೆ 14, 15, 16 ಅಧ್ಯಾಯಗಳಲ್ಲಿ ಹೇಳಿರುವುದಾಗಿದೆ. ಹಾಗೆಯೇ ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಕೂಡಾ 89ನೇ ಸೂರಾ, 22ನೇ ಆಯತ್‌ನಲ್ಲಿ, 15ನೇ ಸೂರಾ, 29ನೇ ಆಯತ್‌ನಲ್ಲಿ ದೇವರು ಅವತರಿಸುತ್ತಾನೆಂದು ಬರೆಯಲ್ಪಟ್ಟಿದ್ದರೂ, ಮನುಷ್ಯರು ಆ ವಿಷಯವನ್ನು ಓದಿ ಕೂಡಾ ದೇವರು ಹುಟ್ಟುವುದಿಲ್ಲವೆಂದು ಅಜ್ಞಾನವಾದನೆಯನ್ನು ಪ್ರೇರೇಪಿಸುತ್ತಿದ್ದಾರೆ. ಯಾರು ಹೇಗೆ ಹೇಳಿಕೊಂಡರೂ ದೇವರು ತನ್ನ ಗ್ರಂಥಗಳಲ್ಲಿ ಹೇಳಿದಂತೆ, ದೇವರು ಮನುಷ್ಯನಾಗಿ ಹುಟ್ಟಿ ತನ್ನ ಜ್ಞಾನವನ್ನು ಮನುಷ್ಯರಿಗೆ ಬೋಧಿಸುತ್ತಿದ್ದಾನೆ. ದೇವರು ಮನುಷ್ಯನಾಗಿ ಬಂದು ಜ್ಞಾನಹೇಳದೆ ಹೋದರೇ ಭೂಮಿಮೇಲೆ ಜ್ಞಾನವು ತಿಳಿಯುತ್ತಲೇ ಇರುತ್ತಿರಲಿಲ್ಲ ಎಂದೆನಿಸುತ್ತದೆ. ದೇವರು ಮನುಷ್ಯನಾಗಿ ಹುಟ್ಟಿದಾಗ ಆ ಮನುಷ್ಯನಿಗೆ ಯಾವುದೋ ಒಂದು ಹೆಸರು ಇರುತ್ತದೆ, ಆಕಾರವಿರುತ್ತದೆ. ಹಾಗೆ ದೇವರು ಮನುಷ್ಯನ ರೂಪವೆಂಬ ಮಾರುವೇಷದಲ್ಲಿ ಬಂದಾಗ ಹೊಂದಿರುವ ರೂಪವನ್ನು ದೇವರ ಪ್ರತಿರೂಪವೆಂದು ಅರ್ಥಬರುವಂತೆ 'ದೇವರ ಪ್ರತಿಮೆ' ಎಂದು ಆ ರೂಪವನ್ನು ಕರೆಯುತ್ತಿದ್ದೇವೆ. ದೇವರು ಮನುಷ್ಯನ ಆಕಾರದಲ್ಲಿ ಬಂದಾಗ, ಸಜೀವವಾದ ಶರೀರದೊಂದಿಗೆ ಇರುವಾಗ ಆತನನ್ನು 'ಭಗವಂತನು" ಎಂದು ಅನ್ನುತ್ತಿದ್ದೇವೆ. ದೇವರು ನಿರಾಕಾರವಾಗಿ ಕಾಣಿಸದೆ ಸೂಕ್ಷ್ಮವಾಗಿದ್ದರೇ ಆತನನ್ನು ದೇವರೇ ಅನ್ನಬೇಕು. ದೇವರು ಸಾಕಾರನಾಗಿ ಸ್ಥೂಲವಾಗಿ ಕಾಣಿಸುವವನಾಗಿದ್ದರೇ ಆತನನ್ನು ಭಗವಂತನೆಂದು ಹೇಳಬಹುದು. ನಿರಾಕಾರನಾದ ದೇವರು ಸಾಕಾರನಾಗಿ ಬದಲಾದರೇ ಭಗವಂತನೆಂದು ಹೇಳಬೇಕು. ದೇವರು ಒಂದು ಸಲ ಸಾಕಾರ ರೂಪವಿರುವ ಮನುಷ್ಯನಾಗಿ ಬಂದರೇ, ಆ ರೂಪವೇ ಪ್ರತಿಮೆಯಾಗಿ ಬದಲಾಗಿಹೋಗುವುದು. ದೇವರ ಪ್ರತಿರೂಪವನ್ನು ಗ್ರಹಿಸಿ 'ಪ್ರತಿಮೆ' ಎಂದು ಹೇಳಬೇಕು. ಈ ವಿಧವಾಗಿ ಪ್ರತಿಮೆ ಪ್ರತ್ಯೇಕತೆಯನ್ನು ಸಂಪಾದಿಸಿಕೊಂಡಿದೆ.

ದೇವರು ಅಲ್ಲದೇ ಜೀವಿಯಾಗಿ ಹುಟ್ಟುತ್ತಿರುವ ಪ್ರತಿಯೊಬ್ಬರು, ಅಕಾಲ ಮರಣದಲ್ಲಿ ಸತ್ತುಹೋದರೇ ಸೂಕ್ಷ್ಮಗ್ರಹವಾಗಿ ಉಳಿದು ಹೋಗುತ್ತಾರೆ.

ಹಾಗಲ್ಲದೇ ದೇವತೆಗಳ ಜಾತಿಯಲ್ಲೇ ಹುಟ್ಟಿದರೇ ವಿಗ್ರಹವಾಗಿ ಇರುತ್ತಾರೆ. ಸಾಧಾರಣ ಜೀವಿಗಳು ಮನುಷ್ಯರಾದರೆ ಗ್ರಹಗಳು ಎಂದು ಕರೆಯಲ್ಪಡುತ್ತಾರೆ. ದೇವತೆಗಳಾದರೇ ವಿಗ್ರಹಗಳಾಗಿ ಕರೆಯಲ್ಪಡುತ್ತಾರೆ. ಇವರೆಲ್ಲರಿಗಿಂತಲೂ ಬೇರೆಯಾಗಿ ದೇವರ ಜನ್ಮ ಇರುವುದರಿಂದ, ಆತನು ಧರಿಸಿರುವ ಆಕಾರವನ್ನು ಪ್ರತಿಮೆ ಎನ್ನುತ್ತೇವೆ. ಪ್ರತಿಮೆಗು, ವಿಗ್ರಹಕ್ಕು, ಗ್ರಹಕ್ಕು ಇಷ್ಟು ವ್ಯತ್ಯಾಸ ಇರುವಂತೆ ಬಹಳಜನರಿಗೆ ತಿಳಿದಿಲ್ಲ. ಕೆಲವು ಮತದವರಿಗೆ ದೇವರೆಂಬ ವಿಷಯವು ತಿಳಿದಿದೆ ಆದರೇ ದೇವರ ಜ್ಞಾನ ಸ್ವಲ್ಪವಾದರೂ ತಿಳಿದಿಲ್ಲ. ದೇವರ ಜ್ಞಾನ ತಿಳಿಯದವರಿಗೆ ದೇವರು ಎಲ್ಲರಿಗಿಂತಲೂ ಶ್ರೇಷ್ಠನು, ದೇವರು ಹುಟ್ಟುವುದಿಲ್ಲ, ಮನುಷ್ಯನಿಗೆ ಕೂಡಾ ಪುನರ್ಜನ್ಮಗಳಿಲ್ಲ, ದೇವರು ಸತ್ತುಹೋದವರೆಲ್ಲರನ್ನೂ ಪ್ರಳಯದಲ್ಲಿ ಎಬ್ಬಿಸುತ್ತಾನೆ ಎಂಬ ಈ ನಾಲಕ್ಕು ವಿಷಯಗಳನ್ನು ಮಾತ್ರವೇ ಹೇಳುತ್ತಿರುತ್ತಾರೆ. ಅಷ್ಟು ಬಿಟ್ಟು ಅವುಗಳ ವಿವರ ಅವರಿಗೆ ಸ್ವಲ್ಪವಾದರೂ ತಿಳಿದಿಲ್ಲ. ದೇವರು ಹುಟ್ಟುವುದಿಲ್ಲವೆಂದು ತಿಳಿದಿದೆ, ಯಾಕೆ ಹುಟ್ಟುವುದಿಲ್ಲ? ಎಂದು ತಿಳಿದಿಲ್ಲ. ಮನುಷ್ಯನಿಗೆ ಪುನರ್ಜನ್ಮಗಳಿಲ್ಲ ಎಂದು ಹೇಳುತ್ತಿದ್ದಾರೆ. ಆದರೇ ಎರಡನೆಯ ಜನ್ಮದಲ್ಲಿ ಮೊದಲ ಜನ್ಮ ಜ್ಞಾಪಕಗಳು ಹೇಳುವವರಿದ್ದರೂ, ಅವರು ಎಲ್ಲಿಂದ ಬಂದಿದ್ದಾರೆಂಬ ವಿಷಯವು ತಿಳಿದಿಲ್ಲ. ಹೀಗೆ ತಾವು ಕೇಳಿರುವುದು ಹೇಳುವುದೇ ಹೊರತು, ಅವರು ಕೇಳಿಸಿಕೊಂಡಿರುವುದು ತಪ್ಪೋ, ಒಪ್ಪೋ ಎಂದು ಆಲೋಚಿಸುವ ವಿಚಕ್ಷಣ ಇಲ್ಲದವರಾಗಿ ಇದ್ದಾರೆ.

**ಅವರ ಪ್ರಶ್ನೆ:– ನೀವು ಹೇಳುವುದು ಸಂಪೂರ್ಣವಾಗಿ ಪರಿಶೀಲಿಸಿದರೇ ವಿಗ್ರಹ ಬೇರೆ, ಪ್ರತಿಮೆ ಬೇರೆಯೆಂದು, ಪ್ರತಿಮೆ ಭಗವಂತನ ಚಿಹ್ನೆಯೆಂದು, ಗ್ರಹ ಮಾನವ ಸಾರಾಂಶವೆಂದು, ವಿಗ್ರಹ ದೇವತೆಗಳ ಮಾರುರೂಪವೆಂದು ತಿಳಿಯುತ್ತಿದೆ. ದೇವರು ಮನುಷ್ಯನಾಗಿ ಬಂದಾಗ ಮಾತ್ರವೇ ಆ ರೂಪವನ್ನು ಪ್ರತಿಮೆಯಾಗಿ ಹೇಳಬಹುದು. ಮನುಷ್ಯ ಅರ್ಥ ಸತ್ತರೇ ಗ್ರಹವಾಗಿ ಇರುತ್ತಾನೆ. ದೇವತೆಗಳು ಬದುಕಿದರೆ ವಿಗ್ರಹಗಳಾಗಿ ಇರುತ್ತಾರೆ ಎಂದು ಅರ್ಥವಾಗಿದೆ. ದೇವರ ಅವತಾರವನ್ನು ಭಗವಂತನೆಂದು, ಭಗವಂತನ ರೂಪವನ್ನು ಪ್ರತಿಮೆ ಎಂದು ಕರೆಯುತ್ತಿದ್ದಾರೆ. ಪ್ರತಿಮೆಯನ್ನು ದೇವರೆಂದು ಕರೆಯಬಹುದಾ?**

**ನಮ್ಮ ಉತ್ತರ:-** ದೇವರು ಹುಟ್ಟಿದರೇ ಭಗವಂತನಾಗುತ್ತಾನೆ. ಭಗವಂತನ ರೂಪ ಪ್ರತಿಮೆ ಆಗುವುದು. ದೇವರು, ಭಗವಂತ, ಪ್ರತಿಮೆ ಎಂಬ ವರಸೆ ಕ್ರಮದಲ್ಲಿ ದೇವರಿಂದ ಪ್ರತಿಮೆ ಮೂರನೆಯದಾಗುವುದು. ಆದ್ದರಿಂದ ಪದ್ಧತಿ ಪ್ರಕಾರ ಪ್ರತಿಮೆಯನ್ನು ಭಗವಂತನೆಂದು ಹೇಳಬಹುದು ಆದರೇ ದೇವರೆಂದು ಹೇಳಬಾರದು. ದೇವರು ಎಂದರೇ ಕಾಣಿಸದವನು, ದೇವರಿಗೆ ರೂಪವೇ ಇಲ್ಲ. ಹಾಗಾದರೇ ರೂಪವಿರುವ ಪ್ರತಿಮೆಯನ್ನು ದೇವರು ಎಂದು ಕರೆಯುವುದು ಎಷ್ಟುಮಾತ್ರ ಸಮಂಜಸವಲ್ಲ. ಆಧ್ಯಾತ್ಮಿಕ ಕಾನೂನಿಗೆ ವಿರುದ್ಧವಾಗುವುದು. ಆದರೇ ಬಹಳ ಸಂದರ್ಭಗಳಲ್ಲಿ ಪ್ರತಿಮೆಯನ್ನು ತೋರಿಸಿ ದೇವರಿಗೆ ನಮಸ್ಕರಿಸಿಕೊಳ್ಳಿರೆಂದು ಹೇಳುವುದು ನಡೆಯುತ್ತಿದೆ. ಬಹಳ ಸಂದರ್ಭಗಳಲ್ಲಿ ಜ್ಞಾನಿಗಳು ಸಹಿತ ಪ್ರತಿಮೆಯನ್ನು ದೇವರೆಂದೇ ಲೆಕ್ಕಿಸಿ ಹೇಳುವುದು ನಡೆಯುತ್ತಿದೆ. ಪ್ರತಿಮೆಯನ್ನು ದೇವರೆನ್ನುವುದು ತಪ್ಪೆಂದು ತಿಳಿದರೂ ಕೆಲವು ಸಂದರ್ಭಗಳಲ್ಲಿ ಹಾಗೆಯೇ ಹೇಳಬೇಕಾಗಿ ಬರುತ್ತದೆ. ಅದು ಪ್ರತಿಮೆ ಮೇಲೆ ಗೌರವದಿಂದ ಅಲ್ಲದಿದ್ದರೂ, ದೇವರ ಗೌರವಾರ್ಥವಾಗಿ ಹಾಗೆ ಹೇಳಬೇಕಾಗಿರುತ್ತದೆ. ಅಷ್ಟೇ ಹೊರತು ಅದೇ ಕೆಲಸವಾಗಿ ಪ್ರತಿಮೆಯನ್ನು ದೇವರೆಂದು ಕರೆಯಬಾರದು.

**ಅವರ ಪ್ರಶ್ನೆ:- ಪ್ರತಿಮೆ ಭಗವಂತನ ಆಕಾರವೆಂದು ಹೇಳಿದ್ದೀರ. ವಿಗ್ರಹ ದೇವತೆಗಳ ಗ್ರಹಿಸುವ ಶಕ್ತಿ ಎಂದಿದ್ದೀರ. ಅದು ಗ್ರಹಿಸುವ ಶಕ್ತಿ ಹೆಸರು ವಿಗ್ರಹ ಆದರೂ ದೇವತೆಯನ್ನು ವಿಗ್ರಹ ಎಂದು ಹೇಳುತ್ತಿದ್ದೇವೆ. ಬದುಕಿರುವ ದೇವತೆ ವಿಗ್ರಹವಾದರೇ, ಬದುಕಿರುವ ಅಥವಾ ಬದುಕಿಹೋಗಿರುವ ಭಗವಂತನ ಆಕಾರವನ್ನು ಪ್ರತಿಮೆ ಎನ್ನುತ್ತಿದ್ದೇವೆ. ಆದರೇ ನೀವು ಪ್ರತಿಮೆಗೆ ಪೂರ್ತಿ ವಿರುದ್ಧವಾದುದು ವಿಗ್ರಹ ಎಂದು ಅರ್ಥವಾಗುವಂತೆ ಪ್ರತಿಮೆ x ವಿಗ್ರಹ ಎಂದು ಬರೆದಿದ್ದೀರ. ಪ್ರತಿಮೆಗು ವಿಗ್ರಹಕ್ಕು ಶತ್ರುತ್ವವಿದೆಯಾ? ಎಂದು ಕೆಲವರು ಕೇಳುತ್ತಿದ್ದಾರೆ. ಇದಕ್ಕೆ ನೀವೇನು ಹೇಳುತ್ತೀರ?**

**ನಮ್ಮ ಉತ್ತರ:-** ಅಂತಹ ಶತ್ರುತ್ವವನ್ನು ಕುರಿತು ಆ ಗುರುತನ್ನು ಇಡಲಿಲ್ಲ. ಪ್ರತಿಮೆಗೆ ಪೂರ್ತಿ ವಿಭಿನ್ನವಾಗಿ ವಿಗ್ರಹಗಳಿರುತ್ತವೆಂಬ ಉದ್ದೇಶದಿಂದ ಹಾಗೆ

ಪ್ರತಿಮೆ x ವಿಗ್ರಹ ಎಂದು ಬರೆಯಬೇಕಾಗಿ ಬಂದಿದೆ. ಇಂದಿನ ಕಾಲದಲ್ಲಿ ಒಂದು ಆಕಾರವನ್ನು ನೋಡಿದರೇ ಸಾಕು ಅದನ್ನು ವಿಗ್ರಹ ಎನ್ನುತ್ತಿದ್ದಾರೆ. ಅರ್ಥದ ಪ್ರಕಾರ ಅದರ ಭಾವವು ಬೇರೆಯಾದರೂ ಇವರ ಅಭ್ಯಾಸದ ಪ್ರಕಾರ ರೂಪವಿರುವುದನ್ನೆಲ್ಲವನ್ನೂ ವಿಗ್ರಹ ಎನ್ನುತ್ತಿದ್ದಾರೆ. ರೂಪಗಳಲ್ಲಿ ವಿಗ್ರಹ ಬೇರೆ, ಪ್ರತಿಮೆ ಬೇರೆಯೆಂಬ ವಿಷಯವು ಕೂಡಾ ತಿಳಿದಿಲ್ಲ. ಅಂಥವರಿಗೆ ಅದು ಬೇರೆ ಇದು ಬೇರೆ ಎಂದು ಅರ್ಥವಾಗುವಂತೆ ಪ್ರತಿಮೆ x ವಿಗ್ರಹ ಎಂದು ಬರೆಯಬೇಕಾಗಿಬಂದಿದೆ. ಅಷ್ಟೇ ಹೊರತು ಬೇರೆ ವಿಧವಾಗಿ ಅಂದುಕೊಳ್ಳ ಬಾರದೆಂದು, ಅದು ಶತ್ರುತ್ವಕ್ಕೆ ಗುರುತಲ್ಲವೆಂದು ತಿಳಿಸುತ್ತಿದ್ದೇವೆ.

**ಅವರ ಪ್ರಶ್ನೆ:– ದೈವ x ದೆವ್ವ ಎಂದು ಬರೆದಿದ್ದೀರ ಅಲ್ಲವೇ! ಇದನ್ನು ಕುರಿತು ಏನೆಂದುಕೊಳ್ಳಬೇಕು?**

**ನಮ್ಮ ಉತ್ತರ:–** ಇಲ್ಲಿ ಕೂಡಾ ವಿರುದ್ಧ ಭಾವವನ್ನು ಕುರಿತು ಅಂದುಕೊಳ್ಳಬಾರದು. ದೈವಕ್ಕೆ ವಿಭಿನ್ನವಾಗಿ ದೆವ್ವವಿರುತ್ತದೆ ಎಂದು ತಿಳಿಸುವ ನಿಮಿತ್ತ ಹಾಗೆ ಬರೆಯಬೇಕಾಗಿ ಬಂದಿದೆ. ದೈವ ಎಂದರೇ ಅಣುಅಣುವೂ ಸರ್ವ ಪ್ರಪಂಚವು ವ್ಯಾಪಿಸಿರುವ ದೇವರಾಗುತ್ತದೆ. ದೆವ್ವ ಎಂದರೇ ಒಬ್ಬ ಮನುಷ್ಯ ಅಕಾಲ ಮರಣದೊಂದಿಗೆ ಸತ್ತುಹೋದರೇ ಆತನ ಕಾಣಿಸದ ಸೂಕ್ಷ್ಮ ಶರೀರವನ್ನು ದೆವ್ವ ಎಂದು ಕರೆಯುತ್ತಿದ್ದೇವೆ. ದೇವರು ಕಾಣಿಸುವುದಿಲ್ಲ ದೆವ್ವ ಕಾಣಿಸುವುದಿಲ್ಲ. ಆದರೇ ದೇವರು ಸರ್ವ ಪ್ರಪಂಚವೂ ವ್ಯಾಪಿಸಿದ್ದರೇ, ದೆವ್ವವಾಗಿರುವವನು ಎಲ್ಲಿದ್ದರೂ ಅವನು ಅಲ್ಲೇ ಒಂದು ಕಡೆ ಮಾತ್ರವೇ ಇರುತ್ತಾನೆ. ದೆವ್ವವೆಂಬ ಹೆಸರಿನಿಂದಿದ್ದರೂ ಆತನು ಕಾಣಿಸದ ಸಾಧಾರಣ ಮನುಷ್ಯನಾಗಿಯೇ ಇರುತ್ತಾನೆ. ಸ್ಥೂಲ ಶರೀರ ಇಲ್ಲದೇಹೋಗಿ ಸೂಕ್ಷ್ಮಶರೀರ ಇರುವುದರಿಂದ, ಅಕಾಲ ಮರಣ ಹೊಂದಿರುವವನು ಎರಡನೆಯ ಜನ್ಮಕ್ಕೆ ಹೋಗದೇ ಭೂಮಿಮೇಲೆಯೇ ಬದುಕಬೇಕಾಗಿರುತ್ತದೆ. ಹಾಗೆ ಮನುಷ್ಯರ ಲೆಕ್ಕದಲ್ಲಿ ಸತ್ತುಹೋಗಿ ಸೂಕ್ಷ್ಮ ಶರೀರದೊಂದಿಗೆ ಯಾರಿಗೂ ತಿಳಿಯದಂತೆ ಬದುಕಿರುವವರನ್ನು ದೆವ್ವ ಎನ್ನುತ್ತಿದ್ದೇವೆ. ದೈವ ಎಂಬ ಪದಕ್ಕೆ ಹತ್ತಿರವಾಗಿ ಇರುವಂತೆ ದೆವ್ವ ಎಂಬ

ಪದವನ್ನು ಸೂಕ್ಷ್ಮವಾಗಿ ಬದುಕಿರುವ ಮನುಷ್ಯನ ಮೇಲೆ ಉಪಯೋಗಿಸಿದ್ದಾರೆ. ಹಾಗೆ ಉಪಯೋಗಿಸುವುದಕ್ಕೆ ಕಾರಣವಿದೆ. ಅದೇನೆಂದರೇ! ದೈವವೆಂದರೇ ಕಾಣಿಸದೆ ಎಲ್ಲೆಡೆ ಇರುವುದೆಂದು ಅರ್ಥ. 'ದೈವ' ಎಂದರೇ ಕಾಣಿಸದೆ ಎಲ್ಲೆಡೆ ಇರುವುದು ದೇವರೇ ಆಗುವನು. 'ದೈ' ಎಂದರೇ 'ಕಾಣಿಸದಿರುವುದು' ಎಂದು ಅರ್ಥ. 'ವ' ಎಂದರೇ ವ್ಯಾಪಿಸಿರುವುದೆಂದು ಅರ್ಥ. ಇದನ್ನನುಸರಿಸಿ 'ದೈವ' ಎಂದರೇ ಕಾಣಿಸದೆ ಎಲ್ಲೆಡೆ ವ್ಯಾಪಿಸಿರುವುದೆಂದು ತಿಳಿಯುತ್ತಿದೆ. ಹಾಗೆಯೇ ದೆವ್ವ ಎಂಬ ಎರಡು ಅಕ್ಷರಗಳಲ್ಲಿ 'ದೆ' ಎಂದರೇ ಕಾಣಿಸದಿರುವುದೆಂದು ಅರ್ಥವಾದರೇ, 'ವ್ವ' ವ್ಯಾಪಿಸದಿರುವುದು ಎಂದು ಅರ್ಥ. ವ್ಯಾಪಿಸದಿರುವುದು ಎಂದರೇ ಒಂದುಕಡೆ ಇರುವುದೆಂದು ಅರ್ಥ. ಇದನ್ನನುಸರಿಸಿ ದೆವ್ವ ಎಂದರೇ ಕಾಣಿಸದೆ ಒಂದುಕಡೆ ಇರುವುದೆಂದು ತಿಳಿಯುತ್ತದೆ. ಕಾಣಿಸದೆ ಎಲ್ಲೆಡೆ ವ್ಯಾಪಿಸಿರುವವನು ದೇವರಾಗಿರುವಾಗ, ಕಾಣಿಸದೆ ಒಂದುಕಡೆ ಇರುವವನು ಸತ್ತುಹೋದ ಮನುಷ್ಯ ಎಂದು ಅರ್ಥವಾಗುತ್ತಿದೆ. ಈ ವಿಧವಾಗಿ ದೈವಕ್ಕು, ದೆವ್ವಕ್ಕು ಇರುವ ವಿಭಿನ್ನಭಾವವನ್ನು ತಿಳಿಸುವ ನಿಮಿತ್ತ ದೈವ x ದೆವ್ವ ಎಂದು ಬರೆದಿದ್ದೇವೆ.

**ಅವರ ಪ್ರಶ್ನೆ:- ಮನುಷ್ಯನ ಶರೀರದಲ್ಲಿ ಗ್ರಹಿಸಿಕೊಳ್ಳುವ ಬುದ್ಧಿ ಇರುವುದರಿಂದ ಗ್ರಹವೆಂದು ಹೇಳುತ್ತಿದ್ದೇವೆ ಎಂದು ನೀವು ಹೇಳಿರುವುದನ್ನು ಅನುಸರಿಸಿ ತಿಳಿದಿದೆ. ಈ ವಿಷಯವನ್ನು ಹೇಳಿದಾಗ ಮನುಷ್ಯ ಬದುಕಿದ್ದರೂ, ಅಕಾಲ ಮರಣದೊಂದಿಗೆ ಸತ್ತುಹೋದರೂ ಆತನಲ್ಲಿ ಗ್ರಹಿಸಿಕೊಳ್ಳುವ ಶಕ್ತಿ ಇರುವುದರಿಂದ ಮನುಷ್ಯನನ್ನು ಗ್ರಹ ಎನ್ನುತ್ತಿದ್ದೇವೆ ಎಂದು, ದೇವತೆಗಳಲ್ಲಿ ಗ್ರಹಿಸಿಕೊಳ್ಳುವ ಶಕ್ತಿ ಸ್ವಲ್ಪ ವಿಶೇಷವಾಗಿ ಇರುತ್ತದೆ ಆದಕಾರಣ ದೇವತೆಗಳನ್ನು ವಿಗ್ರಹ ಎಂದು ಕರೆಯುತ್ತಿದ್ದೇವೆ ಎಂದು ಹೇಳಿದ್ದೀರ. ಮನುಷ್ಯ ಬದುಕಿದ್ದರೂ, ಸತ್ತುಹೋದರೂ 'ಗ್ರಹ' ಎಂದೇ ಹೇಳಬಹುದು. ದೇವತೆ ಕೂಡಾ ಬದುಕಿದರೂ, ಸತ್ತುಹೋದರೂ 'ವಿಗ್ರಹ' ಎಂದೇ ಹೇಳಬಹುದು. ಇಲ್ಲಿಯವರೆಗು ಪ್ರತಿಮೆಗು, ವಿಗ್ರಹಕ್ಕು ಇರುವ ವ್ಯತ್ಯಾಸವನ್ನು ವಿವರಿಸಿದ್ದೀರ. ಹಾಗೆಯೇ ದೈವಕ್ಕು ದೆವ್ವಕ್ಕು ಇರುವ ವ್ಯತ್ಯಾಸವನ್ನು ವಿವರಿಸಿ ಹೇಳಿದ್ದೀರ. ಅವರ ವ್ಯತ್ಯಾಸವನ್ನು ಕೇಳಿದ ನಂತರ ಗ್ರಹಕ್ಕಿಂತಲೂ ವಿಗ್ರಹ ಎಂಬ**

**ಹೆಸರಿನಲ್ಲಿ ವಿಶೇಷತೆ ಏನಿದೆಯೋ, ಮನುಷ್ಯನನ್ನು ಗ್ರಹ ಎಂದು ದೇವತೆಗಳನ್ನು ವಿಗ್ರಹ ಎಂದು ಏಕೆ ಕರೆಯುತ್ತಿದ್ದಾರೋ ತಿಳಿಸಿರೆಂದು ಕೇಳುತ್ತಿದ್ದೇನೆ.**

**ನಮ್ಮ ಉತ್ತರ:–** ಮನುಷ್ಯ ಸ್ಥೂಲವಾಗಿ ಬದುಕಿರುವಾಗ 'ಗ್ರಹ' ಎನಿಸಿಕೊಂಡರೂ, ಸೂಕ್ಷ್ಮವಾಗಿ ಬದುಕಿರುವಾಗ 'ದೆವ್ವ' ಎಂದು ಕರೆಯಲ್ಪಡುತ್ತಿದ್ದಾನೆ. ದೇವತಾ ಜನ್ಮ ಪಡೆದವರು ಬದುಕಿರುವಾಗ 'ವಿಗ್ರಹ' ಎಂದು ಕರೆಯಲ್ಪಟ್ಟಹಾಗೆ, ಅರ್ಧಸತ್ತುಹೋಗಿ ಸೂಕ್ಷ್ಮವಾಗಿರುವಾಗ ಕೂಡಾ 'ವಿಗ್ರಹ' ಎಂದೇ ಕರೆಯಲ್ಪಡುತ್ತಿದ್ದಾರೆ. ಮನುಷ್ಯರಿಗಿರುವಂತೇ ಸಾವು, ಹುಟ್ಟುಗಳು ದೇವತೆಗಳಿಗೂ ಸಹ ಇವೆಯೆಂದು ಮೊದಲೇ ಹೇಳಿದ್ದೇವೆ. ಈಗ ಮುಖ್ಯವಾಗಿ ತಿಳಿಯಬೇಕಾಗಿರುವ ವಿಷಯವೇನೆಂದರೇ! ಮನುಷ್ಯ ಬದುಕಿರುವಾಗ ಸ್ಥೂಲ ಶರೀರದಲ್ಲಿ ಸೂಕ್ಷ್ಮ ಶರೀರದೊಂದಿಗೆ ಬೆರೆತಿರುತ್ತಾನೆ. ಸ್ಥೂಲ ಶರೀರವು ಹತ್ತು (10) ಭಾಗಗಳಾಗಿರುವಾಗ, ಸೂಕ್ಷ್ಮ ಶರೀರವು ಹದಿನೈದು (15) ಭಾಗಗಳಾಗಿ ಇದೆ. ಮನುಷ್ಯ ಕಾಲ ಮರಣ ಹೊಂದಿದರೇ ಶರೀರದಲ್ಲಿನ ಜೀವಿಯು (ಜೀವಾತ್ಮ) ಶರೀರವನ್ನು ಪೂರ್ತಿ ಬಿಟ್ಟುಹೋಗುವುದು. ಅಂದರೇ ಇಪ್ಪತ್ತೈದು (25) ಭಾಗಗಳಾಗಿರುವ ಶರೀರವನ್ನು ಬಿಟ್ಟುಹೋಗುವುದು. ಒಂದುವೇಳೆ ಅಕಾಲ ಮರಣವೇ ಸಂಭವಿಸಿದರೇ ಕಾಲಮರಣ ಬರುವವರೆಗು ಆ ಜೀವಿಯು ಸೂಕ್ಷ್ಮ ಶರೀರವಾದ 15 ಭಾಗಗಳಲ್ಲಿ ಇರಬೇಕಾಗಿದೆ. ಇದು ಮನುಷ್ಯನಿಗೆ ಸಂಬಂಧಿಸಿದ ವಿಷಯವಾದರೇ, ದೇವತಾ ಜನ್ಮ ಹೊಂದಿ ಕೂಡಾ ಜೀವಿಯೇ ಆದರೂ ಅವನಿಗೆ ಸ್ಥೂಲ, ಸೂಕ್ಷ್ಮ ಎಂಬ ಎರಡು ಭಾಗಗಳ ಶರೀರವು ಮನುಷ್ಯನಿಗಿರುವಹಾಗೆ ಇಲ್ಲ. ಒಂದು ವಿಧವಾಗಿ ಒಂದು ಕಲ್ಲಿನ ಗೊಂಬೆ ಆಕಾರವೇ ಒಂದು ದೇವತೆಗೆ ಸ್ಥೂಲ ದೇಹವಾಗಿದೆಯೆಂದು ಹೇಳಬಹುದು. ಆದರೇ ಮನುಷ್ಯನ ಶರೀರದಂತೆ ಅದು ಬೆಳೆಯುವುದಲ್ಲ, ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯ ಎಂಬ ದಶೆಗಳು ಬದಲಾಗುವುದಿಲ್ಲ. ಕಲ್ಲಿನ ಶರೀರವು ಎಂದಿಗೂ ಒಂದೇ ವಿಧವಾಗಿ ಇರುವುದು ಎಲ್ಲರಿಗೂ ತಿಳಿದಿರುವ ವಿಷಯವೇ.

ಮನುಷ್ಯ ಶರೀರದಲ್ಲಿನ ಜೀವಿಯು ಒಂದುಬಾರಿ ಶರೀರವನ್ನು ಬಿಟ್ಟು ಹೊರಗೆ ಬಂದರೇ ಪುನಃ ಆ ಶರೀರದೊಳಗೆ ಹೋಗಲು ಸಾಧ್ಯವಾಗುವುದಿಲ್ಲ. ಮನುಷ್ಯ ಶರೀರದಲ್ಲಿನ ಜೀವಿಯು ಕಾಲಮರಣದಲ್ಲಾಗಲೀ, ಅಕಾಲ ಮರಣದಲ್ಲಾಗಲೀ ಸ್ಥೂಲ ಶರೀರವನ್ನು ಬಿಟ್ಟು ಹೊರಗೆ ಬರುವುದು ನಡೆಯುತ್ತದೆ. ಹಾಗೆ ಕಾಲ ಮರಣದಲ್ಲಿ ಬಂದರೇ ಆ ಜೀವಿಯು ಆ ಕ್ಷಣವೇ ಮರು ಜನ್ಮಕ್ಕೆ ಹೋಗುವನು. ಆದಕಾರಣ ಶರೀರದೊಳಗೆ ಸೇರುವ ಅವಕಾಶವೇ ಇರುವುದಿಲ್ಲ. ಒಂದುವೇಳೆ ಅಕಾಲ ಮರಣ ಹೊಂದಿದವನು ಸೂಕ್ಷ್ಮ ಶರೀರದೊಂದಿಗೆ ಆಯಸ್ಸು ಇರುವವರೆಗು ಜೀವಿಸಬೇಕಾಗಿರುತ್ತದೆ. ಅಂಥವನು ಅಕಾಲ ಮರಣದೊಂದಿಗೆ ಸತ್ತುಹೋಗಿ ಸ್ಥೂಲ ಶರೀರವನ್ನು ಬಿಟ್ಟು ಹೊರಗೆ ಬಂದಿರುತ್ತಾನೆ. ಆ ವಿಧವಾಗಿ ಬಂದಿರುವವನು ಸೂಕ್ಷ್ಮ ಶರೀರದೊಂದಿಗೆ ತನ್ನ ಸ್ಥೂಲ ಶರೀರದ ಪಕ್ಕದಲ್ಲಿಯೇ ಕುಳಿತುಕೊಂಡು ನೋಡುತ್ತಿರುತ್ತಾನೆ. ತನ್ನ ಬಂಧುಗಳು ಅಳುವುದನ್ನು ಪ್ರತ್ಯಕ್ಷವಾಗಿ ನೋಡಿದರೂ ಆ ಜೀವಿಯು ಪುನಃ ತನ್ನ ಸ್ಥೂಲ ಶರೀರದೊಳಗೆ ಪ್ರವೇಶಿಸಿ ತನ್ನವರೊಂದಿಗೆ ಮಾತ ನಾಡಬೇಕೆಂದು ಅಂದುಕೊಳ್ಳುವನು. ಆದರೇ ಆ ಜೀವಿಯು ಎಷ್ಟು ಪ್ರಯತ್ನಿಸಿದರೂ ಅಲ್ಲಿಯವರೆಗು ತಾನು ನಿವಾಸವಾಗಿರುವ ತನ್ನ ಸ್ಥೂಲ ದೇಹದೊಳಗೆ ಪ್ರವೇಶಿಸಲಾರನು. ಆ ವಿಧವಾಗಿ ಅನೇಕ ಸಲ ಸ್ಥೂಲ ಶರೀರದೊಳಗೆ ಪ್ರವೇಶಿಸಬೇಕೆಂದು ಪ್ರಯತ್ನಿಸಿ ವಿಫಲವಾಗಿ, ಇನ್ನು ಹಾಗೆ ಸೇರುವುದಕ್ಕೆ ಆಗುವುದಿಲ್ಲವೆಂದು ತಿಳಿದು ಸುಮ್ಮನಾಗಿಹೋಗುವನು. ಅಂಥವನು ತನ್ನ ಆಯಸ್ಸು ಎಷ್ಟು ಕಾಲವಿರುವುದೋ ಅಷ್ಟುಕಾಲ ಸೂಕ್ಷ್ಮ ಶರೀರದೊಂದಿಗೆ ಕಳೆಯಬೇಕಾಗಿರುತ್ತದೆ. ಆ ಸ್ಥಿತಿಯನ್ನೇ ದೆವ್ವ ಎಂದು ಕೂಡಾ ಅನ್ನುತ್ತಿದ್ದೇವೆ. ಹಾಗೆ ತನ್ನ ಸ್ಥೂಲ ಶರೀರದೊಳಗೆ ಸೇರಲಾರದವನು, ಇತರರು ಜೀವನ ಸಾಗಿಸುತ್ತ ಬದುಕಿರುವ ಸ್ಥೂಲ ಶರೀರದೊಳಗೆ ಸೇರುವ ಅವಕಾಶವಿದೆ. ಆದ್ದರಿಂದ ಕೆಲವರು ಅಕಾಲ ಮೃತ್ಯುವಿನಿಂದ ಸತ್ತುಹೋದವರು ಇತರರ ಶರೀರದೊಳಗೆ ಆವರಿಸಿ ಮಾತನಾಡುವುದು ನಡೆಯುತ್ತಿದೆ. ಆಗ "ಬದುಕಿರುವವನನ್ನು ಸತ್ತುಹೋದವನು ಸೇರಿದ್ದಾನೆ" ಎಂದು ಅನ್ನುತ್ತಿರುತ್ತೇವೆ.

ಇದೆಲ್ಲವೂ ಮನುಷ್ಯನ ಜನ್ಮದ ಬಗ್ಗೆ ನಡೆಯುವ ವಿಧಾನವಾಗಿದ್ದರೇ, ದೇವತೆಗಳ ಜೀವನದಲ್ಲಿ ನಡೆಯುವ ವಿಧಾನವು ಬೇರೆಯಾಗಿದೆ. ದೇವತೆಗಳಾಗಿ ಇರುವವರು ಜೀವಾತ್ಮಗಳೇ ಆದರೂ ಅವರಿಗೆ ಮಾನವರಹಾಗೆ ಮಾಂಸ ಶರೀರವು ಇಲ್ಲ. ಕಲ್ಲಿನ ಶರೀರಗಳ ಅಂದರೇ ಕಲ್ಲಿನ ಗೊಂಬೆಗಳಲ್ಲಾಗಲೀ ಅಥವಾ ಇತರ ಗೊಂಬೆಗಳಲ್ಲಾಗಲೀ ನಿವಾಸಿಸುತ್ತಿದ್ದಾರೆ. ದೇವತೆಗಳಿಗೆ ಮರಣವು ಬರುವ ಮೊದಲೇ ಸಜೀವವಾಗಿರುವಾಗಲೇ ಅವರವರ ಕಲ್ಲಿನ ಶರೀರವನ್ನು ಬಿಟ್ಟು ಹೊರಗೆ ಬರಬಲ್ಲರು. ಹಾಗೆಯೇ ಒಳಗೆ ಹೋಗಬಲ್ಲರು. ಮನುಷ್ಯನ ಶರೀರದಲ್ಲಿ ಹಾಗೆ ನಡೆಯುವುದಕ್ಕೆ ಸಾಧ್ಯವಿಲ್ಲ. ದೇವತೆಗಳಾಗಿರುವವರು ತಮ್ಮ ಕಲ್ಲಿನ ಶರೀರದಿಂದ ಯಾವಾಗಲಾದರೂ ಹೊರಗೆ ಬರಬಲ್ಲರು, ಯಾವಾಗಲಾದರೂ ಒಳಗೆ ಹೋಗಬಲ್ಲರು. ಉದಾಹರಣೆಗೆ ನಾನು ನೋಡಿರುವ ಒಂದು ಪ್ರತ್ಯಕ್ಷ ಸಂಘಟನೆಯನ್ನು ಕುರಿತು ಹೇಳುತ್ತಿದ್ದೇನೆ ನೋಡಿರಿ. ಒಂದು ಹೆಸರು ಪಡೆದಿರುವ ಆಂಜನೇಯ ಸ್ವಾಮಿ ಗುಡಿಗೆ ಇತರರ ಹಿಂದೆ ನಾವು ಹೋಗುವುದು ನಡೆಯಿತು. ಅಲ್ಲಿಗೆ ಸಾಯಂಕಾಲ ಐದು ಗಂಟೆಗಳ ಸಮಯದಲ್ಲಿ ಹೋದೆವು. ಅಲ್ಲಿ ಗುಡಿಯಲ್ಲಿ ಆಂಜನೇಯಸ್ವಾಮಿಗೆ ಪೂಜೆಗಳು ನಡೆಯುತ್ತಿವೆ. ಹೊರಗೆ ಎಷ್ಟೋ ಜನ ಅನಾರೋಗ್ಯದಿಂದ ಇರುವವರು 'ಆಂಜನೇಯಸ್ವಾಮಿ ತಮ್ಮ ರೋಗವನ್ನು ಹೋಗಲಾಡಿಸಿ ಆರೋಗ್ಯವನ್ನು ಕಾಪಾಡುವನು' ಎಂಬ ನಂಬಿಕೆಯಿಂದ ಅಲ್ಲಿಗೆ ಬಂದಿರುವವರು ಇದ್ದರು. ಅಲ್ಲಿಗೆ ಬಂದ ಅನಾರೋಗ್ಯ ವಂತರೆಲ್ಲರೂ ದೆವ್ವಗಳ ಪೀಡೆಯನ್ನು ಅನುಭವಿಸುವವರೇ ಆಗಿದ್ದಾರೆ. ಆ ಗುಡಿ ಹತ್ತಿರ ಕೆಲವು ದಿನಗಳಿದ್ದರೇ ತಮ್ಮನ್ನು ಪೀಡಿಸುವ ದೆವ್ವಗಳನ್ನು ಆಂಜನೇಯ ಸ್ವಾಮಿ ಹೊಡೆದೋಡಿಸುವನೆಂದು ಅವರ ನಂಬಿಕೆ. ಆದ್ದರಿಂದ ಬಹಳ ಜನ ಅನಾರೋಗ್ಯವಂತರು ಅಲ್ಲಿ ಸಹ ಇದ್ದಾರೆ.

ಅಷ್ಟರಲ್ಲಿ ಆಂಜನೇಯ ಸ್ವಾಮಿ ಗುಡಿಯಲ್ಲಿನ ಆಂಜನೇಯನು ಹೊರಗೆ ಬಂದು, ಅಲ್ಲಿರುವ ರೋಗಸ್ಥರಲ್ಲಿರುವ ಒಂದು ದೆವ್ವವನ್ನು ದಂಡಿಸುವುದು ನಡೆಯುತ್ತಿದೆ. ಆಗ ಮನುಷ್ಯನಲ್ಲಿನ ದೆವ್ವ ಹೊರಗೆ ಬಂದು ಮಾತನಾಡುತ್ತಾ "ನನ್ನನ್ನು ಹೊಡೆಯಬೇಡ ಸ್ವಾಮೀ! ನಾನು ಈಕೆಯನ್ನು ಬಿಟ್ಟು ಹೋಗುತ್ತೇನೆ

ಇನ್ನು ಎಂದಿಗೂ ಬರುವುದಿಲ್ಲ" ಎಂದು ಹೇಳುವುದು ನಾನು ಕೂಡಾ ಕೇಳಿದ್ದೇನೆ. ಆದರೂ ಆಂಜನೇಯ ಸ್ವಾಮಿ ಹೊಡೆಯುತ್ತಿರುವಾಗೆ "ಅಯ್ಯೋ! ಹೊಡೆಯಬೇಡ ಸ್ವಾಮೀ! ಇನ್ನು ನಾನು ಸುಳ್ಳು ಹೇಳುವುದಿಲ್ಲ ನಾಳೆ ಬೆಳಗ್ಗೇ ಹೋಗುತ್ತೇನೆ" ಎಂದು ಮತ್ತೆಮತ್ತೆ ಹೇಳುವುದು ಕೂಡಾ ಕೇಳಿದೆನು. ಈ ವಿಧವಾಗಿ ಅಲ್ಲಿರುವ ಸುಮಾರು ಹತ್ತುಜನ ದೆವ್ವಗಳ ಪೀಡಿತರನ್ನು ಆಂಜನೇಯಸ್ವಾಮಿ ದಂಡಿಸುವುದು ನಡೆದಿದೆ. ಆ ಸಮಯದಲ್ಲಿ ಗುಡಿಯಲ್ಲಿ ಪೂಜಾರಿಗಳು ಪೂಜೆಗಳು ಮಾಡುತ್ತಿದ್ದರೂ, ಆಂಜನೇಯ ಸ್ವಾಮಿ ಆ ಪೂಜೆಗಳ ಬಳಿ ಇಲ್ಲವೆಂದು, ಆಗ ಹೊರಗೆ ಕಾರ್ಯಗಳಲ್ಲಿ ಇದ್ದಾನೆಂದು ತಿಳಿಯುತ್ತಿದೆ. ಈ ವಿಧವಾಗಿ ಅರ್ಧಗಂಟೆ ಕಾಲ ಕಳೆದ ನಂತರ ಅಲ್ಲಿ ಸದ್ದು ಅಡಗಿದೆ. ಅದನ್ನು ಅನುಸರಿಸಿ ನೋಡಿದರೆ ಆಂಜನೇಯಸ್ವಾಮಿ ಅಲ್ಲಿಲ್ಲದೇ ಗುಡಿಯಲ್ಲಿನ ಪ್ರತಿಮೆಯೊಳಗೆ ಸೇರಿಹೋದನೆಂದು ತಿಳಿಯಿತು. ಹೀಗೆ ಅನೇಕ ದೇವಾಲಯಗಳಲ್ಲಿನ ದೇವತೆಗಳು ತಮ್ಮ ಆಕಾರವನ್ನು ಬಿಟ್ಟು ಹೊರಗೆಹೋಗಿ ಅನೇಕ ಕಾರ್ಯಗಳನ್ನು ಮಾಡಿ ಪುನಃ ತಮ್ಮ ಶರೀರದೊಳಗೆ ಸೇರುತ್ತಿದ್ದಾರೆ. ಇದೆಲ್ಲಾ ದೇವತೆಗಳ ವಿಷಯ ತಿಳಿಯದವರಿಗೆ ಏನೂ ತಿಳಿದಿಲ್ಲ. ನಾವು ಅನೇಕ ಸಲ ದೇವತೆಗಳೊಂದಿಗೆ ಮಾತನಾಡಿ ಅವರ ಜೀವನ ವಿಶೇಷಗಳೆಲ್ಲವನ್ನು ತಿಳಿದುಕೊಳ್ಳುವುದು ನಡೆದಿದೆ. ಆದ್ದರಿಂದ ದೇವತೆಗಳು ತಮ್ಮ ಆಕಾರಗಳಾದ ಕಲ್ಲಿನಗೊಂಬೆಗಳನ್ನು ಬಿಟ್ಟು ಹೊರಗೆ ಬಂದು ಹೋದಂತೆ ಅನೇಕ ಆಧಾರಗಳಿವೆ. ನಾವು ದೇವತೆಗಳ ಜೀವನ ವಿಧಾನವನ್ನು ಸುಮಾರು ನಲವತ್ತು (40) ವರ್ಷಗಳಿಂದ ಗಮನಿಸುತ್ತಿದ್ದೇವೆ. ಆದ್ದರಿಂದ ದೇವತೆಗಳ ಪೂರ್ತಿ ವಿಷಯಗಳು ನಮಗೆ ಚೆನ್ನಾಗಿ ತಿಳಿದಿವೆ.

ದೇವತೆಗಳಿಗೆ ಸ್ಥೂಲ ಅವಯವಗಳು ಇರುವುದಿಲ್ಲ. ಅವರಿಗೆ ಸೂಕ್ಷ್ಮ ಗ್ರಾಹಿತ ಶಕ್ತಿಗಳೇ ಹೆಚ್ಚಾಗಿರುತ್ತವೆ. ಉದಾಹರಣೆಗೆ ದೇವತೆಗಳಿಗೆ ಸ್ಥೂಲವಾದ ಕಿವಿಗಳು ನಮ್ಮಹಾಗೆ ಇರುವುದಿಲ್ಲ. ಕಲ್ಲಿನ ಗೊಂಬೆಗಳಲ್ಲಿ ದೇವತೆಗಳಿರುವುದರಿಂದ ಅವರಿಗೆ ಕಿವಿಗಳು ಹೊರಗೆ ತಿಳಿಯುವಂತೆ ಇಲ್ಲದಿದ್ದರೂ ಶ್ರವಣ ಶಕ್ತಿ ಹೆಚ್ಚಾಗಿರುತ್ತದೆ. ಮನುಷ್ಯನಿಗಿರುವ ಶ್ರವಣ ಶಕ್ತಿಗಿಂತಲೂ ನೂರು ಪಟ್ಟು ಹೆಚ್ಚಾಗಿ

ಆಲಿಸುವರೆಂದು ಹೇಳಬಹುದು. ಮನುಷ್ಯನಿಗೆ ಸ್ಥೂಲವಾಗಿ ಕಿವಿಗಳಿರುವುದರಿಂದ ಅವುಗಳಿಗೆ ಗ್ರಾಹಿತಶಕ್ತಿಯಾದ 'ಶ್ರವಣ ಶಕ್ತಿ' ಸ್ವಲ್ಪದವರೆಗೇ ಇರುತ್ತದೆ. ಸ್ವಲ್ಪ ಪರಿಧಿಯಲ್ಲಿನ ಶಬ್ಧವನ್ನು ಮಾತ್ರ ಮನುಷ್ಯ ಕೇಳಬಲ್ಲನು. ಆದರೆ ಸ್ಥೂಲ ಅವಯವ ಇಲ್ಲದಿರುವುದರಿಂದ, ಇದ್ದರೂ ಅದು ಕಲ್ಲಿನದಾಗಿ ಇರುವುದರಿಂದ, ದೇವತೆಗಳ ಕಿವಿಯ ಒಂದು 'ಶ್ರವಣ' ಎಂಬ ಗ್ರಾಹಿತ ಶಕ್ತಿ ಹೆಚ್ಚಾಗಿ ಇರುವುದರಿಂದ ಒಂದು ಕಿಲೋಮೀಟರ್ ಪರಿಧಿಯಿಂದ ನಾಲ್ಕು ಅಥವಾ ಐದು ಕಿಲೋಮೀಟರ್‌ಗಳ ಪರಿಧಿವರೆಗು ಅವರು ಆಲಿಸಬಲ್ಲರು. ಆದ್ದರಿಂದ ನೀನು ಒಂದು ದೇವತೆಯನ್ನು ನಿನ್ನ ಮನೆಯ ಮುಂದೆ ದೂಷಿಸಿದರೂ ಎರಡು ಮೂರು ಕಿಲೋಮೀಟರುಗಳ ದೂರದಲ್ಲಿರುವ ದೇವತೆ ಕೇಳಬಲ್ಲದು. ನೀನು ದೂಷಿಸಿದ ನಂತರ ಎರಡು ಮೂರು ದಿನಗಳಿಗೆ ನೀನು ಆ ದೇವತೆಬಳಿಗೆ ಹೋದಾಗ ನೀನು ಮನೆಯ ಹತ್ತಿರ ದೂಷಿಸಿದ ವಿಷಯವನ್ನು ಆ ದೇವತೆ ಹೇಳಬಲ್ಲದು. ಅದೇ ವಿಧವಾಗಿ ದೃಷ್ಠಿ ಶಕ್ತಿ ಸಹ ಹೆಚ್ಚಾಗಿರುವುದರಿಂದ ನಾಲ್ಕು ಅಥವಾ ಐದು ಕಿಲೋಮೀಟರುಗಳ ದೂರದಲ್ಲಿ ಇರುವ ದೃಶ್ಯವನ್ನು ಕೂಡಾ ದೇವತೆಗಳು ನೋಡಬಲ್ಲರು. ಈ ವಿಧವಾಗಿ ಮನುಷ್ಯರಿಗು ದೇವತೆಗಳಿಗು ಎಷ್ಟೋ ಪಟ್ಟು ಗ್ರಾಹಿತ ಶಕ್ತಿಯಲ್ಲಿ ವ್ಯತ್ಯಾಸ ಇರುವುದರಿಂದ ವಿಶೇಷವಾದ ಶಕ್ತಿಯಿರುವವೆಂದು ದೇವತೆಗಳನ್ನು ವಿಗ್ರಹಗಳೆಂದು ಹೇಳುವುದು ನಡೆದಿದೆ. ವಿಗ್ರಹ ಎನ್ನುವುದು ಅವರಿಗಿರುವ ಗ್ರಾಹಿತಶಕ್ತಿಗೆ ಇರುವ ಮತ್ತೊಂದು ಹೆಸರೆಂದು ತಿಳಿಯಬೇಕು.

ಮನುಷ್ಯರಿಗಿಂತಲೂ ದೇವತೆಗಳು ಎಷ್ಟೋ ವಿಷಯಗಳಲ್ಲಿ ಎಷ್ಟೋ ಪಟ್ಟು ಅಧಿಕರಾಗಿದ್ದಾರೆ. ಆದ್ದರಿಂದ ಮನುಷ್ಯರಿಗಿಂತಲೂ ದೇವತೆಗಳು ದೊಡ್ಡವರು ಎಂಬ ಹೆಸರು ಅವರಿಗೆ ಬಂದಿದೆ. ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನ ಮುಖವನ್ನು ನೋಡಿದಾಗ ಆತನ ಮುಖ ವರ್ಚಸ್ಸನ್ನು ಅನುಸರಿಸಿ, ಮುಖ ಕದಲಿಕೆಗಳನ್ನು ಅನುಸರಿಸಿ ಆತನು ಏನು ಆಲೋಚಿಸುತ್ತಿದ್ದಾನೋ ಹೇಳಬಲ್ಲನು. ಮನುಷ್ಯರಲ್ಲಿ ಬಹಳ ಬುದ್ಧಿವಂತರು, ಗ್ರಹಿಸುವ ಶಕ್ತಿ ಹೆಚ್ಚಾಗಿರುವವರು ಎದುರಿಗಿರುವ ವ್ಯಕ್ತಿಯಲ್ಲಿನ ಆಲೋಚನೆಯ ಭಾವವನ್ನು

ಗ್ರಹಿಸಬಲ್ಲರು. ಇದು ವಾಸ್ತವವೇ ಏಕೆಂದರೇ! ಕೆಲವರು ನೋಡುತ್ತಲೇ ನಾವು ಏನು ಅಂದುಕೊಳ್ಳುವುದು ಹೇಳಬಲ್ಲ ಸಾಮರ್ಥ್ಯ ಇರುವವರಿದ್ದಾರೆ. ಆದರೇ ದೇವತೆಗಳಲ್ಲಿ ಈ ವಿಷಯದಲ್ಲಿ ಇನ್ನೂ ಹೆಚ್ಚು ಗ್ರಾಹಿತಶಕ್ತಿ ಇರುವವರಿದ್ದಾರೆಂದು ತಿಳಿಯುತ್ತಿದೆ. ಒಬ್ಬ ಮನುಷ್ಯ ತಾನು ತನ್ನ ತಲೆಯಲ್ಲಿ ಅಂದುಕೊಳ್ಳುವ ವಿಷಯವನ್ನು ಮುಖವನ್ನು ನೋಡಿ ಹೇಳಬಲ್ಲ ದೇವತೆಗಳಿರುವಂತೆ ತಿಳಿದಿದೆ. ಪ್ರತ್ಯಕ್ಷವಾಗಿ ನಡೆದ ಸಂಘಟನೆಯನ್ನು ನೋಡಿದರೇ ಆ ವಿಷಯವು ಸತ್ಯವೆಂದು ತಿಳಿಯಬಲ್ಲದು. ಒಂದು ಊರಿನಲ್ಲಿ ಒಂದು ದೇವತೆ ಒಂದು ಮನುಷ್ಯನ ಮೇಲೆ ಆವರಿಸಿ ಬಂದು ಒಂದು ಗಂಟೆಕಾಲ ಮಾತನಾಡುವುದು ವಾರಕ್ಕೆ ಒಂದು ಸಲ ನಡೆಯುತ್ತಿತ್ತು. ಆ ಸಮಯದಲ್ಲಿ ಪ್ರಜೆಗಳು ಆ ದೇವತೆ ಹತ್ತಿರಕ್ಕೆ ಹೋಗಿ ತಮ್ಮ ಪ್ರಪಂಚ ಸಂಬಂಧ ಕೋರಿಕೆಗಳನ್ನು ಕೇಳುತ್ತಿದ್ದರು. ಆಗ ಆ ದೇವತೆ ಅವರಿಗೆ ತನಗೆ ತಿಳಿದ ವಿಷಯವನ್ನು ಹೇಳುತ್ತಿದ್ದಳು. ಒಂದು ದಿನ ನೂರು ಕಿಲೋಮೀಟರುಗಳ ದೂರದಿಂದ ಚಿನ್ನಪಲ್ಲೆ ಎಂಬ ಊರಿನಿಂದ ಒಬ್ಬ ವ್ಯಕ್ತಿ ತನ್ನ ಮನೆಯಿಂದ ಓಡಿಹೋದ ಹಸುವನ್ನು ಕುರಿತು ಕೇಳಬೇಕೆಂದು ಬಂದಿದ್ದನು. ಆಗ ದೇವತೆ ಆವರಿಸಿ ಬಂದ ನಂತರ ಸ್ವಲ್ಪಹೊತ್ತಿಗೆ ಅಲ್ಲಿ ಸೇರಿರುವ ಸುಮಾರು ಐವತ್ತುಜನ ಗುಂಪಿನಲ್ಲಿ "ಚಿನ್ನಪಲ್ಲೆ ಎಂಬ ಊರಿಂದ ಹಸುವನ್ನು ಕುರಿತು ಕೇಳಬೇಕೆಂದು ಬಂದ ಗುರ್ರಪ್ಪ, ನೀನು ಮುಂದೆ ಬಂದು ಕುಳಿತುಕೋ ಎಂದು" ಹೇಳುವುದು ನಡೆಯಿತು. ಅಲ್ಲಿಯವರೆಗು ಬಂದ ಮನುಷ್ಯ ಯಾರೊಂದಿಗೂ ಮಾತನಾಡಿಲ್ಲ, ತನ್ನ ಊರು, ತನ್ನ ಹೆಸರು, ತಾನು ಬಂದಿರುವ ಕೆಲಸ ಅಲ್ಲಿ ಯಾರಿಗೂ ತಿಳಿದಿಲ್ಲ. ಹಾಗಿರುವಾಗ ಆ ದೇವತೆಗೆ ತನ್ನ ವಿಷಯವು ಹೇಗೆ ತಿಳಿದಿದೆ? ಎಂಬ ಪ್ರಶ್ನೆ ಆತನಿಗೆ ಬಂದಿತು. ಆಗ ಆ ದೇವತೆ ದೊಡ್ಡ ಮಹತ್ವಗಳಿರುವ ದೇವತೆ ಎಂದು ಆದ್ದರಿಂದ ಆ ದೇವತೆಗೆ ತನ್ನ ವಿಷಯವೆಲ್ಲಾ ತಿಳಿದುಹೋಗಿದೆ ಎಂದು ಅಂದುಕೊಂಡನು. ಆತನು ಅಂದುಕೊಂಡ ಮಹತ್ವವು ಆ ದೇವತೆ ಬಳಿ ಇಲ್ಲದಿದ್ದರೂ, ಆತನು ಹಾಗೆ ಊಹಿಸಿಕೊಳ್ಳುವುದು ನಡೆದಿದೆ. ದೇವತೆಗಳ ವಿಷಯದಲ್ಲಿ ಇದೇ ವಿಧವಾಗಿ ಬಹಳ ಜನ ಮೋಸಹೋಗುತ್ತಿದ್ದಾರೆ.

ವಾಸ್ತವವಾಗಿ ಅಲ್ಲಿ ನಡೆದ ವಿಷಯುವು ಆತನಿಗೆ ತಿಳಿದಿಲ್ಲ. ಮನುಷ್ಯರಿಗಿಂತಲೂ ದೇವತೆಗಳಿಗೆ ಗ್ರಾಹಿತ ಶಕ್ತಿ ಎಲ್ಲಾ ವಿಧಗಳಲ್ಲಿ ಹೆಚ್ಚಾಗಿರುತ್ತದೆ ಎಂಬ ವಿಷಯವು ಮನುಷ್ಯರಿಗೆ ತಿಳಿಯದೆ ಹೋಗಿರುವುದರಿಂದ ದೇವತೆಗಳಿಗೆ ದೊಡ್ಡ ಮಹಿಮೆಗಳಿವೆಯೆಂದು ಮನುಷ್ಯರು ಅಂದುಕೊಳ್ಳುವುದು ನಡೆಯುತ್ತಿದೆ. ಅಲ್ಲಿರುವ ದೇವತೆಗೆ ಇಂದ್ರಿಯ ಗ್ರಾಹಿತ ಶಕ್ತಿ ಹೆಚ್ಚಾಗಿರುವುದರಿಂದ ಮನುಷ್ಯನ ಮುಖವನ್ನು ನೋಡುತ್ತಲೇ, ಆ ನೋಟ ಮನುಷ್ಯನ ತಲೆಯಲ್ಲಿ ಮೆದುಳಿನಲ್ಲಿ ಮೆದಲುವ ಆಲೋಚನೆಗಳನ್ನು ಸಹಿತ ನೋಡಬಲ್ಲದು. ಆಗ ಆ ದೇವತೆ ಆತನ ಮೆದುಳಿನಲ್ಲಿ ಕಾಣಿಸಿರುವ ಆತನ ಉದ್ದೇಶವನ್ನು ತಿಳಿಯಲಾಗುವುದು. ಆತನು ಹಸುವನ್ನು ಕುರಿತಾದ ಚಿಂತೆ ಆತನ ತಲೆಯಲ್ಲಿ ಇರುವುದರಿಂದ ಆ ದೇವತೆ ಆತನ ಪ್ರಶ್ನೆಯನ್ನು ಸುಲಭವಾಗಿ ಗ್ರಹಿಸಿದ್ದಾಳೆ. ಆದ್ದರಿಂದ "ಹಸುವನ್ನು ಕುರಿತು ಕೇಳುವುದಕ್ಕೆ ಬಂದ ವ್ಯಕ್ತಿಯನ್ನು ಗುರ್‍ರಪ್ಪ" ಎಂದು ಕರೆಯುವುದು ನಡೆಯಿತು. ಗುರ್‍ರಪ್ಪ ಎಂಬ ತನ್ನ ಹೆಸರನ್ನು ಗ್ರಹಿಸಿ ದೇವತೆ ತನ್ನನ್ನು ಹೆಸರಿನಿಂದ ಕರೆಯುತ್ತಿದ್ದಾಳೆಂದು ಆ ಮನುಷ್ಯ ಅಂದುಕೊಳ್ಳುವುದರಿಂದ ಆತನ ಮೆದುಳಿನಲ್ಲಿಯೇ ಆತನ ಹೆಸರು ಗುರ್‍ರಪ್ಪ ಎಂದು ಆ ದೇವತೆಗೆ ತಿಳಿದು ಹೋಗಿದೆ. ಈ ವಿಧವಾಗಿ ಪ್ರಸ್ತುತ ಸಮಯದಲ್ಲಿ ಆಲೋಚನೆಯ ರೂಪದಲ್ಲಿರುವ ಸಮಾಚಾರವನ್ನು ದೇವತೆಗಳು ಗ್ರಹಿಸುವ ಶಕ್ತಿ ಇರುವವಾಗಿ ಇವೆಯೆಂದು ತಿಳಿಯದ ಮನುಷ್ಯ ದೇವತೆಗಳಿಗೆ ಮಹತ್ವಗಳನ್ನು ಹೊರಿಸುತ್ತಿದ್ದಾನೆ. ಹೀಗೆ ದೇವತೆಗಳನ್ನು ಮನುಷ್ಯರು ತಮಗಿಂತಲೂ ದೊಡ್ಡವರಾಗಿ ಹೇಳಿಕೊಳ್ಳುವ ಅವಕಾಶ ಏರ್ಪಟ್ಟಿದೆ. ಅದರಿಂದ ಕೆಲವರು ಸಮಾಜದಲ್ಲಿನ ಮುಖ್ಯವಾದ ಮನುಷ್ಯರು ದೇವತೆಗಳಿಗೆ ಪೂಜೆಗಳು ಮಾಡುವುದು, ನೈವೇದ್ಯಗಳನ್ನು ಸಮರ್ಪಿಸುವುದರಿಂದ ದೇವತೆಗಳು ಪೂಜ್ಯರಾಗಿ ಬದಲಾಗಿ ಹೋಗಿದ್ದಾರೆ. ದೇವತೆಗಳನ್ನು ದೊಡ್ಡವರಾಗಿ ಭಾವಿಸಿರುವ ಮನುಷ್ಯರು ತಮ್ಮ ಕೋರಿಕೆಗಳನ್ನು ದೇವತೆಗಳು ತೀರಿಸಬಲ್ಲರೆಂದು ನಂಬುತ್ತಿದ್ದಾರೆ. ಭೂಮಿಮೇಲೆ ಮನುಷ್ಯರು ಆಸೆಗಳಿಂದ ತುಂಬಿರುವವರಾಗಿ, ಎಷ್ಟೋ ಕೋರಿಕೆಗಳನ್ನು ದೇವತೆಗಳಲ್ಲಿ ಕೋರುತ್ತಾ ದೇವತೆಗಳಿಗೆ ಬಟ್ಟೆಗಳು ಕಟ್ಟಿಸಿ ನಿತ್ಯವು ಕೈ ಮುಗಿಯುತ್ತಿದ್ದಾರೆ.

ಈ ವಿಧವಾಗಿ ದೇವತೆಗಳು ಭೂಮಿಮೇಲೆ ನಿತ್ಯಪೂಜ್ಯರಾಗಿ ಬದಲಾಗಿ ಹೋಗಿದ್ದಾರೆ. ಕೋರಿಕೆಗಳು ನೆರವೇರುವುದನ್ನು ಅನುಸರಿಸಿ ದೇವತೆಗಳನ್ನು ಚಿಕ್ಕ ದೊಡ್ಡ ದೇವತೆಗಳಾಗಿ ಮನುಷ್ಯರೇ ವಿಂಗಡಿಸಿದ್ದಾರೆ. ಪ್ರತಿ ಮನುಷ್ಯ ಯಾವುದೋ ಒಂದು ಕೋರಿಕೆಯ ನಿಮಿತ್ತ ಯಾವುದೋ ಒಂದು ದೇವತೆಯನ್ನು ನಿತ್ಯವು ಕೈ ಮುಗಿಯುತ್ತಿರುವುದರಿಂದ, ಹೊಸದಾಗಿ ಹುಟ್ಟಿ ಬರುವವರು ಸಹ ತಮ್ಮ ಹಿರಿಯರು ಏನು ಮಾಡುತ್ತಿದ್ದಾರೋ ಅದನ್ನೇ ವಿಚಕ್ಷಣೆ ಇಲ್ಲದೇ ಮಾಡುತ್ತಿದ್ದಾರೆ. ಹಾಗೆ ಹಿರಿಯರನ್ನು ನೋಡಿ ಚಿಕ್ಕವರು ಅವರ ದಾರಿಯಲ್ಲಿ ಹೋಗುವುದರಿಂದ ಅಸಲಾದ ದೇವರನ್ನು, ಪ್ರಪಂಚವೆಲ್ಲವನ್ನೂ ಸೃಷ್ಟಿಸಿರುವ ದೇವರನ್ನು ಮರೆತುಹೋಗಿ ಯಾವಾಗಲೂ ದೇವತೆಗಳ ಜ್ಞಾಪಕದಲ್ಲಿಯೇ ಮನುಷ್ಯರಿದ್ದಾರೆ. ಮನುಷ್ಯರ ದೃಷ್ಟಿಯಲ್ಲಿ ಎಲ್ಲರಿಗಿಂತಲೂ ದೊಡ್ಡವನು ದೇವರು ಎಂಬ ವಿಷಯವೇ ತಿಳಿಯದಂತೆ ಹೋಗಿದೆ.

**ಅವರ ಪ್ರಶ್ನೆ:– ನೀವು ಹೇಳಿರುವ ವಿಷಯದಲ್ಲಿ ದೇವತೆಗಳಿಗೆ (ವಿಗ್ರಹಗಳಿಗೆ) ಇರುವ ವಿಶೇಷತೆ ತಿಳಿದುಹೋಗಿದೆ. ಗ್ರಹಗಳಿಗೆ ಇಲ್ಲದ ಇಂದ್ರಿಯಶಕ್ತಿ ವಿಗ್ರಹಗಳಿಗಿದೆ ಎಂದು ಅರ್ಥವಾಗಿದೆ. ಮನುಷ್ಯ ಸತ್ತುಹೋದರೇ ಆತನು ಸಹ ಸ್ಥೂಲ ಶರೀರವನ್ನು ಕಳೆದುಕೊಳ್ಳುವನು ಅಲ್ಲವೇ! ಆಗ ಮನುಷ್ಯನಿಗೆ ಸೂಕ್ಷ್ಮ ಶರೀರವಿರುತ್ತದೆ ಅಲ್ಲವೇ! ಸ್ಥೂಲ ಅವಯವಗಳು ಇಲ್ಲದ ಸೂಕ್ಷ್ಮ ಇಂದ್ರಿಯಗಳಿಗೆ ಗ್ರಹಿಸುವ ಶಕ್ತಿ ಹೆಚ್ಚಾಗಿರುತ್ತದೆ ಎಂದು ನೀವು ಅಂದಹಾಗೆ ಮನುಷ್ಯ ಅಂದರೇ ಸತ್ತುಹೋದರೇ ಗ್ರಹವಾಗಿ ಇರುವವನು ದೆವ್ವವಾಗಿ ಬದಲಾಗಿಹೋದರೇ ಆಗ ಆತನಿಗೆ ವಿಗ್ರಹಕ್ಕಿರುವಂತೆಯೇ ಇಂದ್ರಿಯ ಶಕ್ತಿಗಳ ಗ್ರಹಿಸುವ ಸಾಮರ್ಥ್ಯ ಹೆಚ್ಚಾಗಿ ಇರುತ್ತದೆಯಾ! ಎಂದು ಕೆಲವರಿಗೆ ಅನುಮಾನವಿರುವುದು. ಈ ವಿಷಯದಲ್ಲಿ ನೀವೇನು ಹೇಳುತ್ತೀರ?**

**ನಮ್ಮ ಉತ್ತರ:–** ಮನುಷ್ಯ ಬದುಕಿದ್ದಾಗ ಗ್ರಹವಾಗಿಯೇ ಹೇಳಲ್ಪಡುತ್ತಾನೆ. ಆಗ ಸ್ಥೂಲ ಶರೀರವಿರುವುದರಿಂದ ಆತನ ಇಂದ್ರಿಯಶಕ್ತಿಗಳು ಮನುಷ್ಯರೆಲ್ಲರಿಗೂ ಇರುವಂತೆಯೇ ಇರುತ್ತವೆ. ಆದರೇ ಮನುಷ್ಯ ಅಕಾಲ ಮೃತ್ಯುವಿನಿಂದ ಸತ್ತುಹೋದರೇ, ಆತನು ಸ್ಥೂಲ ಶರೀರವನ್ನು ಬಿಟ್ಟು ಸೂಕ್ಷ್ಮಶರೀರದೊಂದಿಗೆ

ಕಳೆಯಬೇಕಾಗಿ ಬರುತ್ತದೆ. ಆಗ ಆತನನ್ನು 'ಗ್ರಹ' ಎಂದು ಅನ್ನದೇ 'ದೆವ್ವ'ಎಂದು ಅನ್ನುತ್ತಿದ್ದೇವೆ. ದೆವ್ವ ದೇವತೆಗಿಂತಲೂ ಎಲ್ಲದರಲ್ಲು ಚಿಕ್ಕದೇ ಆಗುತ್ತದೆ. ಹಾಗೆಯೇ ಗ್ರಾಹಿತಶಕ್ತಿಯಲ್ಲಿಯೂ ಚಿಕ್ಕದೇ ಆಗುವುದು. ಆದರೇ ಮನುಷ್ಯ ಬದುಕಿದ್ದಾಗ ಇಂದ್ರಿಯಗಳಿಗಿರುವ ಶಕ್ತಿಗಳಿಗಿಂತ, ದೆವ್ವವಾಗಿರುವಾಗ ಸ್ವಲ್ಪ ಹೆಚ್ಚು ಪ್ರಭಾವ ಹೊಂದಿರುತ್ತದೆ. ಆದ್ದರಿಂದ ದೆವ್ವಗಳು ಕೂಡಾ ಸ್ವಲ್ಪ ದೂರದಲ್ಲಿರುವ ಶಬ್ಧಗಳನ್ನು ಕೇಳುತ್ತಿವೆ. ಹಾಗೆಯೇ ನೋಡುತ್ತಿವೆ. ಮನುಷ್ಯ ಬದುಕಿದ್ದಾಗ ಇರುವ ದೃಷ್ಟಿಗಿಂತಲೂ ದೆವ್ವವಾಗಿ ಬದಲಾದಾಗ ದೃಷ್ಟಿ ಸುಮಾರು ನಾಲ್ಕು ಪಟ್ಟು ಹೆಚ್ಚಾಗಿರುತ್ತದೆ. ಹಾಗೆಯೇ ಕಿವಿಯೊಂದರ ಆಲಿಸುವ ಶಕ್ತಿ ಕೂಡಾ ಗ್ರಹಕ್ಕಿಂತಲೂ ದೆವ್ವವಾಗಿ ಬದಲಾದಾಗ ಸುಮಾರು ನಾಲ್ಕು ಪಟ್ಟು ಹೆಚ್ಚಾಗಿರುತ್ತದೆ. ಒಂದು ಪ್ರತ್ಯಕ್ಷ ಸಂಘಟನೆಯ ಮೂಲಕ ಆ ವಿಷಯವು ಸ್ವಲ್ಪ ನಿರೂಪಣೆಗೆ ಬಂದಿದೆ. ಒಂದು ಊರಿನಲ್ಲಿ ರಾತ್ರಿ ಹೊತ್ತು ಸುಮಾರು 150 ಗಜ ದೂರದಲ್ಲಿರುವ ಮನೆಯಲ್ಲಿ ಕಳ್ಳತನ ನಡೆಯುತ್ತಿರುವಾಗ, ಆ ದೃಶ್ಯವನ್ನು 150 ಗಜ ದೂರದಿಂದ ನೋಡಿರುವ ದೆವ್ವವು ಅಲ್ಲೇ ಇರುವ ಮನುಷ್ಯನೊಳಗೆ ಸೇರಿ ಉಳಿದವರೆಲ್ಲರನ್ನು ಎಬ್ಬಿಸಿ, ಇಂತಹ ಮನೆಯಲ್ಲಿ ಕಳ್ಳತನ ನಡೆಯುತ್ತಿದೆ ಎಂದು ಹೇಳಿದಾಗ, ಅದನ್ನು ಕೇಳಿದವರೆಲ್ಲರೂ ಅಲ್ಲಿಗೆ ಹೋಗಿ ನೋಡಿದರು. ಆಗ ಸೂಕ್ಷ್ಮವಾಗಿ ಬಂದು ಹೇಳಿರುವ ದೆವ್ವದ ಮಾತು ನಿಜವೇ ಎಂದು ತಿಳಿದುಹೋಯಿತು. ಅಲ್ಲಿ ಕಳ್ಳತನ ನಡೆಯುತ್ತಿರುವಾಗ ಅವರು ನೋಡಿ ಕಳ್ಳರನ್ನು ಹೊಡೆದೋಡಿಸುವುದು ನಡೆದಿದೆ. ಈ ಸಂಘಟನೆಯಿಂದ ಬದುಕಿರುವ ಗ್ರಹಕ್ಕಿಂತಲೂ ಸತ್ತುಹೋದ ದೆವ್ವವು ಹೆಚ್ಚು ಶಕ್ತಿ ಇರುವುದೆಂದು ತಿಳಿದುಹೋಗಿದೆ. ದೃಷ್ಠಿಯಲ್ಲಿಯೂ, ಆಲಿಸುವುದರಲ್ಲಿಯೂ ಅಲ್ಲದೇ ಬಲವು ಕೂಡಾ ಹೆಚ್ಚಾಗಿರುತ್ತದೆ.

**ಅವರ ಪ್ರಶ್ನೆ:- ಒಬ್ಬ ಮನುಷ್ಯ ಬದುಕಿದ್ದಾಗ ದೇವತೆಗಳು ತನಗಿಂತಲೂ ದೊಡ್ಡವರೆಂದು ಎಷ್ಟೋ ಭಕ್ತಿಯಿಂದ ಮುಡುಪುಗಳು ಕಟ್ಟಿ, ನೈವೇದ್ಯಗಳನ್ನಿಟ್ಟು ಪೂಜಿಸುತ್ತಿದ್ದನು. ತನ್ನ ಜೀವನದಲ್ಲಿ ಒಂದು ದೇವತೆಯನ್ನು ಆಶ್ರಯಿಸಿ ಆ ದೇವತೆಯ ಭಕ್ತನೆಂದು ಹೇಳಿಕೊಳ್ಳುತ್ತಾ ಜೀವನಪೂರ್ತಿ ಪೂಜೆಗಳು ಮಾಡಿದನು.**

**ಹಾಗೆ ಒಂದು ದೇವತೆಗೆ ಪೂರ್ತಿ ಭಕ್ತನಾಗಿದ್ದ ಆತನು ಸತ್ತುಹೋಗುವುದು ನಡೆಯಿತು. ಆತನ ಕರ್ಮವಶಾತ್ತು ಆತನು ಅಕಾಲ ಮರಣ ಹೊಂದಿದನು. ಆಗ ಆತನು ದೆವ್ವವಾಗಿ ಆಯಸ್ಸು ಮುಗಿದು ಹೋಗುವವರೆಗು ಜೀವಿಸಬೇಕಾಗಿರುತ್ತದೆ. ಹಾಗೆ ಜೀವಿಸುತ್ತಿರುವಾಗ ತಾನು ಜೀವನ ಪೂರ್ತಿ ಪೂಜಿಸಿದ ದೇವತೆಯನ್ನು ಕೂಡಾ ನೋಡಲಾಗುತ್ತದೆ. ಹಾಗೆ ನೋಡಿದಾಗ ಆ ದೆವ್ವಕ್ಕೆ ತನ್ನ ದೇವತೆಯ ಮೇಲೆ ಭಕ್ತಿ ಬೆಳೆಯುತ್ತದಾ? ಕಡಿಮೆಯಾಗುತ್ತದಾ? ಅಲ್ಲಿಯವರೆಗು ಎಷ್ಟೋ ದೊಡ್ಡವಳು ಎಂದು ಗೌರವಿಸಿದ ದೇವತೆಯನ್ನು ನೋಡಿದಾಗ ದೆವ್ವವಾಗಿರುವ ಆತನಿಗೆ ಏನೆನಿಸುವುದು?**

**ನಮ್ಮ ಉತ್ತರ :–** ಮನುಷ್ಯ ಬದುಕಿರುವಾಗ ದೇವತೆಗಳನ್ನು ದೊಡ್ಡದಾಗಿ ತಿಳಿಯುವುದು ಸಹಜವೇ! ಆದರೇ ಮನುಷ್ಯ ಅಕಾಲ ಮರಣ ಹೊಂದಿದ ನಂತರ ಅಲ್ಲಿಯವರೆಗು ಗ್ರಹವಾಗಿರುವವನು ದೆವ್ವವಾಗಿ ಬದಲಾಗುವನು ಆದಕಾರಣ ಅಲ್ಲಿಯವರೆಗು ನೋಡದ ದೇವತೆಗಳೆಲ್ಲರನ್ನೂ ನೋಡುವನು. ಅಷ್ಟೇ ಅಲ್ಲದೆ ತನ್ನ ಜೀವನ ಕಾಲದಲ್ಲಿ ಪೂಜಿಸಿದ ದೇವತೆಗಳನ್ನು ಸಹ ನೋಡುವನು. ದೆವ್ವವಾಗಿರುವವರು ಸುಮಾರು ದೇವತೆಗಳಿಗೆ ಸಮಾನವಾಗಿ ಇರುವುದರಿಂದ ಆಗ ದೇವತೆಗಳಲ್ಲಿ ದೊಡ್ಡತನ ಏನೂ ಕಾಣಿಸುವುದಿಲ್ಲ. ಇಷ್ಟು ಕಾಲ ಇವರನ್ನೇನಾ ನಾವು ಪೂಜಿಸಿರುವುದು ಎಂದು ಆಶ್ಚರ್ಯವಾಗುತ್ತದೆ. ಏಕೆಂದರೇ! ಕೆಲವರು ದೇವತೆಗಳು ಮನುಷ್ಯರಿಗಿಂತಲೂ ನೀಚರಾಗಿ ಇರುವುದು ದೆವ್ವಗಳಾಗಿರುವವರು ನೋಡಬಲ್ಲರು. ಹಾಗೆ ನೋಡಿದಾಗ ಅವರ ಪ್ರವರ್ತನೆ ಅಜ್ಞಾನವಾಗಿ ಇರುವುದೇ ಅಲ್ಲದೇ ನೀಚವಾಗಿ ಸಹ ಕಾಣಿಸುತ್ತಿರುತ್ತದೆ. ಕೆಲವರು ದೇವತೆಗಳು ದೊಡ್ಡ ಭಾವನೆಗಳೊಂದಿಗೆ ದೊಡ್ಡದಾಗಿ ನಡೆದುಕೊಳ್ಳುತ್ತಿದ್ದರೇ, ಕೆಲವರು ಮಾತ್ರ ಅದಕ್ಕೆ ಪೂರ್ತಿ ಭಿನ್ನವಾಗಿ ಇರುತ್ತಾರೆ. ಮನುಷ್ಯರಿಗೆ ಇರುವಹಾಗೆಯೇ ದೇವತೆಗಳಿಗು ಸಹ ಒಳ್ಳೆಯ, ಕೆಟ್ಟ ಗುಣಗಳಿರುವುದರಿಂದ, ಅವರು ಸಹ ಕರ್ಮ ಪ್ರಕಾರವೇ ಕರ್ಮ ಅಧೀನದಲ್ಲಿ ನಡೆಯುವುದರಿಂದ, ಕೆಲವರು ದೇವತೆಗಳು ಮನುಷ್ಯರಿಗಿಂತಲೂ ಒಳ್ಳೆಯದಾಗಿ ಪ್ರವರ್ತಿಸಿದರೇ, ಕೆಲವರು ದೇವತೆಗಳು ಮನುಷ್ಯರಿಗಿಂತಲೂ ನೀಚವಾಗಿ ಪ್ರವರ್ತಿಸುತ್ತಾ 'ಇವರು

ದೇವತೆಗಳೇನಾ!?' ಎನ್ನುವಂತೆ ಇರುತ್ತಾರೆ. ಅಂತಹ ದೇವತೆಗಳಿಗಿಂತಲೂ ಮನುಷ್ಯರೇ ಎಷ್ಟೋ ಒಳ್ಳೆಯದಾಗಿ ಇದ್ದಾರೆನಿಸುತ್ತದೆ.

ಕೆಲವು ಕಡೆಗಳಲ್ಲಿ ಕೆಲವು ದೇವತೆಗಳು ತಮ್ಮ ಪ್ರವರ್ತನೆಗಳಿಂದ ದೆವ್ವಗಳ ಬಳಿ ಸಹ ಗೌರವವಿಲ್ಲದೇ ಮಾಡಿಕೊಳ್ಳುತ್ತಿದ್ದಾರೆ. ದೇವತೆಗಳ ಕೆಟ್ಟ ಪ್ರವರ್ತನೆಗಳನ್ನು ನೋಡಿರುವ ದೆವ್ವಗಳು ಕೆಲವುಕಡೆ ದೇವತೆಗಳಿಗೆ ಎದುರು ತಿರುಗಿ ಮಾತನಾಡುವುದು, ಕೆಲವುಕಡೆ ಹೊಡೆದಾಡುವುದು ಕೂಡಾ ನಡೆಯುತ್ತಿದೆ. ಕೆಲವುಕಡೆ ದೆವ್ವಗಳ ಕೈಯಲ್ಲಿ ಪರಾಭವಗೊಂಡ ದೇವತೆಗಳು ಸಹ ಇದ್ದಾರೆ. ದೆವ್ವಗಳಾಗಿ ಬದಲಾದವರಿಗೆ ದೇವತೆಗಳ ಬಳಿ ಯಾವ ಮಹಿಮೆಗಳು ಇಲ್ಲವೆಂದೂ, ಅವರು ಸಹ ತಮ್ಮಹಾಗೆ ಬದುಕುತ್ತಿರುವವರೇ ಎಂದು ತಿಳಿದು ಹೋಗುತ್ತಿದೆ. ದೇವತೆಗಳು ಸಹ ಮಾನವ ಜಾತಿಯಹಾಗೆ ಒಂದು ಜಾತಿಯಾಗಿ ಇದ್ದಾರೆ ಹೊರತು ಅವರಲ್ಲಿ ಯಾವ ಜ್ಞಾನವಾಗಲೀ, ಯಾವ ಮಹಿಮೆಯಾಗಲೀ ಇಲ್ಲವೆಂದು ತಿಳಿದುಹೋಗುತ್ತಿದೆ. ಕೆಲವರು ದೇವತೆಗಳು ದೇವರ ಜ್ಞಾನವೆಂದರೇ ಸ್ವಲ್ಪವಾದರೂ ಸರಿಹೋಗದವರಿರುವಾಗ, ಕೆಲವರು ಎಷ್ಟೋ ಶ್ರದ್ಧೆಯಿಂದ ಜ್ಞಾನವನ್ನು ತಿಳಿಯುವವರು ಸಹ ಇದ್ದಾರೆ. ಕೆಲವರು ದೇವತೆಗಳು ಪ್ರೇಮ, ದಯೆ ಇದ್ದು ಮಾನವರ ಬಗ್ಗೆ ಎಷ್ಟೋ ಒಳ್ಳೆಯದಾಗಿ ನಡೆದುಕೊಳ್ಳುತ್ತಾ ಎಷ್ಟೋ ಒಳ್ಳೆಯ ಹೆಸರು ಹೊಂದಿದ್ದರೇ, ಕೆಲವರು ದೇವತೆಗಳು ಮಾತ್ರ ಕೆಟ್ಟ ಗುಣಗಳಿಂದ ಪೂರ್ತಿ ಕೆಟ್ಟ ಹೆಸರನ್ನು ಪಡೆದಿದ್ದಾರೆ. ಮನುಷ್ಯ ಬದುಕಿದ್ದಾಗ, ಎಷ್ಟೋ ದೈವಜ್ಞಾನವನ್ನು ಹೊಂದಿರುವವರು ಸಹ ಕರ್ಮಾನುಸಾರ ಅಕಾಲ ಮರಣವನ್ನು ಹೊಂದಬೇಕಾಗಿ ಬಂದಾಗ ಅವರೂ ಸಹ ದೆವ್ವಗಳಾಗಿರುತ್ತಾರೆ. ಅಂತಹ ದೊಡ್ಡ ಜ್ಞಾನಿಗಳನ್ನು ನೋಡಿದಾಗ ಕೆಲವರು ದೇವತೆಗಳು ವಿನಯ ವಿಧೇಯತೆಗಳು ಇರುವವರಾಗಿ, ಜ್ಞಾನಿಗಳ ಬಳಿಗೆ ಬಂದು ಸೇವೆಗಳು ಮಾಡುತ್ತಾ ಅವರಿಂದ ಜ್ಞಾನವನ್ನು ತಿಳಿಯುವವರೂ ಸಹ ಇದ್ದಾರೆ. ಕೆಲವರು ದೇವತೆಗಳು ಮಾತ್ರ ಜ್ಞಾನಿಗಳೆಂದರೇ ಸರಿಹೋಗದವರಾಗಿ ಜ್ಞಾನಿಗಳಿಗೆ ಯಾವುದೋ ಒಂದು ಕೆಟ್ಟದನ್ನು ಮಾಡಬೇಕೆಂದು ನೋಡುತ್ತಿರುತ್ತಾರೆ.

ದೇವತೆಗಳಲ್ಲಿ ಕೆಲವರು ಯಾವುದೋ ಒಂದು ಗುಡಿಯಲ್ಲಿ ದೇವರಾಗಿಯೋ, ದೇವತೆಯಾಗಿಯೋ ಇದ್ದು, ಆ ಗುಡಿ, ಗುಡಿ ಆವರಣವೆಲ್ಲವೂ ತನ್ನ ಸಾಮ್ರಾಜ್ಯವಾಗಿ ತಿಳಿದು, ಆ ಸ್ಥಾನಕ್ಕೆಲ್ಲಾ ನಾನೇ ದೊಡ್ಡವರೆನ್ನುವಂತೆ ಪ್ರವರ್ತಿಸುತ್ತಿರುತ್ತಾರೆ. ಕೆಲವರು ದೇವತೆಗಳು ಗುಡಿಯಲ್ಲಿ ಜನ್ಮ ಪಡೆದರೂ, ಯಾವ ಗರ್ವವೂ ಇಲ್ಲದೇ ಬಂದು ಹೋಗುವ ಭಕ್ತರಿಗೆ ಎಂತಹ ಅಸೌಕರ್ಯವನ್ನು ಉಂಟಾಗದಂತೆ ನೋಡಿಕೊಳ್ಳುತ್ತಿರುತ್ತಾರೆ. ಅಂತಹ ದೇವತೆಗಳು ತಾವು ಆ ಗುಡಿಗೆ ದೇವತೆಯಾಗಿದ್ದರೂ ತಮಗೂ ಹಾಗು ಎಲ್ಲರಿಗೂ ದೇವರು ದೊಡ್ಡವನಿದ್ದಾನೆಂದು ನೆನೆಯುತ್ತಾ ಜ್ಞಾನದ ಮೇಲೆ ಆಸಕ್ತಿ ಹೊಂದಿರುತ್ತಾರೆ. ಕೆಲವರು ದೇವತೆಗಳು ಯಾವುದೋ ಒಂದು ಗುಡಿಗೆ ಅಧಿಪತಿಯಾಗಿದ್ದರೂ, ಅದು ತಮಗೆ ಇಷ್ಟವಿಲ್ಲದವರಾಗಿ ದೈವಜ್ಞಾನದ ಮೇಲೆ ಶ್ರದ್ಧೆ ಇದ್ದು ಎಲ್ಲಿ ದೈವಜ್ಞಾನವು ತಿಳಿಯಲ್ಪಡುತ್ತಿದೆಯೋ ಅಲ್ಲಿಗೆ ಹೋಗಿ ತಿಂಗಳು, ಎರಡು ತಿಂಗಳುಗಳು ಕಳೆದು ತಿರುಗಿ ತಮ್ಮ ಗುಡಿಗೆ ಬರುತ್ತಿರುತ್ತಾರೆ. ಹಾಗೆ ಬಂದಿರುವವರು ಹತ್ತು ಅಥವಾ ಹದಿನೈದು ದಿನಗಳು ಅಲ್ಲಿನ ಕೆಲಸಗಳನ್ನು ನೋಡಿಕೊಂಡು ತಿರುಗಿ ಜ್ಞಾನ ತಿಳಿದುಕೊಳ್ಳುವ ಪ್ರಯತ್ನದಲ್ಲಿ ಹೊರಟು ಹೋಗುತ್ತಿರುತ್ತಾರೆ. ಒಂದು ಸಲ ಒಂದು ಗುಡಿಯಲ್ಲಿ ಗೊಂಬೆಯೊಳಗೆ ಸೇರಿದ ಜೀವಿಯು ಆ ಜನ್ಮವೆಲ್ಲವೂ ಆ ಗೊಂಬೆಯಲ್ಲಿಯೇ ಇರಬೇಕು. ಆ ಗೊಂಬೆ ಆ ದೇವತೆ ಯೊಂದರ ಶರೀರವಾಗಿ ಇರುತ್ತದೆ. ಒಂದು ಗೊಂಬೆಯಲ್ಲಿ ಒಂದು ದೇವತೆ ಜನ್ಮಿಸಿದ ನಂತರ ತಿರುಗಿ ಆ ದೇವತೆ ಮರಣವನ್ನು ಹೊಂದುವವರೆಗು ಬೇರೆ ದೇವತೆ ಆ ಗೊಂಬೆಯಲ್ಲಿ ಜನ್ಮಿಸುವುದಕ್ಕೆ ಅವಕಾಶವಿಲ್ಲ. ಮನುಷ್ಯರ ಶರೀರದಲ್ಲಿ ಇತರ ದೆವ್ವ ಬಂದು ಸೇರುವಂತೆ, ದೇವತೆಗಳ ಶರೀರಗಳಾದ ಕಲ್ಲಿನ ಗೊಂಬೆಯಲ್ಲಿ ಬೇರೆ ದೇವತೆ ಸೇರುವುದಕ್ಕೆ ಅವಕಾಶವಿಲ್ಲ. ಒಂದು ಸಲ ಒಂದು ಗೊಂಬೆಯಲ್ಲಿ ಸೇರಿದ ದೇವತೆ ಎಷ್ಟುಸಲವಾದರೂ ಆ ಕಲ್ಲಿನ ಗೊಂಬೆಯಿಂದ ಹೊರಗೆ ಬರಬಹುದು ಒಳಗೆ ಹೋಗಬಹುದು. ಒಂದೊಂದು ಸಲ ಆರು ತಿಂಗಳು ಸಹಿತ ಗೊಂಬೆಯಲ್ಲಿ ಆ ದೇವತೆ ಇರುವುದಿಲ್ಲ. ಕೆಲವು

ಗುಡಿಗಳಲ್ಲಿನ ದೇವತೆಗಳು ಧನಿಕರಾಗಿದ್ದರೇ, ಕೆಲವರು ದೇವತೆಗಳು ತಮ್ಮ ಗುಡಿಗಳಿಗೆ ಬಂದು ಕಾಣಿಕೆಗಳು ಕೊಡುವವರಿಲ್ಲದೆ ಬಡವರಾಗಿ ಇದ್ದಾರೆ.

ಮುಖ್ಯವಾದ ವಿಷಯವೇನೆಂದರೇ! ಆಧ್ಯಾತ್ಮಿಕ ರಂಗದಲ್ಲಿ ಮನುಷ್ಯರು ಕಡಿಮೆ ಇದ್ದಾರೆಂದು ನಾವು ಹೇಳುತ್ತಿದ್ದೇವೆ. ಆದರೇ ಆಧ್ಯಾತ್ಮಿಕ ರಂಗದಲ್ಲಿ ಮನುಷ್ಯರಿಗಿಂತಲೂ ದೇವತೆಗಳೇ ಕಡಿಮೆ ಇದ್ದಾರೆ. ಆಧ್ಯಾತ್ಮಿಕದಲ್ಲಿ ಮನುಷ್ಯರು ಹೆಚ್ಚಾಗಿರುವುದೇ ಅಲ್ಲದೇ, ದೇವತೆಗಳಿಗಿಂತಲೂ ಹೆಚ್ಚು ಜ್ಞಾನಿಗಳಾಗಿ ಇದ್ದಾರೆ. ಅಷ್ಟೇ ಅಲ್ಲದೇ ದೇವತೆಗಳಿಗಿಂತಲೂ ಹೆಚ್ಚು ಜ್ಞಾನಶಕ್ತಿ ಇರುವವರಾಗಿ ಸಹ ಇದ್ದಾರೆ. ದೇವತೆಗಳು ಎಷ್ಟು ಜನರಿದ್ದರೂ ಎಲ್ಲರಲ್ಲು ಜ್ಞಾನ ತಿಳಿದಿರುವ ಗುರುವಾಗಿ ಯಾರೂ ಇಲ್ಲ. ದೇವತೆಗಳೆಲ್ಲರೂ ಮನುಷ್ಯರನ್ನು ಆಶ್ರಯಿಸಿ ಜ್ಞಾನವನ್ನು ತಿಳಿಯುತ್ತಿದ್ದಾರೆ. ಆದ್ದರಿಂದ ಜ್ಞಾನದ ಮೇಲೆ ಆಸಕ್ತಿ ಇರುವ ದೇವತೆಗಳು ಯಾವಾಗಲೂ ಸರಿಯಾದ ಗುರುವುಗಾಗಿ ಅನ್ವೇಷಿಸುತ್ತಾ ಇರುತ್ತಾರೆ. ಮನುಷ್ಯರು ಹೇಳುವ ಜ್ಞಾನ ಸರಿಯಾದುದೋ ಅಲ್ಲವೋ ಗುರುತಿಸುವ ಸಾಮರ್ಥ್ಯ ದೇವತೆಗಳಿಗೆ ಇರುತ್ತದೆ. ಆದ್ದರಿಂದ ಅವರು ಸರಿಯಾದ ಜ್ಞಾನಕ್ಕಾಗಿ ಅನ್ವೇಷಣೆ ಸಾಗಿಸುತ್ತಾರೆ. ಮನುಷ್ಯರ ಹಾಗೆ ಯಾವುದೋ ಒಂದು ಜ್ಞಾನದೊಂದಿಗೆ ಸರಿಪಡಿಸಿಕೊಳ್ಳುವುದಿಲ್ಲ. ಇದೆಲ್ಲವೂ ಮನುಷ್ಯನಾಗಿ ಇರುವವನಿಗೆ ತಿಳಿಯದಿದ್ದರೂ, ಅವನು ಸತ್ತುಹೋದ (ಅಕಾಲಮರಣವನ್ನು ಹೊಂದಿದ) ನಂತರ ತಾವು ಪೂಜಿಸಿರುವ ದೇವತೆಗಳಿರುವ ಸ್ಥಿತಿಯನ್ನು ನೋಡಿ ಇಷ್ಟುಕಾಲವು ಇವರನ್ನಾ ನಾವು ಪೂಜಿಸಿರುವುದೆಂದು ಮನುಷ್ಯರು ನಾಚಿಕೆ ಪಡುತ್ತಾರೆ.

**ಅವರ ಪ್ರಶ್ನೆ:- ನೀವು ಹೇಳಿರುವುದನ್ನನುಸರಿಸಿ ನೋಡಿದರೆ ಮಾನವರಲ್ಲಿ ನೀಗ್ರೋಜಾತಿ ಬೇರೆಯಾಗಿರುವಂತೆ, ದೇವರ ಸೃಷ್ಠಿಯಲ್ಲಿ ಮನುಷ್ಯರಿಗಿಂತಲೂ ಸ್ವಲ್ಪ ಭಿನ್ನವಾಗಿ ದೇವತೆಗಳಿದ್ದರೂ ಅವರಿಗು ಸಹ ಕರ್ಮ ಪ್ರಕಾರ ಗುಣಗಳು, ಪಾಪಪುಣ್ಯಗಳು, ಕಷ್ಟಸುಖಗಳು ಇವೆ. ಅಷ್ಟೇ ಅಲ್ಲದೇ ಮನುಷ್ಯರಲ್ಲಿ ಹೆಣ್ಣು ಗಂಡು ಜಾತಿಗಳಿರುವಂತೆ ದೇವತೆಗಳಲ್ಲಿ ಹೆಣ್ಣು ಗಂಡು ಜಾತಿಗಳು ಇವೆಯೆಂದು ತಿಳಿಯುತ್ತಿದೆ. ದೇವತೆಯ ಜಾತಿಯಲ್ಲಿನ ಹೆಂಗಸರನ್ನು ದೇವತೆಗಳೆಂದು**

**ಕರೆಯಬಹುದು. ಗಂಡುಜಾತಿಯನ್ನು ದೇವರುಗಳು ಎಂದು ಕರೆಯಬೇಕು. ಆದರೇ ದೇವತೆಗಳು, ದೇವರುಗಳು ಎಂದು ಕರೆಯದೆ ಆ ಜಾತಿಯೆಲ್ಲವನ್ನು ಸೇರಿಸಿ ದೇವತೆಗಳು ಎನ್ನುವುದು ಏಕೆ? ಎಂದು ಪ್ರಶ್ನಿಸುತ್ತಿದ್ದೇವೆ. ಇದಕ್ಕೆ ನಮಗೆ ಅರ್ಥವಾಗುವ ವಿವರವನ್ನು ಹೇಳಿರಿ?**

**ನಮ್ಮ ಉತ್ತರ:-** ಮನುಷ್ಯರಲ್ಲಿ ನೀಗ್ರೋ ಜಾತಿ ಪ್ರತ್ಯೇಕವಾಗಿ ಇರುವಂತೆ, ದೇವರು ತನ್ನ ಸೃಷ್ಟಿಯಲ್ಲಿ ಪ್ರತ್ಯೇಕವಾದ ದೇವತೆಗಳ ಜಾತಿಯನ್ನು ಸೃಷ್ಟಿಸಿದ್ದಾನೆ. ಮನುಷ್ಯರಲ್ಲಿ ಹೆಣ್ಣು ಗಂಡು ಎರಡು ವಿಧಗಳಿರುವ ಹಾಗೆಯೇ ದೇವತೆಗಳಲ್ಲಿ ಕೂಡಾ ಸ್ತ್ರೀ ಪುರುಷರಿದ್ದಾರೆ. ಆದರೇ ಮನುಷ್ಯರನ್ನು ಸ್ತ್ರೀ ಪುರುಷರೆಂದು ಬೇರೆಯಾಗಿ ಕರೆದಂತೆ ದೇವತೆಗಳನ್ನು ಸ್ತ್ರೀ ಪುರುಷರಾಗಿ ವಿಂಗಡಿಸಿ ಕರೆಯುವುದಿಲ್ಲ. ವಿಂಗಡಿಸಿ ಕರೆದರೇ ದೇವತೆಗಳೆಂದು ಹೆಂಗಸರನ್ನು, ದೇವರುಗಳೆಂದು ಗಂಡಸರನ್ನು ಕರೆಯಬೇಕಾಗಿರುತ್ತದೆ. ಆದರೇ **"ದೇವರು"** ಎಂಬ ಹೆಸರು ಒಂದೇ ಒಂದು ಪರಮಾತ್ಮಗೆ ಹೊರತು ಇತರರಿಗೆ ಇರುವುದಕ್ಕೆ ಸಾಧ್ಯವಿಲ್ಲ. ದೇವರೊಂದಿಗೆ ಸಮಾನವಾದವರು ಪ್ರಪಂಚದಲ್ಲಿ ಯಾರೂ ಇಲ್ಲ. ಆದ್ದರಿಂದ ದೇವತಾ ಜಾತಿಯಲ್ಲಿ ಒಬ್ಬ ಗಂಡಸನನ್ನು ದೇವರೆಂದು ಕರೆಯಬೇಕಾಗಿ ಬರುತ್ತದೆ. ಹೆಣ್ಣು ಗಂಡು ಎಲ್ಲರನ್ನು ಸೇರಿಸಿ ದೇವರುಗಳೆಂದು ಹೇಳಿದರೂ, ಗಂಡಸನನ್ನು ಕರೆಯುವಾಗ ಒಬ್ಬನನ್ನು ದೇವರೆಂದು ಹೇಳಬೇಕಾಗಿ ಬರುವುದರಿಂದ ಹಾಗೆ ಕರೆಯುವುದಕ್ಕೆ ಜ್ಞಾನಿಗಳು ಯಾರೂ ಇಷ್ಟಪಡುವುದಿಲ್ಲ. ದೇವರು ಎಂದರೇ ಹುಡುಕಿದರೂ ತಿಳಿಯದವನು, ಹುಡುಕಲ್ಪಡುವವನು ಎಂದು ಹೇಳಿಕೊಂಡಿದ್ದೇವೆ. ಆ ಭಾವನೆಗೆ ದೇವತಾ ಜಾತಿಯಲ್ಲಿನ ಯಾವ ಪುರುಷನು ಸರಿಹೋಗುವುದಿಲ್ಲ. ಅಷ್ಟೇ ಅಲ್ಲದೇ ದೈವತ್ವವಿಲ್ಲದಿರುವವರು ಆಧ್ಯಾತ್ಮಿಕ ಕಾನೂನಿನ ಪ್ರಕಾರ ಸ್ತ್ರೀಯಾಗಿ ಪರಿಗಣಿಸಲ್ಪಡುತ್ತಾರೆ. ದೇವತೆಯ ಜಾತಿಗೆ ಜ್ಞಾನವಿಲ್ಲ. ಅದಕ್ಕೆ ತಕ್ಕ ಜ್ಞಾನಶಕ್ತಿ ಇಲ್ಲ. ಆದ್ದರಿಂದ ಆ ಜಾತಿಯಲ್ಲಿ ಹೆಣ್ಣು, ಗಂಡು ಒಟ್ಟು ಪ್ರಕೃತಿ ಸಂಬಂಧವಾಗಿರುವುದಾಗಿ ಹೇಳುತ್ತಿದ್ದೇವೆ. ಆದ್ದರಿಂದ ದೇವತಾ ಜಾತಿಯನ್ನು ಒಟ್ಟಾರೆ ದೇವತೆಗಳೆಂದು ಹೇಳುತ್ತಿದ್ದೇವೆ. ಇದನ್ನನುಸರಿಸಿ ದೇವತೆಗಳು, ದೇವರು ಬೇರೆ ಬೇರೆಯೆಂಬ ಭಾವನೆ

ಉಂಟಾಗುವುದೆಂದು ಜ್ಞಾನಿಗಳಾದವರು ದೇವತಾ ಜಾತಿಯನ್ನು ದೇವತೆಗಳೆಂದು ಹೇಳುವುದಾಗಿದೆ. ಆದರೂ ಮಾನವನ ಅಜ್ಞಾನದಿಂದ ದೇವತೆಯನ್ನೇ ದೇವರಿಗಿಂತಲೂ ದೊಡ್ಡದಾಗಿ ತಿಳಿದು, ದೇವರನ್ನು ಬಿಟ್ಟು ದೇವತೆಗಳನ್ನು ಆಶ್ರಯಿಸಿದ್ದಾರೆ. ಅಂತಹ ಅಜ್ಞಾನದಿಂದ ಹೊರಬೀಳುವುದಕ್ಕೆ ದೇವತಾ ಜಾತಿಯೆಲ್ಲವನ್ನೂ ದೇವತೆಗಳೆಂದು ಹೇಳಿದ್ದಾರೆ.

**ಅವರ ಪ್ರಶ್ನೆ:– ಮನುಷ್ಯರು ದೇವತೆಗಳನ್ನು ಎಷ್ಟೋ ಜನರನ್ನು ನಮಸ್ಕರಿಸುತ್ತಿದ್ದಾರೆ. ದೇವತೆಗಳು ಎಷ್ಟೋ ಜನರಿದ್ದಾರೆ. ಅವರಿಗೆ ಮನುಷ್ಯರು ಭಕ್ತರಾಗಿ ಎಷ್ಟೋ ಜನರಿದ್ದಾರೆ. ಒಬ್ಬ ಮನುಷ್ಯ ಒಂದು ದೇವತೆಯನ್ನು ಕೆಲವು ದಿನಗಳು ನಮಸ್ಕರಿಸಿ ನಂತರ ಬೇರೆ ದೇವತೆಯನ್ನು ಆಶ್ರಯಿಸಿದರೇ ಮೊದಲು ನಮಸ್ಕರಿಸುತ್ತಿದ್ದ ದೇವತೆಗೆ ಕೋಪ ಬರುತ್ತದಾ? ನನ್ನನ್ನು ಬಿಟ್ಟು ಬೇರೆಯವರನ್ನು ನಮಸ್ಕರಿಸುತ್ತೀಯಾ! ಎಂದು ಆತನ ಮೇಲೆ ದ್ವೇಷ ಸಾಧಿಸುತ್ತಾರಾ? ಅಥವಾ ಯಾರ ಇಷ್ಟ ಅವರದೆಂದು ಬಿಟ್ಟುಹಾಕುತ್ತಾರಾ?**

**ನಮ್ಮ ಉತ್ತರ:–** ದೇವತೆಗಳಲ್ಲಿ ಸಹ ಜ್ಞಾನಿಗಳು, ಅಜ್ಞಾನಿಗಳು ಇಬ್ಬರೂ ಇದ್ದಾರೆಂದು ಹೇಳಿದ್ದೇವೆ ಅಲ್ಲವೇ! ಮನುಷ್ಯರು ತಮ್ಮನ್ನು ಬಿಟ್ಟು ಬೇರೆ ದೇವತೆಗಳನ್ನು ಆಶ್ರಯಿಸಿದರೇ ಕೆಲವರು ಯಾವುದಕ್ಕು ತಲೆಕೆಡಿಸಿಕೊಳ್ಳದಿದ್ದರೂ, ಕೆಲವರು ಮಾತ್ರ ಬಹಳ ಕೋಪವಿರುವವರಾಗಿ ದ್ವೇಷಸಾಧಿಸುತ್ತಾರೆಂದು ಕೆಲವು ಸಂಘಟನೆಗಳ ಮೂಲಕ ತಿಳಿದಿದೆ. ಅಷ್ಟೇ ಅಲ್ಲ ತಮಗೆ ಕಾಣಿಕೆಗಳು ಕೊಡುತ್ತೇವೆಂದು ಮಾತುಹೇಳಿ ನಂತರ ಕಾಣಿಕೆಗಳು ಕೊಡದವರ ಮೇಲೆ ಕೂಡಾ ದ್ವೇಷ ಸಾಧಿಸುತ್ತಾರೆಂದು ತಿಳಿದಿದೆ. ಮನುಷ್ಯರಲ್ಲಿ ಅನೇಕ ವಿಧಗಳ ಮನುಷ್ಯರು ಇರುವಹಾಗೆಯೇ ದೇವತೆಗಳಲ್ಲಿ ಕೂಡಾ ಬಹಳ ವಿಧಗಳ ಮನಸ್ತತ್ವಗಳು ಇರುವವರು ಇದ್ದಾರೆ. ಕೆಲವರು ಬಹಳ ಸೌಮ್ಯವಾಗಿರುತ್ತಾರೆ. ಕೆಲವರು ಬಹಳ ಕ್ರೂರವಾಗಿ ಇರುತ್ತಾರೆ. ಸ್ವಲ್ಪಕಾಲ ತಮ್ಮನ್ನು ನಮಸ್ಕರಿಸಿ ನಂತರ ಬೇರೆ ದೇವತೆಗಳನ್ನು ಆಶ್ರಯಿಸಿದರೇ ಅಲ್ಲಿಯವರೆಗೂ ನಮಸ್ಕರಿಸಿದ ದೇವತೆಗೆ ಕೋಪ ಬರುತ್ತದೆ, ಆ ಕೋಪದಿಂದ ದ್ವೇಷಸಾಧನೆ ಚರ್ಯವಾಗಿ

ಎಷ್ಟೋ ತೊಂದರೆಗಳ ಪಾಲು ಮಾಡುತ್ತಾರೆ. ಕೆಲವು ರೋಗಗಳ ರೂಪದಲ್ಲಿ ಮನುಷ್ಯರನ್ನು ಪೀಡಿಸುವುದು ನಡೆಯುತ್ತಿದೆ. ಪುನಃ ತಮ್ಮನ್ನು ನಮಸ್ಕರಿಸುವವರೆಗು ಅನೇಕ ರೂಪಗಳಲ್ಲಿ ತೊಂದರೆಗಳನ್ನು ಉಂಟುಮಾಡುತ್ತಾರೆ. ಹಾಗೆಯೇ ಕಾಣಿಕೆಗಳು ಕೊಡುತ್ತೇವೆಂದು ಹೇಳಿ ಮರೆತುಹೋದರೂ ಕೆಲವರು ದೇವತೆಗಳು ತಮ್ಮ ಕಾಣಿಕೆಗಳನ್ನು ಕೊಡುವವರೆಗು ಬಿಡದೆ ರೋಗಗಳ ರೂಪದಲ್ಲಿ ಹಿಂಸಿಸುವುದು ನಾವು ಪ್ರತ್ಯಕ್ಷವಾಗಿ ಬಹಳಕಡೆ ನೋಡಿದ್ದೇವೆ. ತಮ್ಮ ತಪ್ಪನ್ನು ತಿಳಿದುಕೊಂಡವರು ಯಾವಾಗಾದರೇ ಕಾಣಿಕೆಗಳನ್ನು ಸಲ್ಲಿಸುತ್ತಾರೋ ಆಗಲೇ ರೋಗಗಳು ಗುಣವಾಗಿರುವ ಸಂಘಟನೆಗಳನ್ನು ನಾವು ಬಹಳ ನೋಡಿದ್ದೇವೆ. ನಲವತ್ತು ವರ್ಷಗಳ ಕೆಳಗೆ ತಿರುಮಲದಲ್ಲಿರುವ ವೆಂಕಟೇಶ್ವರನಿಗೆ, ಈದಿನ ತಿರುಮಲದಲ್ಲಿರುವ ವೆಂಕಟೇಶ್ವರನಿಗೆ ಎಷ್ಟೋ ವ್ಯತ್ಯಾಸ ಇರುವುದೆಂದು ನಾವು ಹೇಳುತ್ತಿದ್ದೇವೆ. ಈದಿನ ಇರುವ ವೆಂಕಟೇಶ್ವರಸ್ವಾಮಿ ಎಷ್ಟೋ ಸೌಮ್ಯನು. ಹೇಳಿರುವ ಕಾಣಿಕೆಗಳನ್ನು ಕೊಡದಿದ್ದರೂ ಈತನು ಏನು ತಲೆಕೆಡಿಸಿಕೊಳ್ಳುವುದಿಲ್ಲ, ದ್ವೇಷ ಸಾಧಿಸಬೇಕೆಂದು ಅಂದುಕೊಳ್ಳುವುದಿಲ್ಲ. ಗತ ಕಾಲದಲ್ಲಿ ನಲವತ್ತುವರ್ಷಗಳ ಕೆಳಗಿರುವ ವೆಂಕಟೇಶ್ವರನು ವೃದ್ಧಾಪ್ಯವನ್ನು ಹೊಂದಿ ಸತ್ತುಹೋದ ನಂತರ ಪ್ರಸ್ತುತ ಈಗಿರುವ ವೆಂಕಟೇಶ್ವರನು ತಿರುಮಲ ಗುಡಿಯಲ್ಲಿ ಹುಟ್ಟುವುದು ನಡೆದಿದೆ. ಈಗಿರುವ ವೆಂಕಟೇಶ್ವರನಿಗೆ ಸುಮಾರು ನಲವತ್ತು (40) ವರ್ಷಗಳ ವಯಸ್ಸು ಇರಬಹುದು. ಈತನು ಎಷ್ಟೋ ಶಾಂತಸ್ವಭಾವದವನು, ಉತ್ತಮನು, ಯಾರಿಗೂ ತೊಂದರೆ ಕೊಡುವವನಲ್ಲ.

ಗತದಲ್ಲಿದ್ದ ವೆಂಕಟೇಶ್ವರ ಸ್ವಾಮಿ ಸುಮಾರು ನಾಲ್ಕುನೂರು (400) ವರ್ಷಗಳು ಬದುಕುವುದು ನಡೆದಿದೆ. ಆತನು ಕಾಣಿಕೆಗಳು ಕೊಡುತ್ತೇವೆಂದು ಕೊಡದೆ ಇರುವವರನ್ನು ಯಾರನ್ನೂ ಬಿಡದೆ ಇನ್ನೂ ಪೀಡಿಸಿ ಅವರಿಂದ ತನ್ನ ಕಾಣಿಕೆಗಳನ್ನು ವಸೂಲುಮಾಡಿಕೊಂಡಿದ್ದಾನೆ. ಅಂದಿನ ವೆಂಕಟೇಶ್ವರನನ್ನು ನೋಡಿ ಅಂದಿನ ಪ್ರಜೆಗಳು ಬಹಳ ಭಯ ಪಡುತ್ತಿದ್ದರು. ಎಂದಾದರೂ ವೆಂಕಟೇಶ್ವರ ಸ್ವಾಮಿಗೆ ಕಾಣಿಕೆ ಹಣವನ್ನು ಕೊಡುತ್ತೇವೆಂದು ಯಾರು ಹೇಳಿದರು ಹೇಳಿದ ಸಮಯಕ್ಕೆ ಸಲ್ಲಿಸುತ್ತಿದ್ದರು. ಒಂದುವೇಳೆ ಯಾರಾದರೂ ಸಲ್ಲಿಸುವುದರಲ್ಲಿ

ಒಂದು ತಿಂಗಳು ಆಲಸ್ಯವಾದರೂ ಅದಕ್ಕೆ ತಕ್ಕ ಬಡ್ಡಿಯೊಂದಿಗೆ ಸಹ ಕೊಡುತ್ತಿದ್ದರು. ಆದ್ದರಿಂದ ಅಂದಿನ ಕಾಲದಲ್ಲಿ ವೆಂಕಟೇಶ್ವರನನ್ನು ಬಡ್ಡೀಕಾಸಿನವನು ಎಂದು ಹೇಳುತ್ತಿದ್ದರು. ನಾನು ನೋಡಿರುವುದರಲ್ಲಿ ಒಬ್ಬ ವ್ಯಕ್ತಿ ಹಣವನ್ನು ಕಾಣಿಕೆಯಾಗಿ ಸಮರ್ಪಿಸುತ್ತೇನೆಂದು ಹೇಳಿದ ನಂತರ ಕೊಡುವುದು ಮರೆತು ಹೋದನು. ಒಂದು ವರ್ಷ ಕಾಲ ವೆಂಕಟೇಶ್ವರನು ಕಾಣಿಕೆಗಾಗಿ ಕಾದು ನೋಡಿ ಆಗಲೂ ಸಹ ಸಲ್ಲಿಸದವನಿಗೆ ಗುಂಡಿಗೆ ನೋವು ಬರುವಂತೆ ಮಾಡಿದನು. ಗುಂಡಿಗೆ ನೋವು ಇಂತಹ ಕಾರಣದಿಂದ ಬಂದಿದೆ ಎಂದು ನಾವು ಹೇಳಿದ ನಂತರ ಆ ಮನೆಯವರು ಕೂಡಲೇ ಕಾಣಿಕೆಗಳನ್ನು ಸಲ್ಲಿಸುವುದು ನಡೆಯಿತು. ಹಾಗೆ ಸಲ್ಲಿಸಿದ ಕೂಡಲೇ ಎದೆನೋವು ವಾಸಿಯಾಯಿತು. ಇಂತಹ ಸಂಘಟನೆಗಳಿಂದ ಬಡ್ಡಿ ಕಾಸಿನವನೆಂದು ಗತದಲ್ಲಿ ವೆಂಕಟೇಶ್ವರನು ಹೆಸರು ತಂದುಕೊಂಡಿದ್ದನು. ಈ ವಿಧವಾಗಿ ಗಮನಿಸಿ ನೋಡಿದರೇ ಗತಕಾಲದಲ್ಲಿ 40 ವರ್ಷಗಳ ಕೆಳಗೆ ಇರುವ ವೆಂಕಟೇಶ್ವರನಿಗೆ ಈದಿನ ಇರುವ ವೆಂಕಟೇಶ್ವರನಿಗೆ ಎಷ್ಟೋ ವ್ಯತ್ಯಾಸ ಇದೆಯೆಂದು ಹೇಳಬಹುದು.

**ಅವರ ಪ್ರಶ್ನೆ:– ಭೂಮಿಮೇಲೆ ಮನುಷ್ಯರು ಮಾಡುವ ತಪ್ಪುಗಳಿಗೆ ಫಲಿತವಾಗಿ ಪಾಪವು ಬರುತ್ತಿದೆಯೆಂದು ಹೇಳಿದಂತೆಯೇ ದೇವತೆಗಳು ಕೂಡಾ ಕೆಟ್ಟದು ಮಾಡಿದರೇ ಪಾಪ ಬರುತ್ತದೆ. ಒಳ್ಳೆಯದು ಮಾಡಿದರೇ ಪುಣ್ಯ ಬರುತ್ತದೆ ಎಂದು ನೀವು ಹೇಳಿರುವ ಪ್ರಕಾರ ತಿಳಿದಿದೆ. ಮನುಷ್ಯರು ಪಾಪಪುಣ್ಯಗಳನ್ನು ಭೂಮಿಮೇಲೆಯೇ ಅನುಭವಿಸುತ್ತಿದ್ದಾರೆಂದು ನೀವೇ ಹೇಳಿದ್ದೀರ. ಈಗ ದೇವತೆಗಳು ಮಾಡಿಕೊಂಡಿರುವ ಪಾಪಪುಣ್ಯಗಳನ್ನು ಅವರು ಎಲ್ಲಿ ಅನುಭವಿಸುತ್ತಾರೆಂದು ಕೇಳುತ್ತಿದ್ದೇವೆ.**

**ನಮ್ಮ ಉತ್ತರ:–** ಪಾಪ ಅನುಭವಿಸುವುದಕ್ಕೆ ಯಮಲೋಕ, ಸುಖವನ್ನು ಅನುಭವಿಸುವುದಕ್ಕೆ ಸ್ವರ್ಗಲೋಕ ಇದೆಯೆಂದು ಕೆಲವರು ಹೇಳಿದರೂ, ಅವು ಎಲ್ಲೋ ಇವೆಯೆಂದು ಅಂದುಕೊಳ್ಳುವುದು ತಪ್ಪಾಗುತ್ತದೆ. ಮನುಷ್ಯ ಅನುಭವಿಸುವ ಸ್ವರ್ಗ, ನರಕಗಳು ಎರಡೂ ಭೂಮಿಮೇಲೆಯೇ ಇವೆ. ಈ ವಿಷಯವನ್ನು

ಕುರಿತು ಗತದಲ್ಲಿ ಬಹಳಸಲ ಹೇಳಿದ್ದೇವೆ. ಎಲ್ಲಿ ಮನುಷ್ಯ ಸುಖವನ್ನು ಅನುಭವಿಸುತ್ತಿದ್ದಾನೋ, ಆಗ ಅಲ್ಲಿ ಆತನು ಸ್ವರ್ಗವನ್ನು ಹೊಂದಿದಂತೆಯೇ ಎಂದು ತಿಳಿಯಬೇಕು. ಅದೇ ರೀತಿ ಮನುಷ್ಯ ಎಲ್ಲಿ ಕಷ್ಟವನ್ನು, ನೋವನ್ನು ಅನುಭವಿಸುತ್ತಿದ್ದಾನೋ, ಆಗ ಅಲ್ಲಿ ಆತನು ನರಕವನ್ನು ಹೊಂದುತ್ತಿದ್ದಾನೆಂದು ತಿಳಿಯಬೇಕು. ಸ್ವರ್ಗ ನರಕಗಳನ್ನು ಅನುಭವಿಸುವ ಸಮಯವನ್ನು ಅನುಸರಿಸಿ ಅನುಭವಿಸುವ ಪ್ರಾಂತವನ್ನು ಅನುಸರಿಸಿ ಅಲ್ಲಿಯೇ ಇವೆಯೆಂದು ತಿಳಿಯುತ್ತಿದೆ. ದೇವತೆಗಳ ವಿಷಯಕ್ಕೆ ಬಂದರೆ ಮನುಷ್ಯರು ಯಾವ ವಿಧವಾಗಿ ಕಷ್ಟ ಸುಖಗಳನ್ನು, ನರಕ ಸ್ವರ್ಗಗಳಾಗಿ ಅನುಭವಿಸುತ್ತಿದ್ದಾರೋ ಅದೇ ವಿಧವಾಗಿ ದೇವತೆಗಳು ಸಹ ಅನುಭವಿ ಸುತ್ತಿದ್ದಾರೆಂದು ತಿಳಿಯುತ್ತಿದೆ. ಸ್ವರ್ಗನರಕಗಳನ್ನು ಅನುಭ ವಿಸುವುದರಲ್ಲಿ ಯಾರಿಗೂ ಯಾವ ರಿಯಾಯಿತಿ ಇಲ್ಲವೆಂದು ತಿಳಿಯಬೇಕು.

**ಅವರ ಪ್ರಶ್ನೆ:– ಈ ದಿನ ಭೂಮಿ ಮೇಲಿರುವ ಮುಖ್ಯವಾದ ಮೂರು ಮತಗಳಲ್ಲಿ ಹಿಂದೂ ಸಮಾಜದಲ್ಲಿ ಮಾತ್ರ ದೇವತೆಗಳಿದ್ದಾರೆಂದು ನಂಬಿ ಅವರನ್ನು ಆರಾಧಿಸುವವರು ಸಹ ಇದ್ದಾರೆ. ಉಳಿದ ಎರಡು ಸಮಾಜಗಳಲ್ಲಿ ದೇವತೆಗಳಿದ್ದಾರೆಂಬ ವಿಷಯವನ್ನೇ ಅವರು ನಂಬುವುದಿಲ್ಲ. ಮೇಲಾಗಿ ಅವರು ದೇವತೆಗಳೆನ್ನುವವರು ಇಲ್ಲವೇ ಇಲ್ಲ. ದೇವರು ಒಬ್ಬನು ಮಾತ್ರವೇ ಇದ್ದಾನೆಂದು ಹೇಳುತ್ತಿದ್ದಾರೆ. ಈ ವಿಧವಾಗಿ ದೇವತೆಗಳಿದ್ದಾರೆಂದು ಕೆಲವರು, ಇಲ್ಲವೆಂದು ಕೆಲವರು ವಾದಮಾಡುತ್ತಿದ್ದಾರೆ. ನೀವೇನೊ ದೇವತೆಗಳಿದ್ದಾರೆಂದು ನಿರ್ಧಾರಿಸಿ ಹೇಳುತ್ತಿದ್ದೀರ. ದೇವತೆಗಳಿದ್ದಾರೆಂದು ನಂಬಿ ಪೂಜಿಸಿದವರನ್ನೇ ಕೆಲವು ವಿಷಯಗಳಲ್ಲಿ ದೇವತೆಗಳು ಹಿಂಸಿಸುತ್ತಿದ್ದಾರೆಂದು ಹೇಳಿದ್ದೀರ. ಆದರೇ ದೇವತೆಗಳು ಇಲ್ಲವೆಂದು ಹೇಳುವವರ ತಂಟೆಗೆ ದೇವತೆಗಳು ಯಾಕೆ ಹೋಗಲಿಲ್ಲ. ತಾವಿರುವಹಾಗೆ ಅವರಿಗೆ ಯಾಕೆ ತಿಳಿಯುವಂತೆ ಮಾಡಲಿಲ್ಲ?**

**ನಮ್ಮ ಉತ್ತರ:–** ಮನುಷ್ಯರಲ್ಲಿ ಸೂಕ್ಷ್ಮಜ್ಞಾನ ತಿಳಿಯದವರು ಸೂಕ್ಷ್ಮವಾಗಿರುವ ದೇವತೆಗಳು ಇದ್ದಾರೆಂದು ತಿಳಿದುಕೊಳ್ಳದೇ ದೇವತೆಗಳನ್ನು ಅವರು ಇಲ್ಲವೇ ಇಲ್ಲ ಎಂದು ಹೇಳುತ್ತಿದ್ದಾರೆ. ನಮಗೆ ತಿಳಿಯದಷ್ಟು ಮಾತ್ರಕ್ಕೆ ಇರುವವರು ಇಲ್ಲದೇ ಹೋಗುವುದಿಲ್ಲ ಅಲ್ಲವೇ! ಆಕಾಶದಲ್ಲಿ ಎಷ್ಟೋ ಶಕ್ತಿಗಳು ಮನುಷ್ಯರಿಗೆ

ತಿಳಿಯದೇ ಇವೆ. ಆ ಶಕ್ತಿಗಳು ನಮಗೆ ತಿಳಿಯದಷ್ಟು ಮಾತ್ರಕ್ಕೆ, ಅವುಗಳನ್ನು ನಾವು ಇಲ್ಲ ಎಂದಷ್ಟು ಮಾತ್ರಕ್ಕೆ ಆ ಶಕ್ತಿಗಳು ತಮ್ಮ ಕೆಲಸಗಳನ್ನು ಮಾಡದಂತೆ ಬಿಡುವುದಿಲ್ಲ ಅಲ್ಲವೇ! ಮಾನವರ ಮೇಲೆ ಅನೇಕ ರೋಗಗಳ ರೂಪದಲ್ಲಿ ಬಂದು ಬೀಳುತ್ತಿವೆ. ಅವುಗಳ ನೋವನ್ನು ಮನುಷ್ಯರು ಅನುಭವಿಸುತ್ತಿದ್ದಾರೆ. ಮನುಷ್ಯರು ರೋಗಗಳ ಬಾಧೆಗಳನ್ನು ಅನುಭವಿಸುತ್ತಿದ್ದರೂ, ಅವುಗಳನ್ನು ಸರ್ವಸಾಧಾರಣವಾಗಿ ತೆಗೆದುಕೊಳ್ಳುತ್ತಿದ್ದಾರೆ ಹೊರತು ನಾವು ಅನುಭವಿಸುವ ರೋಗಗಳು ನಮಗೆ ತಿಳಿಯದ ಶಕ್ತಿಗಳು ಉಂಟುಮಾಡಿವೆ ಎಂದು ತಿಳಿಯಲಾರದೆ ಹೋಗಿದ್ದಾರೆ. ಅದೇ ವಿಧವಾಗಿ ಭೂಮಿಮೇಲೆ ನಮ್ಮೊಂದಿಗೆ ಸಹಜೀವನ ಸಾಗಿಸುವ ದೇವತೆಗಳನ್ನು ಕೆಲವರು ಗುರುತಿಸದಷ್ಟು ಮಾತ್ರಕ್ಕೆ ದೇವತೆಗಳು ತಮ್ಮ ಕೆಲಸಗಳನ್ನು ಮಾಡುವುದು ಬಿಡುವುದಿಲ್ಲ.

ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳಲ್ಲಿ ತಿಳಿಸಿದಾಗ ಒಂದು ಗ್ರಂಥದಲ್ಲಿ ಪ್ರಸ್ತಾವಿಸದ ಜ್ಞಾನವನ್ನು ಮತ್ತೊಂದು ಗ್ರಂಥದಲ್ಲಿ ಪ್ರಸ್ತಾವಿಸುವುದು ನಡೆದಿದೆ. ಪ್ರಥಮ ದೈವಗ್ರಂಥದಲ್ಲಿ ಮನುಷ್ಯನ ಶರೀರವು ಸ್ಥೂಲ, ಸೂಕ್ಷ್ಮವೆಂಬ ಎರಡು ಭಾಗಗಳಾಗಿ ಇದೆಯೆಂದು ತಿಳಿಸಿದ್ದರೂ, ಸೂಕ್ಷ್ಮ ಶರೀರವನ್ನೇ ದೆವ್ವ ಎನ್ನುತ್ತೇವೆಂದು ಅಲ್ಲಿ ಹೇಳಲಿಲ್ಲ. ನಂತರ ದ್ವಿತೀಯ ದೈವಗ್ರಂಥದಲ್ಲಿ ದೆವ್ವಗಳ ಪ್ರಸ್ತಾವನೆ ಬಂದಿದೆ. ಕೊನೆಯ ದೈವಗ್ರಂಥದಲ್ಲಿ ಕೂಡಾ ದೆವ್ವಗಳ ಪ್ರಸ್ತಾವನೆ ಬರಲಿಲ್ಲ. ಪ್ರಥಮ ದೈವಗ್ರಂಥದಲ್ಲಿಯೂ, ಕೊನೆಯ ದೈವಗ್ರಂಥದಲ್ಲಿಯೂ ದೆವ್ವಗಳನ್ನು ಕುರಿತು ಹೇಳದಷ್ಟು ಮಾತ್ರಕ್ಕೆ ಅವುಗಳನ್ನು ನಾವು ಇಲ್ಲವೆನ್ನಲಾರೆವು. ಅವು ಇವೆ ಆದುದರಿಂದ, ಮಧ್ಯ ದೈವಗ್ರಂಥದಲ್ಲಿ ಹೇಳುವುದಾಗಿದೆ. ಯೇಸು ಜೀವನದಲ್ಲಿ ಅವುಗಳ ಪ್ರಸ್ತಾವನೆ ಬಂದಿದೆ. ದೇವರು ತನ್ನ ಗ್ರಂಥಗಳಲ್ಲಿ ಜ್ಞಾನವನ್ನು ತಿಳಿಸುತ್ತಾ ಒಂದು ಮಾತನ್ನು ಹೇಳಿದ್ದಾನೆ. **"ನನ್ನ ಜ್ಞಾನವೆಲ್ಲವೂ ಸತ್ಯಸಮೇತವಾಗಿ ಇರುತ್ತದೆ"** ಎಂದು ಹೇಳಿದ್ದಾನೆ. ಖುರಾನ್ ಗ್ರಂಥದಲ್ಲಿ ಬಹಳ ವಾಕ್ಯಗಳಲ್ಲಿ (ಆಯತ್‌ಗಳಲ್ಲಿ) ನನ್ನ ಜ್ಞಾನ ಸತ್ಯಬದ್ಧವಾದುದು, ಸತ್ಯದಿಂದ ಕೂಡಿಕೊಂಡಿದೆ ಎಂದು ಹೇಳಿದ್ದಾನೆ. ಖುರಾನ್ ಗ್ರಂಥದಲ್ಲಿ ಸೂರಾ 5, ಆಯತ್ 48ನ್ನು ನೋಡೋಣ. **(5–48) "ಓ ಪ್ರವಕ್ತಾ! ನಾವು ಈ ಗ್ರಂಥವನ್ನು**

**ನಿನ್ನ ಮೇಲೆ ಸತ್ಯದೊಂದಿಗೆ ಅವತರಿಸುವಂತೆ ಮಾಡಿದ್ದೇವೆ. ಇದು ಪೂರ್ವ ಗ್ರಂಥಗಳಲ್ಲಿ ಉಳಿದಿರುವ ಸತ್ಯವನ್ನು ದೃಢಪಡಿಸುತ್ತದೆ ಮತ್ತು ಅವುಗಳಲ್ಲಿರುವ ಸತ್ಯಾಸತ್ಯಗಳನ್ನು ಪರಿಷ್ಕರಿಸುತ್ತದೆ"** ಎಂದು ಇದೆ.

ಸತ್ಯ ಎಂದರೇ ಇರುವುದು, ಅಸತ್ಯವೆಂದರೇ ಇಲ್ಲದಿರುವುದೆಂದು ಎಲ್ಲರಿಗೂ ತಿಳಿದಿದೆ. ಹಾಗೆಯೇ ಸತ್ಯವೆಂದರೇ ನಡೆಯುವುದು, ಅಸತ್ಯವೆಂದರೇ ನಡೆಯದಿರುವುದು ಎಂದು ಕೂಡಾ ಹೇಳಬಹುದು. ಇನ್ನು ಸತ್ಯವೆಂದರೇ ಶಾಸ್ತ್ರವೆಂದು, ಅಸತ್ಯವೆಂದರೇ ಅಶಾಸ್ತ್ರವೆಂದು ಕೂಡಾ ಹೇಳಬಹುದು. ದೇವರು ಹೇಳಿರುವುದೆಲ್ಲಾ ಸತ್ಯವೇ ಆಗಿರುವಾಗ ಮನುಷ್ಯ ಒಪ್ಪಿಕೊಂಡರೂ, ಒಪ್ಪಿಕೊಳ್ಳದಿದ್ದರೂ ಅದು ಪ್ರತ್ಯಕ್ಷವಾಗಿ ನಡೆದೇ ನಡೆಯುವುದಾಗಿ ಇರುತ್ತದೆ. ದೇವರ ಜ್ಞಾನ ಪ್ರತ್ಯಕ್ಷವಾಗಿ ನಡೆದಾಗ ಆತನ ಮಾತು ಸತ್ಯವೆಂದು ನಿರೂಪಿಸಲ್ಪಡುತ್ತದೆ. ಈದಿನ ಮನುಷ್ಯರು ತಮ್ಮ ಮಾತನ್ನು ದೇವರ ಮಾತುಗಳಲ್ಲಿ ಸೇರಿಸಿ ಇದು ದೇವರ ಜ್ಞಾನವೇ ಎಂದು ನಂಬಿಸುತ್ತಿದ್ದಾರೆ. ಆಗ ಯಾವುದು ದೇವರ ಜ್ಞಾನವೆಂದು ತಿಳಿಯುವುದಕ್ಕೆ ನಡೆದು ತೀರುವುದು ದೇವರ ಜ್ಞಾನವೆಂದು, ನಡೆಯದಿರುವುದು ದೇವರ ಜ್ಞಾನವಲ್ಲ ಎಂದು ತಿಳಿದುಹೋಗುತ್ತಿದೆ. ಯಾವುದು ನಿಜವಾದ ಜ್ಞಾನವೆಂದು ತಿಳಿಯುವುದಕ್ಕೆ ಇದು ನಿಜವಾದ ಜ್ಞಾನವೆಂದು ತಿಳಿಯುವುದಕ್ಕೆ ಪ್ರತ್ಯಕ್ಷವಾಗಿ ನಡೆಯುವುದೇ ಎಂದು ತಿಳಿಯಬೇಕು. ಅದೇ ವಿಧವಾಗಿ ಕೆಲವು ಸಮಾಜದವರು ದೇವತೆಗಳ ಜಾತಿ ಇದೆಯೆಂದು ಹೇಳುತ್ತಿದ್ದರೇ, ಇನ್ನು ಕೆಲವು ಸಮಾಜದವರು ದೇವತೆಗಳೇ ಇಲ್ಲವೆಂದು ಹೇಳುತ್ತಿದ್ದಾರೆ. ಯಾರು ಏನೆಂದರೂ ದೇವತಾ ಜಾತಿ ಮಾನವರ ಮೇಲೆ ಅಧಿಕಾರ ಚಲಾಯಿಸುವುದಕ್ಕೆ, ಮಾನವರನ್ನು ದೇವರ ಮಾರ್ಗದಿಂದ ತಪ್ಪಿಸಿ ತಮ್ಮ ಮಾರ್ಗದೊಳಗೆ ಸೆಳೆಯುವುದಕ್ಕೆ ತಯಾರಾಗಿದ್ದಾರೆ. ದೇವರೇ ಆ ವಿಧವಾಗಿ ಇರುವಂತೆ ದೇವತೆಗಳನ್ನು ಸೃಷ್ಟಿಸಿದ್ದಾನೆ. ದೇವತೆಗಳು ಭೂಮಿಮೇಲೆ ಇರುವುದು ವಾಸ್ತವವೇ ಆದರೂ, ಮನುಷ್ಯರ ಬುದ್ಧಿ ಗ್ರಾಹಿತ ಶಕ್ತಿಯನ್ನು ಅನುಸರಿಸಿ ದೇವತೆಗಳನ್ನು ಇದ್ದಾರೆಂದು ಕೆಲವರು, ಇಲ್ಲವೆಂದು ಕೆಲವರು ಹೇಳುತ್ತಿದ್ದಾರೆ. ದೇವರು ಯಾವ ಉದ್ದೇಶದಿಂದ ದೇವತೆಗಳನ್ನು ತಯಾರು ಮಾಡಿದ್ದಾನೋ,

ಆ ಉದ್ದೇಶದ ಪ್ರಕಾರವೇ ದೇವತೆಗಳು ನಡೆದುಕೊಳ್ಳುತ್ತಿದ್ದಾರೆ. ದೇವರ ಭಾವವನ್ನು ಅನುಸರಿಸಿ ಮನುಷ್ಯರ ಮೇಲೆ ಅವರ ಅಧಿಕಾರವನ್ನು ಚಲಾಯಿಸುತ್ತಿದ್ದಾರೆ. ನಮಗೆ ತಿಳಿದರೂ ತಿಳಿಯದೆ ಹೋದರೂ ದೇವತೆಗಳಿಂದ ಕೆಲವು ಕಷ್ಟಗಳನ್ನು ಮನುಷ್ಯರು ಅನುಭವಿಸುತ್ತಿದ್ದಾರೆ. ಒಬ್ಬ ರೌಡೀ ಹತ್ತು ಜನ ಮನುಷ್ಯರನ್ನು ಪೀಡಿಸಿದಂತೆ ಕೆಲವು ದೇವತೆಗಳು ಎಷ್ಟೋ ಜನರನ್ನು, ಎಷ್ಟೋ ವಿಧಗಳಾಗಿ ಹಿಂಸಿಸುತ್ತಿದ್ದಾರೆ. ಮನುಷ್ಯರು ಅನುಭವಿಸುವ ಕೆಲವು ಬಾಧೆಗಳು ದೇವತೆಗಳಿಂದ ಬಂದಿರುವವೆಂದು ಬಹಳಜನರಿಗೆ ತಿಳಿದಿಲ್ಲ. ದೇವತೆಗಳಿಲ್ಲ ಎನ್ನುವವರು ಕೂಡಾ ದೇವತೆಗಳಿಂದ ತೊಂದರೆ ಪಡುತ್ತಿದ್ದಾರೆ.

ಹೊರಗೆ ಪ್ರಪಂಚದಲ್ಲಿ ಇತರೆ ಮನುಷ್ಯರಾದ ದುರ್ಮಾರ್ಗರಿಂದ ಬಹಳಜನ ಪೀಡಿಸಲ್ಪಟ್ಟಹಾಗೆ, ಇತರ ದುರ್ಮಾರ್ಗದ ದೇವತೆಗಳಿಂದ ದೇವತೆಗಳಿಲ್ಲ ಎನ್ನುವವರು ಕೂಡಾ ಬಾಧೆಪಡುತ್ತಿದ್ದಾರೆ. ಹೊರಗೆ ಮನುಷ್ಯರಾದ ದುರ್ಮಾರ್ಗರು ಕಾಣಿಸುತ್ತಿರುವುದರಿಂದ ಅವರಿಂದ ನಾವು ತೊಂದರೆ ಪಡುತ್ತಿದ್ದೇವೆಂದು ಹೊರಗೆ ಹೇಳಿಕೊಳ್ಳುತ್ತಿದ್ದೇವೆ. ಆದರೇ ಕಾಣಿಸದ ರೌಡೀ ದೇವತೆಗಳಿಂದ ತೊಂದರೆ ಪಡುವವರು ಯಾರ ಮೇಲೂ ಆರೋಪಣೆ ಮಾಡಲಾರರು ಅಲ್ಲವೇ! ಕಷ್ಟ ಕೊಡುವವರು ಕಾಣಿಸದಿರುವಾಗ ಇಂಥವರಿಂದ ನಾನು ಕಷ್ಟ ಪಡುತ್ತಿದ್ದೇನೆಂದು ಕಷ್ಟಗಳು ಪಡುವವನಿಗೆ ತಿಳಿದಿಲ್ಲ. ಆದ್ದರಿಂದ ದೇವತೆಗಳನ್ನು ಕುರಿತು ಕೆಲವರು ಏನೂ ಹೇಳಲಾರದೆ ಹೋಗುತ್ತಿದ್ದಾರೆ. ಕೆಲವರು ದೇವತೆಗಳೇ ಇಲ್ಲವೆಂದು ಹೇಳುತ್ತಿದ್ದಾರೆ. ಭೂಮಿಮೇಲೆ ದೇವತೆಗಳಿಲ್ಲ ಎನ್ನುವವರು ಕೂಡಾ ದೇವತೆಗಳಿಂದ ಅನೇಕ ರೋಗಗಳನ್ನು ಅನುಭವಿಸುತ್ತಿದ್ದಾರೆ. ಅವರಿಂದ ಕೆಲವು ಕಡೆಗಳಲ್ಲಿ ಎಷ್ಟೋ ನೋವುಗಳನ್ನು ಅನುಭವಿಸುತ್ತಿದ್ದಾರೆ. ದೇವತೆಗಳು ಕೆಲವರು ಮನುಷ್ಯರ ಬಗ್ಗೆ ದಯೆ ದಾಕ್ಷಿಣ್ಯವಿಲ್ಲದೇ ಪ್ರವರ್ತಿಸುತ್ತಿದ್ದಾರೆ. ತಮ್ಮ ಕೆಲಸಕ್ಕಾಗಿ ಮನುಷ್ಯರನ್ನು ಬಲಿಪಶುಗಳಾಗಿ ಮಾಡುತ್ತಿದ್ದಾರೆ. ದೇವತೆಗಳು ಮನುಷ್ಯರ ಬಗ್ಗೆ ಅಸಭ್ಯವಾಗಿ ಪ್ರವರ್ತಿಸಿ, ಮನುಷ್ಯರಿಗೆ ಹಾನಿ ಉಂಟುಮಾಡಿರುವುದಕ್ಕೆ ಕೆಲವು ಸಂದರ್ಭಗಳಲ್ಲಿ ನಾವು ದೇವತೆಗಳನ್ನು ದಂಡಿಸುವುದು ನಡೆದಿದೆ. ಮನುಷ್ಯರ ಹಾಗೆ ಪ್ರವರ್ತಿಸಿ ಪಾಪಗಳನ್ನು

ಮೂಟೆಕಟ್ಟಿಕೊಳ್ಳಬೇಡ ಎಂದು ಎಚ್ಚರಿಸಿ ಹೇಳುವುದು ನಡೆದಿದೆ. ಆಗ ಕೆಲವರು ದೇವತೆಗಳು ನಮ್ಮ ಮಾತನ್ನು ಕೇಳಿ, ಅವರ ಪ್ರವರ್ತನೆಯನ್ನು ಬದಲಾಯಿಸಿಕೊಂಡವರು ಕೂಡಾ ಇದ್ದಾರೆ.

**ಅವರ ಪ್ರಶ್ನೆ:- ದೇವತೆಗಳಲ್ಲಿ ಎಷ್ಟೋಜನ ಅಕ್ರಮವಾಗಿ ಸಂಚರಿಸುವವರು, ದುರ್ಮಾಗರಾಗಿ, ರೌಡೀಗಳಾಗಿ ಇರುವವರು ಪ್ರಜೆಗಳನ್ನು ತೊಂದರೆಗೀಡು ಮಾಡುವಾಗ ಅವರಿಗಿಂತ ಕಡಿಮೆ ಜಾತಿಯಾದ ದೆವ್ವಗಳು ಕೂಡಾ ಕೆಲವು ಅದೇ ವಿಧವಾಗಿ ದುರ್ಮಾರ್ಗವಾಗಿ ಇರುತ್ತವೆಂದು ಅರ್ಥವಾಗುತ್ತಿದೆ. ಭೂಮಿಮೇಲೆ ಕೆಲವು ಸಮಾಜದವರು ದೇವತೆಗಳಿಲ್ಲ, ದೆವ್ವಗಳಿಲ್ಲ ಎಂದು ಹೇಳುತ್ತಿರುತ್ತಾರೆ. ಅವುಗಳ ಪ್ರಸ್ತಾವನೆ ಎಲ್ಲಿಯೂ ಅವರ ಮಾತುಗಳಲ್ಲಿ ಇರುವುದಿಲ್ಲ. ಅಂಥವರಲ್ಲಿ ಕೂಡಾ ಕೆಲವರು ದೆವ್ವಗಳಿವೆಯೆಂದು ಅವುಗಳಿಂದ ಕೆಲವು ಪೀಡೆಗಳು, ಬಾಧೆಗಳು ಉಂಟಾಗುತ್ತಿವೆ ಎಂದು ಹೇಳುತ್ತಾ, ಅವುಗಳ ನಿವಾರಣೆಗೆ ತಾಯತಗಳನ್ನು ಕಟ್ಟುತ್ತಾ ಸ್ವಲ್ಪ ಹಣವನ್ನು ಸಂಪಾದಿಸಿಕೊಳ್ಳುವವರು ಕೂಡಾ ಇದ್ದಾರೆ. ಮುಸ್ಲಿಮ್‌ರು ದೆವ್ವಗಳನ್ನು ದೇವತೆಗಳನ್ನು ನಂಬದಿದ್ದರೂ, ಅವು ಇಲ್ಲವೆಂದು ಹೇಳುತ್ತಿದ್ದರೂ ಕೆಲವರು ಮುಸ್ಲಿಮ್‌ರು ದೆವ್ವಗಳಿಗೆ ಮಂತ್ರಗಳು ಹೇಳುತ್ತಾ, ತಾಯತ್ತುಗಳನ್ನು ಕಟ್ಟುವವರು ಇದ್ದಾರೆ. ಇದನ್ನನುಸರಿಸಿ ಮುಸ್ಲಿಮ್‌ರು ದೇವತೆಗಳನ್ನು ದೆವ್ವಗಳನ್ನು ಇವೆಯೆಂದು ನಂಬುತ್ತಿದ್ದಾರಾ ಅಥವಾ ಇಲ್ಲವಾ? ಹೇಗೆ ಲೆಕ್ಕಿಸಿಕೊಳ್ಳಬೇಕು?**

**ನಮ್ಮ ಉತ್ತರ:-** ಮುಸ್ಲಿಮ್‌ರು ನಾವು ಜ್ಞಾನಿಗಳೆಂದು ಹೇಳುವವರೆಲ್ಲಾ ದೇವತೆಗಳನ್ನು ದೆವ್ವಗಳನ್ನು ಇಲ್ಲ ಎನ್ನುತ್ತಿದ್ದಾರೆ. ಜ್ಞಾನ ತಿಳಿಯದವರು ಇವುಗಳನ್ನು ಕುರಿತು ಏನೂ ಮಾತನಾಡುತ್ತಿಲ್ಲ. ಆದರೇ ಕೆಲವರು ಅಪರೂಪವಾಗಿ ದೆವ್ವಗಳಿಗೆ ತಾಯತಗಳು ಕಟ್ಟುವುದು ಮಾಡುತ್ತಿದ್ದಾರೆ. ದೇವರ ಸೃಷ್ಠಿ ಕೆಲವರಿಗೆ ಅರ್ಥವಾಗಿರಬಹುದು, ಕೆಲವರಿಗೆ ಅರ್ಥವಾಗದೆ ಹೋಗಿರಬಹುದು. ಅರ್ಥವಾಗದಿದ್ದರೂ ಅವರು ಕಾಣಿಸುವ ಸ್ಥೂಲವನ್ನೇ ನಂಬುತ್ತಾ ಕಾಣಿಸದ ಸೂಕ್ಷ್ಮವನ್ನು ಇಲ್ಲವೆನ್ನುತ್ತಿದ್ದಾರೆ. ಸೂಕ್ಷ್ಮವು ಇರುವುದು ಇಲ್ಲದಿರುವುದು ಮನುಷ್ಯರ ನಿರ್ಣಯದ ಮೇಲೆ ಆಧಾರಪಟ್ಟಿಲ್ಲ ಆದರೇ, ದೇವರ ಸೃಷ್ಠಿ ಮೇಲೆ, ದೇವರ ಜ್ಞಾನದ ಮೆಲೆ ಆಧಾರಪಟ್ಟಿದೆ. ಎಷ್ಟೋ ಸತ್ಯ ಸಂಘಟನೆಗಳಲ್ಲಿ ದೇವತೆಗಳು,

దెవ్వగళు ఇబ్బరూ ఇద్దారెందు తిళిదుహోగిదె. దేవతెగళు మనుష్యర బగ్గె దౌర్జన్యవాగి, దుర్మార్గవాగి ప్రవర్తిసుత్తిద్దారెందు తిళియుత్తిదె. అదర హిందె కారణ కర్మవే ఆదరూ, హొరగె దేవతెగళు ఆచరణెయల్లి మనుష్యర మేలె అధికార చలాయిసుత్తా, మనుష్యరన్ను పీడిసి హింసిసుత్తిద్దారె. దేవతెగళన్ను నోడిద దెవ్వగళు నావు నిమగింత ఏనూ కడిమె ఎన్నువంతె ప్రవర్తిసుత్తా, దేవతెగళహాగె ఇవరు సహ మనుష్యర మేలె దౌర్జన్యవాగి ప్రవర్తిసుత్తిద్దారె. దేవతెగళు దెవ్వగళిల్ల ఎన్నువవరన్నాగలీ, ఇవె ఎన్నువవరన్నాగలీ యారన్నూ అవరు బిడుత్తిల్ల. దేవతెగళు, దెవ్వగళు ఇల్ల ఎన్నువవరన్ను స్వల్ప హెచ్చాగియే వేదిసుత్తిద్దారెందు తిళియుత్తిదె.

ఈదిన భూమి మేలె రోగగళ రూపదల్లి ఇరువవెల్లా కాణిసద సూక్ష్మగళిందలే బరువవాగిద్దరూ, అవుగళల్లి ఖగోళదల్లిన భూతగళింద, గ్రహగళింద కెలవు రోగగళు బరుత్తిద్దరూ, కెలవు రోగగళు మాత్ర భూమిమేలె సంచరిసువ దేవతెగళింద, దెవ్వగళింద బరుత్తివె. మనుష్యరిగె రోగదంతె బరువ పార్శ్వవాయు అథవా పక్షవాత వాయు ఎన్నువుదు ఒందు కడె కాలు, కైగళు బిద్దు హోగువ రోగవన్ను బహళజన నోడిరుత్తేవె. ఆ రోగవన్ను కురితు కేళిదరే మెదుళినల్లి నాడీ వ్యవస్థె సరియాగిల్లద కారణదింద ఆ రోగ బరుత్తదె ఎందు వైద్యరు హేళుత్తిద్దారె. ఆదరే మెదుళినల్లి అత్యంత భద్రవాగిరువ నాడీ వ్యవస్థె హేగె సరియాగిల్లవో హేళలారదె హోగుత్తిద్దారె. ఆ రోగద హిందె శేకడ ఇప్పత్తైద (25) రష్టు ఖగోళదల్లిన భూతగళు, గ్రహగళు కారణవాదరే, శేకడ ఎప్పత్తైద (75) రష్టు భూగోళదల్లిన దేవతెగళు, దెవ్వగళు కారణవాగుత్తివెయెందు బహుశః యారిగూ తిళిదిల్లవెందుకొళ్ళుత్తేనె. పక్షవాతవన్ను కురితు ఆ రోగవు యారింద బరుత్తిదెయో, యారింద శేకడ ఎష్టు బరుత్తిదెయో

1980ನೇ ವರ್ಷದಲ್ಲಿಯೇ ನಾವು ಹೇಳಿದ್ದೇವೆ. 1970ರಿಂದ ನಾವು ನಡೆಸಿದ ಪರಿಶೋಧನೆಯಲ್ಲಿ ದೇವತೆಗಳು, ದೆವ್ವಗಳ ವಿಷಯವನ್ನು, ಭೂತಗಳು, ಗ್ರಹಗಳ ವಿಷಯವನ್ನು ತಿಳಿಯಲಾಗಿ 1980ನೇ ವರ್ಷದಲ್ಲಿಯೇ ಈಗ ಹೇಳಿರುವ ಪಕ್ಷವಾತ ವಿಷಯವನ್ನು ಆಗಲೇ ನಾವು ಹೇಳಿದ್ದೇವೆ.

ಪಾರ್ಶ್ವ ವಾಯು ಪೂರ್ತಿ ಸೂಕ್ಷ್ಮವಾಗಿ ನಮಗೆ ತಿಳಿಯದಂತೆ ನಮ್ಮೊಂದಿಗೆ ಭೂಮಿಮೇಲೆ ನಿವಾಸಿಸುವ ದೇವತೆಗಳಿಂದ, ದೆವ್ವಗಳಿಂದ ಶೇಕಡ 75 ರಷ್ಟು ಉಂಟಾಗುತ್ತಿದೆಯೆಂದರೇ ಯಾರೂ ನಂಬಲಾರದ ಸ್ಥಿತಿಯಾದರೂ ನಡೆಯುತ್ತಿರುವ ಸತ್ಯ ಅಷ್ಟೇ ಎಂದು ಹೇಳುತ್ತಿದ್ದೇವೆ. ಆ ಒಂದು ರೋಗವೇ ಅಲ್ಲದೇ ಈ ದಿನ ಭಯಂಕರ ರೋಗಗಳಾಗಿ, ದೊಡ್ಡ ರೋಗಗಳಾಗಿ ಹೆಸರು ಪಡೆದಿರುವ ಏಡ್ಸ್ (H.I.V) ರೋಗ, ಕ್ಯಾನ್ಸರ್ ಮೊದಲಾದ ರೋಗಗಳು ಎಷ್ಟೋ ಭೂತಗಳಿಂದ ಗ್ರಹಗಳಿಂದ ಬರುವವೆಂದೂ, ಉಳಿದ ಎಷ್ಟೋ ರೋಗಗಳು ದೇವತೆಗಳು, ದೆವ್ವಗಳಿಂದ ಬರುತ್ತಿವೆಯೆಂದು ಬಹಳ ಜನರಿಗೆ ತಿಳಿದಿಲ್ಲ. ಈ ರೋಗಗಳು ಮೇಲ್ನೋಟಕ್ಕೆ ಕ್ರಿಮಿಗಳಿಂದ ಬರುತ್ತಿವೆಯೆಂದು ಡಾಕ್ಟರುಗಳು ಹೇಳುತ್ತಿದ್ದರೂ, ಆ ಕ್ರಿಮಿಗಳ ಹಿಂದೆ ಕೆಲಸ ಮಾಡುವುದು ಕೆಲವು ಅಗೋಚರ ಶಕ್ತಿಗಳೆಂದು ಬಹಳ ಜನರಿಗೆ ತಿಳಿಯದೆ ಹೋಗಿದೆ. ಕಲರಾ, ಪ್ಲೇಗು, ಡೆಂಗ್ಯೂ ರೋಗಗಳು ದೇವತೆಗಳಿಂದ ಬರುತ್ತಿವೆಯೆಂದು, ಮಂಕು ಹುಕ್ಕು ಎಂಬ ಚರ್ಮ ರೋಗಗಳು ದೆವ್ವಗಳಿಂದ ಬರುವವೆಂದು ನಮಗೆ ತಿಳಿದಿಲ್ಲ. ಕಲರಾ ಒಂದು ದೇವತೆಯೆಂದು ತಿಳಿದ ಷಿರಿಡೀ ಸಾಯಿಬಾಬಾ, ಪಕ್ಕದ ಊರಿನಲ್ಲಿರುವ ಕಲರಾವನ್ನು ತಮ್ಮ ಊರಿನೊಳಗೆ ಬರಬೇಡವೆಂದು ಊರಿನೊಳಗೆ ಬರುವ ದಾರಿಯಲ್ಲಿ ರೊಟ್ಟಿಹಿಟ್ಟಿನಿಂದ ಅಡ್ಡಗೆರೆ ಗೀಚಿದಂತೆ ಹಿಟ್ಟನ್ನು ಹಾಕುವುದರಿಂದ, ಅಲ್ಲಿಯವರೆಗು ಬಂದ ಕಲರಾ ಎಂಬ ದೇವತೆ ಸಾಯಿಬಾಬಾರವರು ಹಿಟ್ಟಿನಿಂದ ಹಾಕಿರುವ ಗೆರೆಯನ್ನು ನೋಡಿ ಅಷ್ಟು ದೊಡ್ಡ ವ್ಯಕ್ತಿ ಹೇಳಿದ ಮಾತನ್ನು ಮೀರುವುದು ಒಳ್ಳೆಯದಲ್ಲವೆಂದು ತಿಳಿದು ಹಿಂತಿರುಗಿ ಹೋಯಿತು. ಇನ್ನು ಆ ಊರಿನೊಳಗೆ ಬರಲಿಲ್ಲ. ಇದು ಚರಿತ್ರೆಯಲ್ಲಿ ಎಲ್ಲರಿಗೂ ತಿಳಿದಿರುವ ವಿಷಯವೇ. ಇದನ್ನನುಸರಿಸಿ ದೇವತೆಗಳು, ದೆವ್ವಗಳು ಹೇಗೆ ಪ್ರವರ್ತಿಸುತ್ತಿವೆಯೋ ತಿಳಿಯಬಲ್ಲರು.

**ಅವರ ಪ್ರಶ್ನೆ:– ದೇಶದಲ್ಲಿ ಎಷ್ಟೋ ಜನರಿಗೆ ತೊಂದರೆ ಕೊಟ್ಟು ರೋಗಗಳ ಪಾಲು ಮಾಡಿರುವ ಆಕಾಶದಲ್ಲಿರುವ ಭೂತಗಳು, ಗ್ರಹಗಳು ಭೂಮಂಡಲದಲ್ಲಿರುವ ದೇವತೆಗಳು, ದೆವ್ವಗಳು ಮನುಷ್ಯರಲ್ಲಿ ಒಬ್ಬರಾದ ನಿಮ್ಮನ್ನು ಏನು ಅನ್ನದಂತೆ, ಏನು ಮಾಡದಂತೆ ಬಿಟ್ಟಿರುತ್ತವಾ? ಎಂದು ಕೆಲವರಿಗೆ ಪ್ರಶ್ನೆ ಬಂದಿದೆ. ಅವರಿಂದ ನೀವು ಹಿಂಸಿಸಲ್ಪಡಲಿಲ್ಲವೇ? ಹೀಗೆ ಕೇಳಿದೆನೆಂದು ಏನೂ ಅಂದುಕೊಳ್ಳಬೇಡಿ ಇದು ಉಳಿದ ಪ್ರಜೆಗಳಿಗೇ ಅಲ್ಲದೇ ನಮಗೂ ಕೂಡಾ ಬಂದಿರುವ ಪ್ರಶ್ನೆಯಾಗಿದೆ. ಆದ್ದರಿಂದ ಕೇಳುತ್ತಿದ್ದೇವೆ.**

**ನನ್ನ ಉತ್ತರ:–** ಒಳ್ಳೆಯ ಬುದ್ಧಿ ಇರುವವರು ಒಳ್ಳೆಯದಾಗಿ, ಕೆಟ್ಟ ಬುದ್ಧಿ ಇರುವವರು ಕೆಟ್ಟದಾಗಿ ಪ್ರವರ್ತಿಸುವುದು ಸಹಜವಾಗಿ ನಡೆಯುವ ಕೆಲಸ. ಕಾಣಿಸುವ ಮನುಷ್ಯರಲ್ಲಿ ಎಂತಹ ಪ್ರತ್ಯೇಕತೆ ಇಲ್ಲದ ಸಾಧಾರಣ ಮನುಷ್ಯನಾಗಿ ನಾನು ಇರುತ್ತಿದ್ದನು. ಗತದಲ್ಲಿನ ನನ್ನ ಚರಿತ್ರೆಯನ್ನು ಕುರಿತು ಸ್ವಲ್ಪವೂ ಮರೆಮಾಚದೆ ನಾನು **"ಗುತ್ತಾ"** ಎಂಬ ಗ್ರಂಥದಲ್ಲಿ ಹೇಳಿದ್ದೇನೆ. ಚಿಕ್ಕವಯಸ್ಸಿನಲ್ಲಿ ದೇವತೆಗಳ ದೃಷ್ಠಿ, ದೆವ್ವಗಳ ದೃಷ್ಠಿ ಯಾರ ಮೇಲೆಯೂ ಅಷ್ಟಾಗಿ ಇರುವುದಿಲ್ಲ. ಆದ್ದರಿಂದ ಆಗ ಅವರಿಂದ ನನಗೆ ಯಾವ ತೊಂದರೆ ಆಗಲಿಲ್ಲ. ನಾನು ಯುಕ್ತ ವಯಸ್ಸಿಗೆ ಬರುವಷ್ಟರಲ್ಲಿ ಹಣವಿಲ್ಲದವನಿಗೆ ಮನುಷ್ಯರ ಮಧ್ಯದಲ್ಲಿ ಬೆಲೆ ಇರುವುದಿಲ್ಲವೆಂದು ತಿಳಿಯಿತು. ಆಗಾಗಲೇ ಎಷ್ಟೋ ಜನ ಮನುಷ್ಯರು ನಮ್ಮೊಂದಿಗೆ ಅಗೌರವವಾಗಿ ಮಾತನಾಡುವುದು, ಸಂಬಂಧಿಕರೆಲ್ಲರೂ ನೀಚವಾಗಿ ನೋಡುವುದು ನಡೆಯುತ್ತಿತ್ತು. ಆಗ ಸ್ಥೂಲ ಪ್ರಪಂಚ ಚೆನ್ನಾಗಿ ಅರ್ಥವಾಯಿತು. ಆದರೇ ಆ ದಿನ ಯಾವ ಜ್ಞಾನವಿಲ್ಲದ ನನಗೆ ಸೂಕ್ಷ್ಮ ಪ್ರಪಂಚವನ್ನು ಕುರಿತು ಏನೂ ತಿಳಿದಿಲ್ಲ. ಅಂತಹ ಸ್ಥಿತಿಯಲ್ಲಿ ನಾನಿರುವ ಊರಿಗೆ ಪಕ್ಕದಲ್ಲಿರುವ ಹಳ್ಳಿಯಿಂದ ಗುಂಡಿಗೆಯಲ್ಲಿ ನೋವಿರುವ ಒಬ್ಬ ಹೆಂಗಸನ್ನು ಆಕೆಯ ಅಣ್ಣಂದಿರು ಮತ್ತು ಗಂಡ ನಾನಿರುವ ಊರಿನಲ್ಲಿಯೇ ಆಸ್ಪತ್ರೆಗೆ ತಂದರು. ಅವರು ಬಡವರಾದ್ದರಿಂದ ಸರ್ಕಾರಿ ಆಸ್ಪತ್ರೆಗೆ ಹೋಗಿದ್ದಾರೆ. ಅಲ್ಲಿ ಒಂದು ವಾರ ದಿನವಿದ್ದರೂ ಆ ನೋವು ಆಕೆಗೆ ವಾಸಿಯಾಗಲಿಲ್ಲ. ಆಕೆಯ ಅಣ್ಣಂದಿರು ನನಗೆ ಸ್ವಲ್ಪ ಪರಿಚಯವಿರುವುದರಿಂದ ಆ ವಿಷಯವೆಲ್ಲಾ ನನಗೆ ಹೇಳುವುದು

ನಡೆಯಿತು. 1970ನೇ ವರ್ಷದಿಂದ ನಾನು ವೈದ್ಯವನ್ನು ಕುರಿತು ಮನುಷ್ಯನ ಆರೋಗ್ಯವನ್ನು ಕುರಿತು ಸ್ವಲ್ಪ ನನ್ನ ಸ್ವಂತಪರಿಶೋಧನೆ ಸಾಗಿಸುತ್ತಿದ್ದೆನು. ಆದ್ದರಿಂದ ಗುಂಡಿಗೆಯಲ್ಲಿ ನೋವಿರುವ ಆಕೆಯ ವಿಷಯವನ್ನು ಹೇಳಿ ವಾರದಿನಗಳು ಆಸ್ಪತ್ರೆಯಲ್ಲಿದ್ದರೂ ವಾಸಿಯಾಗಲಿಲ್ಲವೆಂದು ಹೇಳುವುದರಿಂದ ನಾನು ಸ್ವಲ್ಪ ಆಲೋಚಿಸಿ ನನ್ನ ಪರಿಶೋಧನೆ ನಿಮಿತ್ತ ಆಕೆಯನ್ನು ನನ್ನ ಬಳಿ ಕರೆದು ಕೊಂಡುಬನ್ನಿ ಎಂದು ಹೇಳುವುದು ನಡೆಯಿತು. ಆ ದಿನ ನಾನು ಆಕೆಯ ರೋಗವನ್ನು ವಾಸಿಮಾಡುವುದಕ್ಕೆ ಬನ್ನಿರೆಂದು ಹೇಳಲಿಲ್ಲ. ರೋಗವನ್ನು ಕುರಿತು ತಿಳಿದುಕೊಳ್ಳುವ ನಿಮಿತ್ತವಾಗಿ ಮಾತ್ರವೇ ಬನ್ನಿರೆಂದು ಹೇಳುವುದು ನಡೆಯಿತು.

ಆಸ್ಪತ್ರೆಯಲ್ಲಿ ಹೇಗೂ ವಾಸಿಯಾಗಲಿಲ್ಲ, ಇನ್ನು ಮನೆಗೆ ಹೋಗಬೇಕೆಂದು ನಿರ್ಣಯಿಸಿಕೊಂಡವರು, ನನ್ನ ಮಾತನ್ನು ಕೇಳಿ ನನ್ನ ಬಳಿಗೆ ತಂದರು. ಆ ದಿನ ಅವರಿಗೂ ಸಹ ನಾನು ವೈದ್ಯ ಮಾಡುವವನಲ್ಲವೆಂದು ತಿಳಿದಿತ್ತು. ಆಕೆಯ ಅಣ್ಣ ನನಗೆ ಪರಿಚಯಸ್ಥನಾದ್ದರಿಂದ, ಅವರು ಕೂಡಾ ಆಸ್ಪತ್ರೆ ಬಿಟ್ಟು ಹೋಗಬೇಕೆಂದು ಅಂದುಕೊಂಡಿರುವುದರಿಂದ, ಅವರ ಊರಿಗೆ ಸಾಯಂಕಾಲ ಬಸ್ಸು ಇರುವುದರಿಂದ ಅಲ್ಲಿಯವರೆಗು ನಮ್ಮ ಮನೆಯಲ್ಲಿ ಇರಬಹುದು ಎಂದುಕೊಂಡು ಅವರು ಬಂದರು. ಆಗ 1974ನೇ ವರ್ಷ ಅಂದುಕೊಳ್ಳುತ್ತೇನೆ. ಆಗ ನನಗೆ 24 ವರ್ಷವಯಸ್ಸು ಬಂದಿತ್ತು. ಅಲ್ಲಿಯವರೆಗು ಬಾಲ್ಯದಲ್ಲಿದ್ದ ನಾನು ಯವ್ವನಕ್ಕೆ ಬಂದಿರುವುದರಿಂದ ನನ್ನಲ್ಲಿನ ವ್ಯಕ್ತಿತ್ವ ವಿಕಾಸ ವೃದ್ಧಿ ಆಗುತ್ತಿರುತ್ತದೆ. ಆ ದಿನ ಬೆಳಗ್ಗೆ 9 ಗಂಟೆಗೆ ಅವರು ನಮ್ಮ ಮನೆಗೆ ಬಂದ ನಂತರ 9.30 ನಿಮಿಷಗಳಿಗೆ ನಾನು ಗುಂಡಿಗೆ ನೋವಿರುವ ಆಕೆಯನ್ನು ನನ್ನ ಮುಂದೆ ಕುಳಿತುಕೊಳ್ಳಲು ಹೇಳಿ, ಆಕೆಯ ನೋವನ್ನು ಕುರಿತು ತಿಳಿದುಕೊಳ್ಳುವುದಕ್ಕೆ ನೋವು ಯಾವಾಗ ಬಂದಿದೆ, ಹೇಗೆ ಬಂದಿದೆ, ಮೊದಲು ಹೇಗಿರುತ್ತಿತ್ತು, ನಂತರ ಹೇಗಿದೆ? ಎಂದು ಪ್ರಶ್ನಿಸಿ ಆಕೆ ಹೇಳುವುದೆಲ್ಲಾ ಕೇಳುತ್ತಾ, ಒಂದು ಸಲ ನಿನ್ನ ನೋವು ಎಲ್ಲಿದೆಯೋ ಹೇಳು ಎಂದು ಕೇಳಿದೆನು. ಆಗ ಆಕೆ ಚೆನ್ನಾಗಿ ಗಮನಿಸಿ, ಇಲ್ಲಿಯವರೆಗು ಇರುವ ನೋವು ನೀವು ಎಲ್ಲಿದೆಯೋ ಹೇಳು ಎನ್ನುತ್ತಲೇ ಹೋಗಿದೆ ಎಂದು ಹೇಳಿದಳು. ಆ ಮಾತು ಕೇಳಿದ

ಅಲ್ಲಿರುವ ಐದಾರು ಜನರೊಂದಿಗೆ ಸಹ ನಾನು ಕೂಡಾ ಆಶ್ಚರ್ಯ ಪಟ್ಟೆನು. ಒಂದುಬಾರಿ ಚೆನ್ನಾಗಿ ನೋಡಿಕೊಂಡು ಹೇಳಿರೆಂದು ಕೇಳಿದೆನು. ಆಗ ಕೂಡಾ ಆಕೆ ಚೆನ್ನಾಗಿ ಗಮನಿಸಿಕೊಂಡು ಏನು ಇಲ್ಲವೆಂದು ಹೇಳುವುದು ನಡೆದಿದೆ. ನನ್ನ ಜೀವನದಲ್ಲಿ ಅದೇ ಮೊದಲ ಅನುಭವವಾದ್ದರಿಂದ ಆ ವಿಷಯ ನನಗು ಕೂಡಾ ಅರ್ಥವಾಗಲಿಲ್ಲ. ಆಕೆಗೆ ನೋವು ಇದ್ದಕ್ಕಿದ್ದಹಾಗೆ ಇಲ್ಲದಂತೆ ಹೋಗಿರುವುದರಿಂದ ಆಕೆಯ ಗಂಡನಿಗೆ, ಅಣ್ಣನಿಗೆ ಇಬ್ಬರಿಗೂ ಸಂತೋಷ ವಾಯಿತು. ಇಲ್ಲೇ ಒಂದು ದಿನ ಇದ್ದು ನಾಳೆ ಹೋಗುತ್ತೇವೆ ಎಂದು ಅವರು ಕೇಳಿದಾಗ ಸರಿಯೆಂದು ನಾನು ಹೇಳಿ ನನ್ನ ಕೆಲಸ ನಿಮಿತ್ತ ಹೊರಗೆ ಹೊರಟುಹೋಗಿ ಸಾಯಂಕಾಲ ಬಂದೆನು.

ಸಾಯಂಕಾಲ ಆರು ಗಂಟೆಯ ಸಮಯದಲ್ಲಿ ಆಕೆ ಸ್ವಲ್ಪ ನೋವಿನಿಂದ ಬಳಲುತ್ತಾ ಆ ವಿಷಯ ನಮಗೆ ಹೇಳುವುದಾಗಿದೆ. ಆಗ ನಾನು ಆಕೆಯನ್ನು ನನ್ನ ಮುಂದೆ ಕುಳಿತುಕೊಳ್ಳಲು ಹೇಳಿದಾಗ, ಆಕೆ ಹಾಗೆಯೇ ಕುಳಿತುಕೊಂಡು ಅಲ್ಲಿಯವರೆಗು ನನ್ನನ್ನು ಯಾರೂ ಕರೆಯದ **"ಸ್ವಾಮೀ"** ಎಂಬ ಪದವನ್ನು ಹೇಳುತ್ತಾ ಮಾತನಾಡುವುದು ನಡೆಯಿತು. ಆಗ ಮಾತನಾಡುವ ಆಕೆ ಒಂದು ದೇವತೆಯೆಂದು ಅವರು ಬಹಳಕಾಲದಿಂದ ಆ ದೇವತೆಯನ್ನು ಆರಾಧಿ ಸುತ್ತಿದ್ದರೆಂದೂ, ಪ್ರತಿ ವರ್ಷ ಪೂಜೆಗಳು ಮಾಡುತ್ತಿದ್ದರೆಂದು, ಆದರೆ ಈಗ ಆಕೆಯನ್ನು ಪೂಜಿಸುವುದು ಬಿಟ್ಟಿದ್ದಾರೆಂದು, ಆ ದೇವತೆಯ ಬದಲು ಮತ್ತೊಂದು ದೇವತೆಯನ್ನು ಆರಾಧಿಸುತ್ತಿದ್ದಾರೆಂದೂ, ಆದ್ದರಿಂದ ಅವರಮೇಲಿನ ಕೋಪದಿಂದ ಆಕೆಗೆ ಗುಂಡಿಗೆಯಲ್ಲಿ ನೋವು ಬರುವಂತೆ ಮಾಡಿರುವೆನೆಂದೂ, ಇಲ್ಲಿಗೆ ಮೂರು ಕಡೆಗಳಲ್ಲಿ ಮೂವರು ವೈದ್ಯರಿಗೆ ತೋರಿಸಿದರೂ ಎಲ್ಲಿಯು ನೋವು ಹೋಗಲಿಲ್ಲವೆಂದು ಇಲ್ಲಿ ನಿಮ್ಮ ಮುಂದಕ್ಕೆ ಬರುತ್ತಿದ್ದಹಾಗೆಯೇ ನಾನು ಭಯಪಟ್ಟು ಒಳಗೆ ನಡುಗುತ್ತಾ ಇದ್ದೆನೆಂದೂ, ಕೊನೆಗೆ ನೀವು ನಿನ್ನ ನೋವು ಎಲ್ಲಿದೆಯೋ ಹೇಳು ಎಂದಾಗ ಆಕೆಯನ್ನು ನೋಯಿಸದೇ ಬಿಟ್ಟುಹಾಕಿದೆನೆಂದೂ, ಆದ್ದರಿಂದ ಆಕೆಗೆ ನೋವು ಆಗ ಸ್ವಲ್ಪವೂ ಇಲ್ಲದೇ ಹೋಗಿದೆಯೆಂದು ಹೇಳಿದ್ದಾಳೆ.

ಆಗ ನಾನು ಈ ವಿಧವಾಗಿ ಅನೇಕ ಪ್ರಶ್ನೆಗಳನ್ನು ಕೇಳಿ ಸೂಕ್ಷ್ಮ ಲೋಕವೊಂದರ ವಿವರವನ್ನು ಸ್ವಲ್ಪ ತಿಳಿದುಕೊಂಡೆನು.

**ನಾನು:–** ನೀನು ನನ್ನನ್ನು 'ಸ್ವಾಮೀ' ಎಂದು ಯಾಕೆ ಕರೆದಿರುವೆ?

**ದೇವತೆ:–** ಅದಕ್ಕಿಂತ ದೊಡ್ಡ ಪದ ನನಗೆ ತಿಳಿದಿಲ್ಲ. ಆದ್ದರಿಂದ ನನಗೆ ತಿಳಿದಿರುವ ಪದದೊಂದಿಗೆ ಗೌರವವಾಗಿ ಕರೆಯಬೇಕೆಂದು ಕರೆದಿದ್ದೇನೆ.

**ನಾನು:–** ನನ್ನನ್ನು ಯಾಕೆ ಗೌರವವಾಗಿ ಮಾತನಾಡಬೇಕೆಂದು ಅಂದು ಕೊಂಡಿರುವೆ?

**ದೇವತೆ:–** ನಾನು ಎಷ್ಟೋ ಜನ ಸ್ವಾಮೀಜಿಗಳನ್ನು, ಬಾಬಾಗಳನ್ನು ನೋಡಿದ್ದೇನೆ. ಅವರೆಲ್ಲರಲ್ಲಿ ಇಲ್ಲದ ಕಾಂತಿ ನಿಮ್ಮಲ್ಲಿದೆ. ಆದ್ದರಿಂದ ನಿಮ್ಮಲ್ಲಿನ ಶಕ್ತಿಗೆ ನಾನು ನಿಮ್ಮನ್ನು ನೋಡುತ್ತಲೇ ಭಯಪಟ್ಟುಹೋದೆನು. ನಾನು ಎಂತಹ ದೇವತೆಯಾದರೂ ನಿಮ್ಮ ಶಕ್ತಿ ಮುಂದೆ ನಾನು ನಿಲ್ಲಲಾರೆನು. ನಿಮ್ಮಲ್ಲಿನ ಶಾಖಕ್ಕೆ ನಾನು ಸಹಿಸಲಾರದೆ ಇದ್ದೇನೆ. ಹೆಚ್ಚು ಸಮಯ ನಾನು ನಿಮ್ಮೊಂದಿಗೆ ಮತನಾಡಲಾರೆನು. ನೀವು ಅಪ್ಪಣೆ ಕೊಟ್ಟರೇ ನಾನು ಈಕೆಯಿಂದ ದೂರವಾಗಿ ಹೋಗುತ್ತೇನೆ. ಎಂದಿಗೂ ಈಕೆಯ ಹತ್ತಿರಕ್ಕೆ ಸಹ ಬರುವುದಿಲ್ಲ.

**ನಾನು:** ಸರೀ! ನೀನು ಹೋಗಬಹುದು. (ಎಂದು ನಾನು ಹೇಳುತ್ತಲೇ ಆಕೆ ಒಂದು ಕಡೆಗೆ ಬಾಗಿಹೋದಳು. ಒಂದು ನಿಮಿಷದ ನಂತರ ಎದ್ದಳು. ಎದ್ದವಳು ಮಾಮೂಲು ಮನುಷ್ಯಳಾದ್ದರಿಂದ ಅಲ್ಲಿಯವರೆಗು ಅಲ್ಲಿ ಏನು ನಡೆದಿರುವುದು ಆಕೆಗೆ ತಿಳಿಯಲಿಲ್ಲ. ಆ ವಿಷಯ ನನಗೆ ತಿಳಿದು ಆಕೆಯನ್ನು ಪಕ್ಕದಲ್ಲಿ ಕುಳಿತುಕೊಳ್ಳಲು ಹೇಳಿದೆನು.)

ಈ ವಿಧವಾಗಿ ನನ್ನ ಮೊದಲ ಅನುಭವದಲ್ಲಿಯೇ ಒಂದು ದೇವತೆಯೊಂದಿಗೆ ಮಾತನಾಡುವುದು ನಡೆದಿದೆ. ನಂತರ ಸೂಕ್ಷ್ಮ ಲೋಕವನ್ನು ಕುರಿತು ಒಂದೊಂದು ವಿಷಯವನ್ನು ನಾನು ಊಹಿಸಿಕೊಂಡಿರುವುದು ಹೊರಗೆ ಪ್ರತ್ಯಕ್ಷವಾಗಿ ತಿಳಿದುಹೋಗುತ್ತಿತ್ತು. ಅಂದಿನಿಂದ ಎಷ್ಟೋ ಜನ ದೇವತೆ

ಗಳೊಂದಿಗೂ, ದೆವ್ವಗಳೊಂದಿಗೂ ನಾನು ಮಾತನಾಡುವುದು ನಡೆಯಿತು. ಕೆಲವರು ಗೌರವವಾಗಿ ಮಾತನಾಡಿದರೇ ಕೆಲವರು ಜಂಬದಿಂದ ಮಾತನಾಡಿದವರು ಸಹ ಇದ್ದಾರೆ. ಅಂಥವರು ನಂತರ ಕ್ಷಮಾಪಣೆ ಕೇಳಿದ ಸಂದರ್ಭಗಳು ಸಹ ಇವೆ. ಕೆಲವರು ದೇವತೆಗಳು ನಿನ್ನ ಅಂತ್ಯ ನೋಡುತ್ತೇನೆಂದು ನನ್ನನ್ನು ಹೆದರಿಸಿದವರು ಕೂಡಾ ಇದ್ದಾರೆ. ಅಂಥವರು ನನ್ನ ಕೈಯಲ್ಲಿ ಶಿಕ್ಷಾರ್ಹರಾಗಿದ್ದಾರೆ. ಸೂಕ್ಷ್ಮವಾಗಿ ಕಾಣಿಸದ ದೇವತೆಗಳೊಂದಿಗೂ, ದೆವ್ವ ಗಳೊಂದಿಗೂ ಎಷ್ಟೋ ಸಲ ಮಾತನಾಡುವುದು ನಡೆದಿದೆ. ಅವರ ರಹಸ್ಯಗಳನ್ನೆಲ್ಲಾ ತಿಳಿದುಕೊಳ್ಳುವುದು ನಡೆದಿದೆ. ನನ್ನನ್ನು ಅಗೌರವವಾಗಿ ಮಾತನಾಡಿದ ದೇವತೆಗಳು, ದೆವ್ವಗಳಿದ್ದರೂ, ಅವರು ನನ್ನ ಕಡೆ ತಲೆ ಎತ್ತಿ ನೋಡಿದ ಕೂಡಲೇ ಕ್ಷಮಾಪಣೆ ಹೇಳಿದವರು ಇದ್ದಾರೆ. ಬದುಕಿದ್ದು ಕಾಣಿಸುವ ಮನುಷ್ಯರಲ್ಲಿ ನಾನು ಹಣವಿಲ್ಲದವನೆಂದು ಬೆಲೆಯಿಲ್ಲದಿದ್ದರೂ, ಕಾಣಿಸದ ದೇವತೆಗಳಲ್ಲಿ ದೊಡ್ಡ ಗೌರವವಿರುತ್ತಿತ್ತು. ನನ್ನ ವಯಸ್ಸು ಬೆಳೆದಂತೆಲ್ಲಾ ನನ್ನಲ್ಲಿನ ಆಧ್ಯಾತ್ಮಿಕವು ಬೆಳೆದಿದೆ. ನಾನು ಎಲ್ಲೂ ಜ್ಞಾನವನ್ನು ಕಲಿಯದಿದ್ದರೂ ಸಹಜವಾಗಿ ನನ್ನಿಂದ ಜ್ಞಾನವು ಹೊರಗೆ ಬರುತ್ತಿತ್ತು. ನಾನು ಊಹಿಸಿರುವುದೇ ನಾನು 30 ವರ್ಷಗಳ ಹಿಂದೆ ಹೇಳಿರುವುದೇ ಈ ದಿನ ದೈವಗ್ರಂಥಗಳಲ್ಲಿ ಇರುವುದರಿಂದ ಮೂರು ದೈವಗ್ರಂಥಗಳಲ್ಲಿನ ಜ್ಞಾನ ನನಗೆ ಬಹಳ ಸುಲಭವಾಯಿತು. ಮೊದಲನೆಯ ದಿನ ಒಂದು ದೇವತೆ ನನ್ನನ್ನು ಸ್ವಾಮೀ ಎಂದು ಏಕೆ ಸಂಬೋಧಿಸಿದ್ದಾಳೊ ಈಗ ನನಗೆ ಚೆನ್ನಾಗಿ ಅರ್ಥವಾಗಿದೆ. ಅಂದಿನಿಂದ ನನ್ನಲ್ಲಿನ ವ್ಯಕ್ತಿತ್ವವು ಬೆಳೆಯುತ್ತಿದ್ದಂತೆ ಜ್ಞಾನವು ಕೂಡಾ ಹೊರಬೀಳುತ್ತಾ ಬಂದಿದೆ. ವಾಸ್ತವವಾಗಿ ಈ ಜನ್ಮದಲ್ಲಿ ನಾನು ಒಂದು ಸ್ವಲ್ಪ ಜ್ಞಾನವನ್ನು ಕೂಡಾ ತಿಳಿಯಲಿಲ್ಲ. ಆದರೂ ನನಗೆ ಮೂರು ದೈವಗ್ರಂಥಗಳಲ್ಲಿನ ಜ್ಞಾನವು ಸುಲಭವಾಗಿ ಕಾಣಿಸುತ್ತಿದೆ. ಎಷ್ಟು ಕ್ಲಿಷ್ಟವಾದ ವಾಕ್ಯಕ್ಕಾದರೂ ಭಾವನೆ ಹಾಗೆಯೇ ತಿಳಿದುಹೋಗುತ್ತಿದೆ.

ನನ್ನಲ್ಲಿನ ಜ್ಞಾನಶಕ್ತಿ ಕಾಣಿಸುವಂತದ್ದಲ್ಲ. ಸೂಕ್ಷ್ಮವಾದುದರಿಂದ ಸ್ಥೂಲವಾದ ಮನುಷ್ಯರಿಗೆ ಸ್ವಲ್ಪವಾದರೂ ನನ್ನ ಬೆಲೆ ತಿಳಿಯದೇ ಹೋದರೂ ಸೂಕ್ಷ್ಮವಾದ ದೇವತೆಗಳಿಗೆ, ದೆವ್ವಗಳಿಗೆ ಸೂಕ್ಷ್ಮವಾದ ಶಕ್ತಿ ಕಾಣಿಸುವುದರಿಂದ

ಅವರು ನನ್ನಲ್ಲಿನ ಹಿರಿಮೆಯನ್ನು ಗ್ರಹಿಸಿ ಗೌರವವಾಗಿ ಮಾತನಾಡುವುದು ನಡೆದಿದೆ. ಆದರೇ ಮನುಷ್ಯರಿಗೆ ನನ್ನ ಬೆಲೆ ಸ್ವಲ್ಪವೂ ತಿಳಿಯದೆಂದೇ ಹೇಳಬಹುದು. ಆದ್ದರಿಂದ ಇಂದಿಗೂ ಮನುಷ್ಯರು ನನ್ನನ್ನು ಅವಹೇಳನವಾಗಿ, ದೋಷಣೆಯಾಗಿ ಮಾತನಾಡುತ್ತಿದ್ದರೂ, ನನ್ನನ್ನು ಗೌರವಿಸುವ ದೇವತೆಗಳು ಎಷ್ಟೋ ಇದ್ದಾರೆ. ಈ ಮಧ್ಯ ಕಾಲದಲ್ಲಿ ಸುಮಾರು ಐದು ವರ್ಷಗಳ ಕೆಳಗೆ ಬ್ರಹ್ಮಯ್ಯನವರು ಬರೆದಿರುವ ಕಾಲಜ್ಞಾನದಲ್ಲಿ ನಮ್ಮ ಹೆಸರಿರುವುದನ್ನು ನೋಡಿ, ಅದರಲ್ಲಿ ನಮ್ಮ ಜ್ಞಾನ ಮಹತ್ವವಾದುದೆಂದು ಹೇಳಿರುವುದನ್ನು ನೋಡಿ, ಕೆಲವರು ಮನುಷ್ಯರು ಸ್ವಲ್ಪ ಗೌರವವನ್ನು ಕೊಡುತ್ತಿದ್ದಾರೆ. ಆದರೇ ಮೊದಲಿನಿಂದಲೂ ದೇವತೆಗಳು, ದೆವ್ವಗಳು ನಮ್ಮನ್ನು ಗೌರವಿಸುವುದು ನಡೆಯುತ್ತಿದೆ. ಸುಮಾರು ಹತ್ತುವರ್ಷಗಳಿಂದ ಖಗೋಳದಲ್ಲಿನ ಗ್ರಹಗಳು, ಭೂತಗಳು ಕೂಡಾ ನಮ್ಮನ್ನು ಗೌರವಿಸುತ್ತಿರುವುದರಿಂದ, ನಮ್ಮ ಬಳಿ ಬಂದವರಿಗೆ ಇರುವ ರೋಗಗಳನ್ನು ಭೂತಗಳು, ಗ್ರಹಗಳು ಹಿಂತೆಗೆದುಕೊಳ್ಳುವುದು ನಡೆದಿದೆ. ಈ ವಿಧವಾಗಿ ಎಷ್ಟೋ ಜನರಿಗೆ ರೋಗಗಳು ಸುಲಭವಾಗಿ ವಾಸಿಯಾಗುತ್ತಿರುವುದರಿಂದ ಕೆಲವರು ಮನುಷ್ಯರು ಈಗೀಗ ಗೌರವವಾಗಿ ನೋಡುತ್ತಿದ್ದಾರೆ. ಇಂದಿಗೂ ಎಂದಿಗೂ ಮನುಷ್ಯರಲ್ಲಿ ಇಲ್ಲದ ಬೆಲೆ ಭೂತಗಳ, ಗ್ರಹಗಳ, ದೇವತೆಗಳ, ದೆವ್ವಗಳ ಮಧ್ಯೆ ಇದೆಯೆಂದು ಹೇಳುತ್ತಿದ್ದೇವೆ. ಆದ್ದರಿಂದ ಯಾವ ಭೂತದಿಂದಾಗಲೀ, ಯಾವ ದೇವತೆಗಳಿಂದಾಗಲೀ, ನನಗೆ ತೊಂದರೆ ಇಲ್ಲ. ಭೂತಗಳು, ಗ್ರಹಗಳು, ದೇವತೆಗಳು ನನಗೆ ಯಾವಾಗಲೂ ತೊಂದರೆ ಕೊಡಲಿಲ್ಲ ಆದರೇ, ನನ್ನನ್ನು ದೂಷಿಸಿದವರಿಗೆ ದೇವತೆಗಳು, ಭೂತಗಳು, ಗ್ರಹಗಳು ಬಹಳ ತೊಂದರೆ ಕೊಟ್ಟಿದ್ದಾರೆ.

**ಅವರ ಪ್ರಶ್ನೆ:– ಕ್ಷಮಿಸಿ, ನಮ್ಮ ದೃಷ್ಟಿಗೆ ಬಂದ ಇತರರು ಕೇಳಿರುವ ಪ್ರಶ್ನೆಯನ್ನು ನಿಮಗೆ ತಿಳಿಸುತ್ತಾ ಇದಕ್ಕೆ ನೀವೇನು ಹೇಳುವಿರೋ ತಿಳಿದುಕೊಳ್ಳಲು ಕೋರುತ್ತಿದ್ದೇವೆ? ಇದು ಇಂಟರ್‌ನೆಟ್‌ನಲ್ಲಿ ಫೇಸ್‌ಬುಕ್‌ನಲ್ಲಿ ಒಬ್ಬ ಮುಸ್ಲಿಮ್ ಕೇಳಿರುವ ಪ್ರಶ್ನೆಗಳನ್ನು ನಾವು 2015 ಸೆಪ್ಟೆಂಬರ್ 19ನೇ ತಾರೀಖು ನೋಡಿದ್ದೇವೆ ಅವನ್ನೇ ಕೇಳುತ್ತಿದ್ದೇವೆ.**

**ನಮ್ಮ ಉತ್ತರ:–** ಯಾರು ಯಾವ ಪ್ರಶ್ನೆಯನ್ನಾದರೂ ಕೇಳಬಹುದು. ಪ್ರಶ್ನೆ ಕೇಳುವುದರಲ್ಲಿ ತಪ್ಪಿಲ್ಲ ಆದರೇ, ಹೇಳಿರುವ ಉತ್ತರವನ್ನು ಗ್ರಹಿಸಿಕೊಳ್ಳದಿದ್ದರೇ ಎಷ್ಟೋ ಬೆಲೆಯುಳ್ಳ ಉತ್ತರ ಬೂದಿಯಲ್ಲಿ ಸುರಿದ ಪನ್ನೀರಿನಂತಾಗುತ್ತದೆ. ಹಾಗಾಗದಂತೆ ಉತ್ತರವನ್ನು ಸ್ವೀಕರಿಸಿರಿ.

**ಅವರ ಪ್ರಶ್ನೆ:– ತ್ರೈತಸಿದ್ಧಾಂತ ಪ್ರಚಾರಕರು ತೌರಾತ್‌ನ್ನು ಭಗವದ್ಗೀತೆಯಾಗಿ ಹೇಳಿಕೊಳ್ಳುತ್ತಾ ದೇವರು ಕೃಷ್ಣನ ರೂಪದಲ್ಲಿ, ಯೇಸು ರೂಪದಲ್ಲಿ ಅವತರಿಸಿದ್ದಾನೆಂದು ಪ್ರಚಾರ ಮಾಡುತ್ತಾ, ಖುರಾನ್‌ನಲ್ಲಿನ ವಾಕ್ಯಗಳನ್ನು ವಕ್ರೀಕರಿಸುತ್ತಾ ಸಾಲಕ್ಕೆ ತಂದುಕೊಂಡ ಜ್ಞಾನದಿಂದ, ತೇಪೆ ಜ್ಞಾನದಿಂದ ವಿಗ್ರಹ ಆರಾಧನೆಯನ್ನು ಬಲಪಡಿಸುತ್ತಾ, ತಾವು ಮೂರು ಗ್ರಂಥಗಳಲ್ಲಿನ ಜ್ಞಾನ ಬೋಧನೆಯನ್ನು ಮಾಡುತ್ತಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ" ಎಂದು ಇದೆ. ಇದಕ್ಕೆ ನೀವೇನು ಹೇಳುವಿರಿ?**

**ನಮ್ಮ ಉತ್ತರ :–** ಇದನ್ನು ಯಾರೂ ಎಂತಹ ಪರಿಸ್ಥಿತಿಯಲ್ಲಿಯೂ ಪ್ರಶ್ನೆ ಎನ್ನುವುದಿಲ್ಲ. ಇದನ್ನು ವಿಮರ್ಶೆ ಎನ್ನುತ್ತಾರೆ. ಯಾರು ಏನೆಂದರೂ ನಾವು ಸಹನೆಯಿಂದ ಕೇಳುತ್ತೇವೆ. ಪ್ರಪಂಚವೆಂದಮೇಲೆ ಇಂತಹ ತೊಡಕುಗಳು ಸಹಜವಾಗಿರುತ್ತವೆ. ವಿಮರ್ಶೆ ಮಾಡುವುದರಲ್ಲಿ ಒಂದು ಪದ್ಧತಿಯಂತೂ ಇರುತ್ತದೆ. ನಾವು ಹೇಳಿರುವ ವಿಷಯವು ಹೇಗೆ ತಪ್ಪೋ ತೋರಿಸಿ ಹೇಳಿದರೇ ಚೆನ್ನಾಗಿರುತ್ತದೆ. ಹಾಗಲ್ಲದೇ ನನಗೆ ತಿಳಿದಿರುವುದೇ ಸರಿಯಾದುದು, ನಿಮ್ಮದು ತಪ್ಪೆಂದರೇ ಅದು ಸದ್‌ವಿಮರ್ಶೆ ಕೆಳಗೆ ಜಮಕಟ್ಟಲ್ಪಡುವುದಿಲ್ಲ. ಅಸೂಯೆಯಿಂದ ಹೇಳಿರುವ ಮಾತುಗಳಾಗಿ ಲೆಕ್ಕಿಸಲ್ಪಡುತ್ತವೆ. ಯಾವುದಾದರೂ ಚಿಲ್ಲರೆ ಮನುಷ್ಯರು ಬೀದಿಯಲ್ಲಿ ಮಾತನಾಡಿಕೊಂಡಂತೆ ಅಲ್ಲದೆ ದೊಡ್ಡ ಮನುಷ್ಯರು ಕೇಳಿದಂತೆ ಕೇಳಿರಿ. ಹಾಗಲ್ಲದೆ ಸಾಲಕ್ಕೆ ತಂದುಕೊಂಡ ಜ್ಞಾನ, ತೇಪೇ ಜ್ಞಾನವೆಂದು ನೀವು ಹೇಳುವುದಕ್ಕೆ ನಾವು ಎಲ್ಲಿಂದ ಸಾಲಕ್ಕೆ ತಂದುಕೊಂಡಿದ್ದೇವೋ ಹೇಳಬಲ್ಲಿರಾ? ನಾವು ಹೇಳುವುದು ಇನ್ನೊಂದುಕಡೆ ಇದ್ದರೇ ಅಲ್ಲಿಂದ ತಂದುಕೊಂಡಂತಾಗುತ್ತದೆ. ನಾವು ಹೇಳುವ ವಿಷಯಗಳು ದೈವಗ್ರಂಥ

ದೊಳಗಿನವಾಗಿರುತ್ತವೆ. ಅಲ್ಲಿಲ್ಲದ ಯಾವುವಾದರೂ ಇದ್ದರೇ ನಮ್ಮಿಂದಲೇ ಪ್ರಾರಂಭವಾಗಿರುತ್ತವೆ. ಆದಕಾರಣ ನೀವು ಸಾಲಕ್ಕೆ ತಂದುಕೊಂಡ ಜ್ಞಾನ ವೆಂದರೂ, ಓದಿರುವವರು ನಿನ್ನ ಮಾತನ್ನೇ ತಪ್ಪೆನ್ನುತ್ತಾರೆ. ನಾನು ಹೇಳುವ ಜ್ಞಾನ ಶಾಸ್ತ್ರ ಬದ್ಧವಾಗಿರುವಾಗ, ಸತ್ಯಬದ್ಧವಾಗಿ ಪ್ರತ್ಯಕ್ಷ ಪ್ರಮಾಣವಾಗಿ ಇರುವಾಗ ತೇಪೇ ಜ್ಞಾನವೆಂದು ಹೇಳುವುದಕ್ಕೆ ಆಧಾರವೇನಾದರೂ ಇದೆಯಾ? ಇದು ಅಸೂಯೆಯಿಂದ ಮಾತನಾಡುವ ಮಾತೆಂದು ಎಲ್ಲರಿಗೂ ತಿಳಿಯುತ್ತದೆ. ದೇವರು ಕೂಡಾ ಈ ಮಾತನ್ನು ಒಪ್ಪಿಕೊಳ್ಳುವುದಿಲ್ಲ.

ನಾವು ಭಗವದ್ಗೀತೆಯನ್ನು ತೌರಾತ್ ಗ್ರಂಥವಾಗಿ ಹೇಳುವ ಮಾತು ವಾಸ್ತವ. ನಮ್ಮ ಮಾತನ್ನು ಅಲ್ಲಗಳೆಯುವುದಕ್ಕೆ ನೀವು ತೌರಾತ್ ಗ್ರಂಥ ಯಾವುದೋ ತೋರಿಸಬಲ್ಲಿರಾ? ತೌರಾತ್ ಗ್ರಂಥಕ್ಕೆ ಗ್ರಂಥಕರ್ತ ಯಾರೋ ತಿಳಿದಿಲ್ಲ? ಅದು ಯಾವ ಭಾಷೆಯಲ್ಲಿ ಬರೆದಿದ್ದಾರೊ ತಿಳಿದಿಲ್ಲ. ಅದು ಎಂತಹ ಗ್ರಂಥವೋ ತಿಳಿದಿಲ್ಲ? ಎಂದು ಕೆಲವರು ಮುಸ್ಲಿಮ್ ಹಿರಿಯರು ಹೇಳುವುದು ಕೇಳಿದ್ದೇವೆ. ಹಾಗೆಯೇ ಬರೆದಿರುವ ಬರಹವನ್ನು ಕೂಡಾ ನೋಡಿದ್ದೇವೆ. ನಾವು ತೌರಾತ್ ಗ್ರಂಥವನ್ನು ತಗ್ಗಿಸಿ ಹೇಳಿದ್ದರೇ ಬಾಧೆಪಡಬೇಕು ಆದರೆ ಅದನ್ನು ಪ್ರಥಮ ದೈವಗ್ರಂಥವೆಂದು ದೊಡ್ಡದಾಗಿ ಹೇಳುತ್ತಿರುವಾಗ ತಪ್ಪೇನಿದೆ. ನಮಗೆ ತಿಳಿದೋ ತಿಳಿಯದೋ ಹೇಳಿದ್ದೇವೆಂದುಕೊಳ್ಳಿ! ನೀವು ತೌರಾತ್ ಗ್ರಂಥವನ್ನು ತಂದು ತೋರಿಸಬಲ್ಲಿರಾ? ಹಾಗೆ ತೋರಿಸಿರಿ! ನಮ್ಮ ಮಾತು ತಪ್ಪೆಂದು ಒಪ್ಪಿಕೊಳ್ಳುತ್ತೇವೆ.

**ಅವರ ಪ್ರಶ್ನೆ:- ತ್ರೈತಸಿದ್ಧಾಂತ ಪ್ರಚಾರಕರ ವಾಸ್ತವ ವಕ್ರೀಕರಣ : ದಿವ್ಯ ಖುರಾನ್ 5-68 ವಾಕ್ಯ ಹೀಗಿದೆ. "ಅವರಿಗೆ ಹೇಳು, ಗ್ರಂಥವಿರುವ ಪ್ರಜೆಗಳೇ! ನೀವು ತೌರಾತ್‌ನ್ನು ಇಂಜೀಲನ್ನು, ನಿಮ್ಮ ಪ್ರಭು ಪರವಾಗಿ ನಿಮ್ಮ ಮೇಲೆ ಅವತರಿಸಿರುವುದನ್ನು (ಖುರಾನ್‌ನ್ನು) ಸ್ಥಾಪಿಸದೆ ಇರುವವರೆಗು ನಿಮಗಂತೂ ಒಂದು ಮೂಲತತ್ವ ಇಲ್ಲದಂತೆಯೇ, ನಿನ್ನ ಪ್ರಭು ಪರವಾಗಿ ನಿನ್ನಬಳಿಗೆ ಕಳುಹಿಸಲ್ಪಟ್ಟಿರುವುದು ಅವರಲ್ಲಿನ ಅನೇಕರ ಗರ್ವವನ್ನು ಮತ್ತಷ್ಟು ಬೆಳೆಸುತ್ತದೆ.**

**ಆದಕಾರಣ ನೀನು ಈ ತಿರಸ್ಕಾರ ಜನಗಳ ಸ್ಥಿತಿಯ ಮೇಲೆ ವಿಚಾರಪಡಬೇಡ. ತೌರಾತ್, ಇಂಜೀಲು, ಖುರಾನ್‌ನಲ್ಲಿನ ಪ್ರಧಾನವಾದ ಆಜ್ಞೆ "ಪೂರ್ತಿ ಹೃದಯದಿಂದ, ಪೂರ್ಣಾತ್ಮದಿಂದ, ಪೂರ್ಣ ವಿವೇಕದಿಂದ ನಿಜದೇವರು ನಿಜ ಪ್ರಭುವನ್ನು ಆರಾಧಿಸುವುದು, ಆತನನ್ನು ಅಮಿತವಾಗಿ ಪ್ರೀತಿಸುವುದು, ವಿಗ್ರಹಾರಾಧನೆ ತ್ಯಜಿಸುವುದನ್ನು ಮಾಡಬೇಕು" ಎಂದು ಇದೆ.**

**ನಮ್ಮ ಉತ್ತರ:–** "ಅವನಿಗೆ ಹುಚ್ಚು ಹಿಡಿದಿದೆ ಒನಿಕೆಯನ್ನು ತಲೆಗೆ ಸುತ್ತಿದರೇ ವಾಸಿಯಾಗುತ್ತದೆಂದು" ಪೂರ್ವವು ಒಬ್ಬನೆಂದನಂತೆ. ಎದುರಿಗಿರುವವನಿಗೆ ಹುಚ್ಚು ಹಿಡಿದಿದೆ ಎಂದು ಹೇಳಿ ಸುಮ್ಮನಿದ್ದರೇ ಉಳಿದ ಕೇಳುವವರು ನಿಜವೇಯೇನೋ! ಎಂದು ಅಂದುಕೊಳ್ಳುತ್ತಿದ್ದರು. ಎದುರಿಗಿರುವವನಿಗೆ ಹುಚ್ಚು ಎಂದು ಹೇಳುವವನು ಅಷ್ಟಕ್ಕೆ ನಿಲ್ಲದೆ, ಒನಕೆಯನ್ನು ತಲೆಗೆ ಸುತ್ತಿರಿ ಎಂದು ಹೇಳಿದಾಗ, ಆ ಮಾತನ್ನು ಕೇಳಿದವರೆಲ್ಲಾ ಎದುರಿಗಿರುವವನಿಗೆ ಹುಚ್ಚಿಲ್ಲ, ಹೇಳುವವನಿಗೇ ಹುಚ್ಚೆಂದು ಎಲ್ಲರೂ ಹೇಳುವವನನ್ನು ನೋಡಿದರಂತೆ. ಏಕೆಂದರೇ ಒನಕೆಯನ್ನು ತಲೆಗೆ ಯಾರೂ ಸುತ್ತುವುದಿಲ್ಲ, ಸುತ್ತಲಾರರು. ಒನಕೆ ಎನ್ನುವುದು ಸ್ವಲ್ಪವೂ ಬಗ್ಗದ ಗಟ್ಟಿ ಕಟ್ಟಿಗೆಯಾದ್ದರಿಂದ ಅದು ಬಗ್ಗುವುದಲ್ಲ. ಅಂತಹ ಒನಕೆಯನ್ನು ತಲೆಗೆ ಸುತ್ತೆಂದವನೇ ನಿಜವಾಗಿ ಹುಚ್ಚನೆಂದು ಅಲ್ಲಿರುವವರಿಗೆ ತಿಳಿದುಹೋಯಿತಂತೆ. ಹಾಗೆಯೇ ಇಲ್ಲಿ ಮಾತನಾಡುವವರು ಎದುರಿಗಿರುವವರು ಅಜ್ಞಾನಿಗಳೆನ್ನುತ್ತಾ ಅಷ್ಟಕ್ಕೆ ನಿಲ್ಲದೇ, ಇನ್ನೂ ಸಂಬಂಧವಿಲ್ಲದ ವಾಕ್ಯಗಳನ್ನು ಹೇಳುವುದರಿಂದ, ಎದುರಿಗಿರುವವನಲ್ಲ ನಿಜವಾಗಿ ಆ ಮಾತು ಹೇಳುವವನೇ ಅಜ್ಞಾನಿ ಎಂದಂತೆ ತಿಳಿಯುತ್ತಿದೆ. ಆತನು ನಮ್ಮನ್ನು ವಕ್ರೀಕರಣ ಮಾಡುವವರು ಎಂದು ಸುಮ್ಮನಿದ್ದರೇ ಚೆನ್ನಾಗಿರುತ್ತಿತ್ತು. ಹಾಗಲ್ಲದೇ ಉಳಿದ ವಾಕ್ಯಗಳು ಹೇಳಿದರಿಂದ ಆತನಲ್ಲಿ ಉದ್ದೇಶ ಸರಿಯಾಗಿಲ್ಲವೆಂದು, ಅಸೂಯೆಯಿಂದ ಕೂಡಿಕೊಂಡಿದೆಯೆಂದು ತಿಳಿಯುತ್ತಿದೆ. ಆತನು ಹೇಳಿರುವುದು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಹೀಗಿದೆ ನೋಡಿರಿ. **(5–68) "ಹೀಗೆ ಹೇಳು. ಓ ಗ್ರಂಥ ಪ್ರಜೆಗಳೇ! ನೀವು ತೌರಾತನ್ನು, ಇಂಜೀಲನ್ನು ಮತ್ತು ನಿಮ್ಮ ಪ್ರಭು ಪರವಾಗಿ ನಿಮ್ಮ ಮೇಲೆ ಅವತರಿಸುವಂತೆ ಮಾಡಲ್ಪಟ್ಟಿರುವುದನ್ನು (ಖುರಾನ್**

**ಗ್ರಂಥವನ್ನು) ಆಚರಿಸದವರೆಗು, ನಿಮ್ಮ ಜೀವನಗಳಲ್ಲಿ ನೆಲೆಗೊಳ್ಳುವವರೆಗು ನೀವು ಯಾವ ಧರ್ಮದ ಮೇಲೆಯು ಇಲ್ಲದಂತೆಯೇ, ನಿನ್ನ ಪ್ರಭು ಕಡೆಯಿಂದ ನಿನ್ನ ಮೇಲೆ ಅವತರಿಸಲ್ಪಟ್ಟಿರುವುದು ಅವರಲ್ಲಿನ ಗರ್ವವನ್ನು, ತಿರಸ್ಕಾರ ವೈಖರಿಯನ್ನು ಮತ್ತಷ್ಟು ಅಧಿಕ ಮಾಡುತ್ತದೆ. ಆದಕಾರಣ ಈ ತಿರಸ್ಕಾರ ಜನಗಳನ್ನು ಕುರಿತು ಚಿಂತಿಸಬೇಡ" ಎಂದು ವಾಕ್ಯವಿದೆ.** ಆತನು ಅಷ್ಟಕ್ಕೆ ನಿಲ್ಲಿಸದೆ ತೌರಾತ್, ಇಂಜೀಲ್, ಖುರಾನ್‌ಗಳಲ್ಲಿನ ಪ್ರಧಾನವಾದ ಆಜ್ಞೆ ಎಂದು ಆರಂಭ ಮಾಡಿದನು. "ಪೂರ್ಣ ಹೃದಯದಿಂದ, ಪೂರ್ಣಾತ್ಮದಿಂದ, ಪೂರ್ಣ ವಿವೇಕದಿಂದ ನಿನ್ನ ನಿಜ ದೇವರು, ನಿಜ ಪ್ರಭುವನ್ನು ಆರಾಧಿಸುವುದು, ಅಧಿಕವಾಗಿ ಪ್ರೇಮಿಸುವುದು, ವಿಗ್ರಹಾರಾಧನೆ ತ್ಯಜಿಸುವುದು" ಎಂದು ಬರೆದಿದ್ದಾರೆ. ಆದರೇ ಈ ವಾಕ್ಯವು ಬೈಬಲ್ ಹೊಸ ನಿಬಂಧನದಲ್ಲಿ ಮತ್ತಾಯ ಸುವಾರ್ತೆ, 22ನೇ ಅಧ್ಯಾಯದಲ್ಲಿ 36, 37, 38, 39, 40 ವಾಕ್ಯಗಳಲ್ಲಿ ಹೀಗಿದೆ ನೋಡಿರಿ. **"(36) ಬೋಧಕನೇ! ಧರ್ಮಶಾಸ್ತ್ರದಲ್ಲಿ ಮುಖ್ಯವಾದ ಆಜ್ಞೆ ಯಾವುದು? ಎಂದು ಕೇಳಿದನು. ಅದಕ್ಕೆ ಆತನು (37) ನಿನ್ನ ಪೂರ್ಣ ಹೃದಯದಿಂದಲೂ, ನಿನ್ನ ಪೂರ್ಣಾತ್ಮದಿಂದಲೂ, ನಿನ್ನ ಪೂರ್ಣ ಮನಸ್ಸಿನಿಂದಲೂ ನಿನ್ನ ದೇವರಾದ ಪ್ರಭುವನ್ನು ಪ್ರೇಮಿಸಬೇಕೆನ್ನುವುದೇ (38) ಇದು ಮುಖ್ಯವಾದುದು, ಮೊದಲನೆಯದಾದ ಆಜ್ಞೆ (39) ನಿನ್ನಹಾಗೆ ನಿನ್ನ ಪಕ್ಕದವನನ್ನು ಪ್ರೇಮಿಸಬೇಕೆನ್ನುವ ಎರಡನೆಯ ಆಜ್ಞೆಯು ಅದರಂತದ್ದೇ (40) ಈ ಎರಡು ಆಜ್ಞೆಗಳು ಧರ್ಮಶಾಸ್ತ್ರವೆಲ್ಲದಕ್ಕೂ ಪ್ರವಕ್ತರಿಗೂ ಆಧಾರವಾಗಿವೆ ಎಂದು ಆತನಿಗೆ ಹೇಳಿದನು".**

ಇಲ್ಲಿ ಬೈಬಲ್ ಮತ್ತಾಯ ಸುವಾರ್ತೆಗಳಲ್ಲಿನ ಐದು ವಾಕ್ಯಗಳನ್ನು ನೋಡಿದರೇ ಮಾತ್ರ ಅದರಲ್ಲಿನ ಸಮಾಚಾರ ಅರ್ಥವಾಗುವುದು. ಅಂಥದ್ದನ್ನು ಪೂರ್ತಿ ಹೇಳದೆ ಅರ್ಧದವರೆಗು ಹೇಳಿ ಬಿಟ್ಟಿರುವುದರಿಂದ ವಾಕ್ಯದ ವಿಷಯವು ಆತನಿಗೆ ತಿಳಿಯದೆಂದು ತಿಳಿದುಹೋಗುತ್ತಿದೆ. ಮುಖ್ಯವಾದ ಆಜ್ಞೆಗಳು ಎರಡು ಇವೆ. ಈ ಎರಡು ಆಜ್ಞೆಗಳು ಧರ್ಮಶಾಸ್ತ್ರವೆಲ್ಲದಕ್ಕು ಆಧಾರವೆಂದು ಕೊನೆಯಲ್ಲಿ ಹೇಳಿದ್ದಾರೆ. ಈ ಪ್ರಶ್ನೆಯಲ್ಲಿ ಖುರಾನ್ ಗ್ರಂಥದಲ್ಲಿನ (5–68) ವಾಕ್ಯವನ್ನು ಕೂಡಾ ಸರಿಯಾಗಿ ಹೇಳದೆ ಅಸ್ಪಷ್ಟವಾಗಿ ಹೇಳಿದ್ದಾರೆ. "ತೌರಾತ್, ಇಂಜೀಲು,

ಖುರಾನ್ ಗ್ರಂಥಗಳನ್ನು ಸ್ಥಾಪಿಸದವರೆಗು" ಎಂದು ಬರೆದಿದ್ದಾರೆ. ಅಲ್ಲಿ "ನಿಮ್ಮ ಜೀವನಗಳಲ್ಲಿ ಆಚರಿಸದವರೆಗು" ಎಂದು ಇರಬೇಕು. "ನಿಮಗಂತೂ ಒಂದು ಮೂಲತತ್ವ ಇಲ್ಲದಂತೆಯೇ" ಎಂದು ಹೇಳಿದ್ದಾರೆ. "ಆಚರಿಸುವವರೆಗು ನೀವು ಯಾವ ಧರ್ಮದ ಮೇಲೆಯೂ ಇಲ್ಲದಂತೆಯೇ" ಎಂದು ಇರಬೇಕು. ಅಂದರೇ ಯಾವ ಮತದಲ್ಲಿ ಇಲ್ಲದಂತೆಯೇ ಎಂದು ಇಲ್ಲದೆ ಹೋದರೇ ಯಾವ ಮತಧರ್ಮದಲ್ಲಿ ಇಲ್ಲದಹಾಗೆಯೇ ಎಂದು ಅರ್ಥವಾಗುತ್ತಿದೆ. ನಿಮಗೆ ಕೊಟ್ಟಿರುವ ಖುರಾನ್ ಗ್ರಂಥವನ್ನು ನೋಡಿ ಕೆಲವರು ತಿರಸ್ಕಾರರಿಗೆ ಗರ್ವವು ಹೆಚ್ಚುತ್ತದೆ ಎಂದು, ಅವರನ್ನು ಲೆಕ್ಕಮಾಡಬೇಡ ಎಂದು ಹೇಳಿದ್ದಾರೆ. ಇದೆಲ್ಲಾ ಪ್ರತ್ಯೇಕವಾದ ಸಮಾಚಾರವಾಗಿರುವಾಗ, ಅದಕ್ಕೆ ಅನುಬಂಧನವಿಲ್ಲದ ಬೈಬಲ್ ವಾಕ್ಯವನ್ನು ಅಲ್ಲಿ ಹೇಳುವುದು ನಡೆದಿದೆ. ಅದರೊಂದಿಗೆ ನನ್ನನ್ನು ವಿಮರ್ಶಿಸಬೇಕೆಂದು ಕೊಂಡವರೇ ವಿಮರ್ಶೆಗೆ ಒಳಗಾಗಿ ಹೋಗಿದ್ದಾರೆ. ಹುಚ್ಚು ಹಿಡಿದಿದೆಯೆಂದು ಎದುರಿಗಿರುವವನನ್ನು ಆರೋಪಿಸುವಾಗ ಬುದ್ಧಿವಂತಿಕೆಯಿಂದ ಮಾತನಾಡದೆ 'ಒನಕೆ ತಲೆಗೆ ಸುತ್ತು' ಎಂದು ಹೇಳಿ, ಅವನ ಹುಚ್ಚನ್ನು ಹೊರಗಿಟ್ಟುಕೊಂಡನಂತೆ. ಅದೇ ರೀತಿ ಅಸಂದರ್ಭವಾಗಿ ಬೈಬಲ್ ವಾಕ್ಯವನ್ನು ಹೇಳಿ ಅನವಶ್ಯವಾಗಿ ಹೊರ ಬಿದ್ದನು. ಅದೂ ಅಲ್ಲಿ ಹೇಳಿರುವ ಬೈಬಲ್ ವಾಕ್ಯವನ್ನು ಕೂಡಾ ತಪ್ಪು ಹೇಳುವುದಾಗಿದೆ. "ನಿನ್ನ ಹೃದಯದಿಂದಲೂ, ನಿನ್ನ ಪೂರ್ಣಾತ್ಮದಿಂದಲೂ, ನಿನ್ನ ಪೂರ್ಣ ಮನಸ್ಸಿನಿಂದಲೂ" ಎಂದು ಹೇಳಬೇಕಾಗಿದ್ದರೇ, 'ನಿನ್ನ' ಎಂಬ ಅಕ್ಷರವನ್ನು ಹೇಳದೆ ಬಿಟ್ಟುಹಾಕುವುದರಿಂದ ವಾಕ್ಯದಲ್ಲಿನ ಅರ್ಥವೇ ಬದಲಾಗಿಹೋಗಬಲ್ಲದು.

ಮೊದಲು ಖುರಾನ್ ಗ್ರಂಥದಲ್ಲಿನ (5–68) ವಾಕ್ಯವನ್ನು ತೆಗೆದುಕೊಂಡು ಹೇಳಿದ್ದಾರೆ. ಅದರಲ್ಲಿನ ಸಾರಾಂಶವು ಸರಿಯಾಗಿ ಹೇಳದೆಯೇ ಬೈಬಲ್ ವಾಕ್ಯದೊಳಗೆ ಹೋಗಿ ಮುಖ್ಯವಾದ ಆಜ್ಞೆಯನ್ನು ಕುರಿತು ಹೇಳುವುದಾಗಿದೆ. ಮೊದಲ ವಾಕ್ಯದಲ್ಲಿ ಮೂರು ದೈವಗ್ರಂಥಗಳನ್ನು ಅಂದರೇ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿನ ಜ್ಞಾನವನ್ನು ಮನುಷ್ಯ ತನ್ನ ಜೀವನದಲ್ಲಿ ಆಚರಿಸದೆ ಹೋದರೇ, ಅವನು ಯಾವ ಮತ ಧರ್ಮದಲ್ಲಿ ಇಲ್ಲದಹಾಗೆಯೇ

ಎಂದು ಸ್ಪಷ್ಟವಾಗಿ ಹೇಳುವುದಾಗಿದೆ. ಹಿಂದೂಗಳಾಗಿರುವ ನಾವು ಖುರಾನ್ ಗ್ರಂಥವು ದೈವಗ್ರಂಥವೆಂದು ಒಪ್ಪಿಕೊಳ್ಳುತ್ತಿದ್ದೇವೆ. ಹಾಗಿರುವಾಗ ಭಗವದ್ಗೀತೆಯನ್ನು ದೈವಗ್ರಂಥವಾಗಿ ಉಳಿದ ಮತದವರು ಒಪ್ಪಿಕೊಂಡರೇ ತಪ್ಪೇನು? ಎಂದು ಕೇಳುತ್ತಿದ್ದೇನೆ. ತೌರಾತ್ ಗ್ರಂಥವನ್ನು ಭಗವದ್ಗೀತೆ ಎಂದು ಅನ್ನುವುದು ತಪ್ಪು ಎಂದು ನೀವು ಹೇಳುತ್ತಿದ್ದೀರ. ನಾವು ತೌರಾತ್ ಎಂಬ ಪದಕ್ಕೆ ಅರ್ಥದೊಂದಿಗೆ ಸಹ ಹೇಳಿ ಮೂರು ಆತ್ಮಗಳ ರಹಸ್ಯವಿರುವ ಗ್ರಂಥವಾದ 'ಭಗವದ್ಗೀತೆ'ಯನ್ನು ಪೂರ್ವವು ಅರಬ್ಬೀ ಭಾಷೆಯಲ್ಲಿ 'ತೌರಾತ್' ಎಂದು ಹೇಳುತ್ತಿದ್ದರು. ಕನ್ನಡ ಭಾಷೆಯಲ್ಲಿ ಮೂರು ಎನ್ನುವುದನ್ನು ಹಿಂದಿಯಲ್ಲಿ ತೀನ್ ಎಂದೂ, ಅರಬ್ಬೀ ಭಾಷೆಯಲ್ಲಿ 'ತೌರಾತ್' ಎಂದೂ ಇಂದಿಗೂ ಹೇಳುತ್ತಿದ್ದೇವೆ. ಭೂಮಿಮೇಲೆ ಗ್ರಂಥರೂಪವಾದ ಮೊದಲ ಗ್ರಂಥ ಭಾರತ ದೇಶದಲ್ಲಿನ ಭಗವದ್ಗೀತೆಯೇ. ಆದ್ದರಿಂದ ಪ್ರಥಮ ದೈವಗ್ರಂಥ ಭಗವದ್ಗೀತೆಯೆಂದು ಹೇಳಿರುವುದಾಗಿದೆ. 5150 ವರ್ಷಗಳ ಪೂರ್ವದಲ್ಲಿ ಗ್ರಂಥವಾಗಿ ರೂಪಹೊಂದಿದ ಭಗವದ್ಗೀತಾ ಜ್ಞಾನವೇ ಉಳಿದ ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ ಎಂದು ಹೇಳುವುದಕ್ಕೆ ಎಷ್ಟೋ ಸಾಕ್ಷಿಗಳಿವೆ. ಬೈಬಲ್ ಖುರಾನ್ ಗ್ರಂಥಗಳಲ್ಲಿನ ಜ್ಞಾನವೇ ಅದಕ್ಕೆ ಸಾಕ್ಷಿಯಾಗಿದೆ. ಭಗವದ್ಗೀತೆಯನ್ನು ತೌರಾತ್ ಗ್ರಂಥವಾಗಿ ನಾವು ಹೇಳಿದರೇ ಸಂತೋಷಪಡುವುದು ಬಿಟ್ಟು ವಿಮರ್ಶಿಸುವುದೇನು? (5-68) ವಾಕ್ಯದಲ್ಲಿ "ಭಗವದ್ಗೀತೆ, ಬೈಬಲ್, ಈಗ ನಿಮಗೆ ಕೊಟ್ಟಿರುವ ಖುರಾನ್ ಗ್ರಂಥದಲ್ಲಿನ ಜ್ಞಾನವನ್ನು ಅನುಸರಿಸದೇ ಹೋದರೇ" ಎಂದು ಇದೆ. ಅದರ ಪ್ರಕಾರವೇ ನಾವು ಎಲ್ಲ ಗ್ರಂಥಗಳಲ್ಲಿನ ಜ್ಞಾನವನ್ನು ಒಪ್ಪಿಕೊಳ್ಳುತ್ತಿದ್ದೇವೆ. ನೀವು ಯಾಕೆ ಭಗವದ್ಗೀತೆಯನ್ನು ಪಕ್ಕಕ್ಕಿಟ್ಟು ತೌರತ್ ಎಂದರೇ ಭಗವದ್ಗೀತೆ ಅಲ್ಲವೆನ್ನುತ್ತಿದ್ದೀರ ಎಂದು ಕೇಳುತ್ತಿದ್ದೇನೆ. ಭಗವದ್ಗಿತೆ ತೌರಾತ್ ಒಂದಲ್ಲದೇ ಹೋದರೇ ತೌರಾತ್ ಗ್ರಂಥವನ್ನು ನೀವು ಎಲ್ಲಾದರೂ ತೋರಿಸಬಲ್ಲಿರಾ? ಎಂದು ಕೇಳುತ್ತಿದ್ದೇನೆ. ಅದನ್ನು ಯಾವ ಭಾಷೆಯಲ್ಲಿ ಬರೆದಿದ್ದಾರೋ ತಿಳಿದಿದೆಯಾ? ಎಂದು ಪ್ರಶ್ನಿಸುತ್ತಿದ್ದೇನೆ. ಕೈಲಾದರೇ ಹೇಳಿರೆಂದು ಹೇಳುತ್ತಿದ್ದೇವೆ.

ಬೈಬಲ್ ಗ್ರಂಥದಲ್ಲಿನ ಮತ್ತಾಯ ಸುವಾರ್ತೆ 22ನೇ ಅಧ್ಯಾಯದಲ್ಲಿನ 37ನೇ ವಚನವನ್ನು ಸ್ವಲ್ಪ ಹೇಳಿ, ಉಳಿದ ವಿಷಯವನ್ನು ಅಲ್ಲಿ ಇಲ್ಲದಿರುವುದನ್ನು ಹೇಳುವುದು ನಡೆದಿದೆ. "ನಿನ್ನ ಪೂರ್ಣ ಹೃದಯದಿಂದ, ನಿನ್ನ ಪೂರ್ಣಾತ್ಮದಿಂದ, ನಿನ್ನ ಪೂರ್ಣ ಮನಸ್ಸಿನಿಂದ ನಿನ್ನ ದೇವರಾದ ಪ್ರಭುವನ್ನು ಪ್ರೀತಿಸಬೇಕು" ಎಂದು ವಾಕ್ಯವಿದೆ. ಆದರೇ ನೀವು "ನಿನ್ನ ಪೂರ್ತಿ ವಿವೇಕದಿಂದ ನಿನ್ನ ನಿಜ ದೇವರು, ನಿಜ ಪ್ರಭುವನ್ನು ಆರಾಧಿಸುವುದು, ಅಧಿಕವಾಗಿ ಪ್ರೀತಿಸುವುದು, ವಿಗ್ರಹಾರಾಧನೆ ತ್ಯಜಿಸುವುದು' ಎಂದು ಬರೆದಿದ್ದೀರ. ನೀವು ಹೇಳಿರುವ ವಾಕ್ಯ ಅಲ್ಲಿ ಇಲ್ಲವೇ ಇಲ್ಲ. ಇಲ್ಲದ ವಾಕ್ಯವನ್ನು ನೀವು ಯಾಕೆ ಬರೆಯಬೇಕಾಗಿ ಬಂದಿದೆಯೋ ಹೇಳಿರೆಂದು ನಾವು ಕೇಳುತ್ತಿದ್ದೇವೆ. ನಾವು ವಿಗ್ರಹಾರಾಧ ಕರೆನ್ನುವಂತೆ ನೀವು ಇಲ್ಲದ ಪದವನ್ನು ಉಪಯೋಗಿಸಿ ನಮ್ಮನ್ನು ಆರೋಪ ಮಾಡುವ ನಿಮಿತ್ತ ಬೈಬಲ್‌ನಲ್ಲಿ ಇಲ್ಲದ ಪದವನ್ನು ಬರೆದಿದ್ದೀರ. ಅಲ್ಲಿ ವಿಗ್ರಹಾರಾಧನೆ ವಿಷಯವೇ ಹೇಳಲಿಲ್ಲ. ಆ ಪದವನ್ನೇ ಉಪಯೋಗಿಸಲಿಲ್ಲ. ನಮ್ಮನ್ನು ಅಪಹಾಸ್ಯ ಮಾಡಿದಂತೆ ನಾವು ವಿಗ್ರಹಾರಾಧನೆ ಮಾಡಿದಂತೆ ನೀವು ಹೇಳಿದ್ದೀರ. ನಾನು ವಿಗ್ರಹಾರಾಧಕನೆಂದೂ, ದೇವತೆಗಳನ್ನು ಆರಾಧಿಸುತ್ತೇನೆಂದೂ ಎಲ್ಲಾದರೂ ಹೇಳಿದ್ದೇವಾ? ಬರೆದಿದ್ದೇವಾ? ನೀವು ಹೇಳುವ ದೇವತೆಗಳು, ವಿಗ್ರಹಗಳು ನನ್ನನ್ನೇ ಗೌರವಿಸುತ್ತಿವೆಯೆಂದೂ, ನನ್ನ ಮಾತೇ ಕೇಳುತ್ತಿವೆಯೆಂದೂ ನಾನು ಕೆಲವು ಕಡೆ ಹೇಳುವುದು ನಡೆದಿದೆ. ಅಷ್ಟು ಧೈರ್ಯವಾಗಿ ದೇವತೆಗಳನ್ನು ಕುರಿತು ಹೇಳಿರುವವರು ಯಾರೂ ಇಲ್ಲ. ದೇವತೆಗಳನ್ನು ಕುರಿತು ಕೀಳಾಗಿ ಅವರಮುಂದೆ ಮಾತನಾಡಿದರೂ ಅವರನ್ನು ದೇವತೆಗಳು ಎಷ್ಟೋ ತೊಂದರೆಗಳ ಪಾಲು ಮಾಡಿದ್ದಾರೆಂದು ಸಹ ಹೇಳಿದ್ದೇವೆ.

ನೀವು ಅವಶ್ಯವಿಲ್ಲದ ಬೈಬಲ್‌ನಲ್ಲಿನ ಮತ್ತಾಯ ಸುವಾರ್ತೆ 22ನೇ ಅಧ್ಯಾಯದಲ್ಲಿ ಇರುವ ವಾಕ್ಯವನ್ನು ಅಸಂದರ್ಭವಾಗಿ ಬರೆದಿದ್ದೀರ. ಅದೇ ಮಾತನ್ನು ನಾನು ಪುನಃ ಕೇಳುತ್ತಿದ್ದೇನೆ. "ನಿನ್ನ ಪೂರ್ಣ ಹೃದಯ" ಎಂದು ಅಲ್ಲಿ ಹೇಳಿದ್ದಾರೆ. ಹೃದಯವೆಂದರೇ ಏನೋ ಸರಿಯಾದ ಅರ್ಥ ತಿಳಿದಿದೆಯಾ? ಎಂದು ಕೇಳುತ್ತಿದ್ದೇವೆ. "ನಿನ್ನ ಪೂರ್ಣ ಹೃದಯದಿಂದ, ನಿನ್ನ ಪೂರ್ಣ

ಆತ್ಮದಿಂದ, ನಿನ್ನ ಪೂರ್ಣ ಮನಸ್ಸಿನಿಂದ ನಿನ್ನ ದೇವರಾದ ಪ್ರಭುವನ್ನು ಪ್ರೀತಿಸು" ಎನ್ನುವುದು ದೇವರ ಧರ್ಮ ಶಾಸ್ತ್ರದಲ್ಲಿ ಮೊದಲ ಆಜ್ಞೆಯಾಗಿ ಇದ್ದಹಾಗೆ ಬೈಬಲ್ ಗ್ರಂಥದಲ್ಲಿ ಬರೆದಿದ್ದಾರೆ. ಎರಡನೆಯ ಆಜ್ಞೆ "ನಿನ್ನಹಾಗೆ ನಿನ್ನ ಪಕ್ಕದವನನ್ನು ಪ್ರೀತಿಸಬೇಕು" ಎಂದಿದೆ. ಈ ವಾಕ್ಯವನ್ನು ಕುರಿತು ನಾವು ಕೆಲವು ನೂರು ಜನರನ್ನು ವಿವರ ಕೇಳಿದ್ದೇವೆ. ಇಲ್ಲಿಯವರೆಗು ಅವುಗಳಿಗೆ ಸರಿಯಾದ ವಿವರ ಹೇಳಿರುವವರು ನಮಗೆ ಕಾಣಿಸಲಿಲ್ಲ. ಎರಡನೆಯ ಆಜ್ಞೆಯಾದ ವಾಕ್ಯದಲ್ಲಿ ಪಕ್ಕದವನೆಂಬ ವಿಷಯವೇ ಯಾರಿಗೂ ತಿಳಿಯದಂತೆ ಹೋಗಿದೆ. ಮೊದಲ ಆಜ್ಞೆಯ ವಿಷಯವು ಅಗಮ್ಯಗೋಚರವಾಗಿದೆ. ಅದರ ವಿವರ ಯಾರಿಗೂ ಇಲ್ಲಿಯವರೆಗು ತಿಳಿದಿಲ್ಲವೆಂದು ಹೇಳುತ್ತಿರುವಾಗ, ಆ ವಾಕ್ಯದಿಂದ ನಮ್ಮನ್ನೇ ಎದುರು ಪ್ರಶ್ನೆ ಹಾಕುವುದು ವಿಚಿತ್ರವಾಗಿದೆ. ಈ ವಾಕ್ಯಕ್ಕೆ ಶಾಸ್ತ್ರಬದ್ಧತೆಯಿಂದ ಕೂಡಿರುವ ವಿವರ, ನಾವು ಬರೆಯಲಾಗಿರುವ **"ಸುವಾರ್ತೆ ಬೈಬಲ್"** ಗ್ರಂಥದಲ್ಲಿ ತಿಳಿಯಬಲ್ಲದು.

**ಅವರ ಪ್ರಶ್ನೆ:- ನಿಜ ಆರಾಧ್ಯ ದೈವವನ್ನು ಬಿಟ್ಟು 'ಶ್ರೀ ಕೃಷ್ಣನನ್ನು ದೇವರೆಂದು' ನಿರೂಪಿಸುವ ಕೆಲಸದಲ್ಲಿ ತ್ರೈತಸಿದ್ಧಾಂತದವರಿದ್ದಾರೆ ಎಂದು ಒಬ್ಬ ಮುಸ್ಲಿಮ್ ಹೇಳುತ್ತಿದ್ದಾನೆ, ಆ ಮಾತು ನಿಜವೇನಾ?**

**ನಮ್ಮ ಉತ್ತರ:-** ನಾವು ಕೃಷ್ಣನನ್ನು ದೇವರೆಂದು ಹೇಳಲಿಲ್ಲ, ಭಗವಂತನೆಂದು ಹೇಳುತ್ತಿದ್ದೇವೆ. ಬಾಯಿದೆ ಏನು ಮತನಾಡಿದರೂ ಸರಿಹೋಗುತ್ತದೆ ಎಂದು ಅಂದುಕೊಳ್ಳಬಾರದು. ಕೃಷ್ಣನು ದೇವರೆಂದು ಹೇಳಬಾರದು, ಭಗವಂತನೆಂದು ಹೇಳಬೇಕೆಂದು ಬಹಳ ಸಲ ಹೇಳಿದ್ದೇವೆ. ಭಗವಂತನಿಗೂ ದೇವರಿಗೂ ವ್ಯತ್ಯಾಸ ತಿಳಿಯದಿದ್ದಾಗ ಅನವಶ್ಯ ಆರೋಪ ಮಾಡಬಾರದು. **"ದೇವರು ದೇವರಾಗಿ ಭೂಮಿ ಮೇಲೆ ಬರುವುದಿಲ್ಲ"** ಎಂದು ಸಹ ಅನೇಕ ಸಲ ಹೇಳಿದ್ದೇವೆ. ದೇವರಿಗಿರುವ ಪ್ರಾಥಮಿಕ ಜ್ಞಾನದ ಪ್ರಕಾರ ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ಆದರೇ ದೇವರು ತನ್ನ ಜ್ಞಾನವನ್ನು ಭೂಮಿಮೇಲೆ ತಿಳಿಸುವುದಕ್ಕೆ ದೇವರು ದೇವರಾಗಿ ಭೂಮಿಮೇಲೆ ಹುಟ್ಟುವುದಕ್ಕೆ

ಅವಕಾಶವಿಲ್ಲ. ಆದ್ದರಿಂದ ದೇವರು ಭಗವಂತನೆಂಬ ಮಾರು ವೇಷದಲ್ಲಿ ಹುಟ್ಟಿ ಮಾತನಾಡಬಹುದು. ಆಗ ದೇವರು ದೇವರಾಗಿಯೇ ಇದ್ದೂ ಭಗವಂತನಾಗಿ ಮಾತನಾಡುವ ಅವಕಾಶವಿದೆ. ಆಗ ಭಗವಂತನು ಮಾತನಾಡುವು ದರಿಂದ ದೇವರು ಮಾತನಾಡಿದಂತಲ್ಲ. ದೇವರ ಒಂದು ಮಾರುವೇಷ ಭಗವಂತನಾದ್ದರಿಂದ, ದೇವರು ಭಗವಂತನಾಗಿ ತನ್ನ ಜ್ಞಾನ ಪ್ರಜೆಗಳಿಗೆ ಹೇಳುವ ಅವಕಾಶವಿದೆ. ಆ ವಿಧವಾಗಿ ಹೊರಗೆ ಬಂದಿರುವ ಜ್ಞಾನವೇ ಭಗವದ್ಗೀತೆ ಬೈಬಲ್, ಇದೆಲ್ಲಾ ಜ್ಞಾನದೃಷ್ಠಿ ಇರುವವರಿಗೇ ತಿಳಿಯುವುದೆಂದು 'ಪಶ್ಯಂತಿ ಜ್ಞಾನಚಕ್ಷುಸಃ' ಎಂದು ಭಗವದ್ಗೀತೆಯಲ್ಲಿ ಹೇಳಿರುವುದಾಗಿದೆ. ಜ್ಞಾನದೃಷ್ಠಿ ಇಲ್ಲದವರಿಗೆ ಎಷ್ಟು ಹೇಳಿದರೂ ಅರ್ಥವಾಗುವುದಿಲ್ಲ. ದೇವರೇ ಆತನಿಗೆ ಅರ್ಥವಾಗದಂತೆ ಮಾಡಿದ್ದಾನೆಂದು, ಅಂಥವನನ್ನು ತನ್ನಿಂದ ದೂರ ಮಾಡುವೆನೆಂದು ಪ್ರತ್ಯೇಕಿಸಿ ಭಗವದ್ಗೀತೆಯಲ್ಲಿಯೂ, ಖುರಾನ್‌ನಲ್ಲಿಯೂ ದೇವರು ಹೇಳಿರುವುದಾಗಿದೆ.

**ಅವರ ಪ್ರಶ್ನೆ:– ನಿಜ ದೈವವನ್ನು ಆಶ್ರಯಿಸೆಂದು ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ್ದಾನೆ. ಹಾಗಿರುವಾಗ ನೀವು ನಿಜದೈವವನ್ನು ಬಿಟ್ಟು ಕೃಷ್ಣನನ್ನು ಯಾಕೆ ಆರಾಧಿಸುತ್ತಿದ್ದೀರ?**

**ನಮ್ಮ ಉತ್ತರ:–** ನಿಜ ದೈವವನ್ನು ಆರಾಧಿಸಿರೆಂದು ದೇವರು ನೇರವಾಗಿ ಯಾರೊಂದಿಗೂ ಮಾತನಾಡಿ ಹೇಳಲಿಲ್ಲ, ಆದಕಾರಣ ಕೃಷ್ಣನು ಭಗವದ್ಗೀತೆಯಲ್ಲಿ ನಿಜ ದೈವವನ್ನೇ ಆರಾಧಿಸಿ ಎಂದು ಹೇಳುತ್ತಿದ್ದಾನೆ. ಅದೇ ಭಗವದ್ಗೀತೆಯಲ್ಲಿ ಕೆಲವು ಕಡೆ ನಾನೇ ನಿಜ ದೈವವೆಂದು ಸಹ ಹೇಳಿದ್ದಾನೆ, ಅದನ್ನು ಸಹ ಮರೆಯಬಾರದು.

**ಅವರ ಪ್ರಶ್ನೆ:– ದೇವರು ಹುಟ್ಟುವಿಕೆ ಇಲ್ಲದವನು, ಆಕಾರವಿಲ್ಲದವನು ಎಂದು ಇದೆ. ಹಾಗಿರುವಾಗ ಹುಟ್ಟುವಿಕೆಯಿರುವ ಕೃಷ್ಣನನ್ನು ದೇವರೆಂದು ನೀವು ಹೇಗೆ ಹೇಳುತ್ತೀರ?**

**ನಮ್ಮ ಉತ್ತರ:-** ನಾವು ಕೃಷ್ಣನನ್ನು ಭಗವಂತನೆಂದು ಹೇಳುತ್ತಿದ್ದೇವೆ. ನಂತರ ಭಗವಂತನು ಯಾರೆಂಬ ಪ್ರಶ್ನೆಗೆ ಉತ್ತರವಾಗಿ ಭಗವಂತನು ದೇವರೇ ಎಂದು ಹೇಳುತ್ತಿದ್ದೇವೆ. ನೇರವಾಗಿ ದೇವರನ್ನು ಕೃಷ್ಣನೆಂದು ಹೇಳಲಿಲ್ಲ. ಶಾಸ್ತ್ರಬದ್ಧ ಪ್ರಕಾರ ಮಾತನಾಡಿದರೇ ರೂಪ ಹುಟ್ಟುವಿಕೆ ಇಲ್ಲದ ದೇವರನ್ನು, ಹೇಳದೇನೆ ಯಾರೂ ಗುರುತಿಸಲಾರರು. ಸರೀ! ಹೇಳುವುದಕ್ಕೆ ಆತನು (ದೇವರು) ಯಾರಿಗೂ ತಿಳಿಯುವುದಿಲ್ಲ. ಆದ್ದರಿಂದ ದೇವರೇ ಹೇಳಬೇಕು. ದೇವರಿಗೆ ಹುಟ್ಟು ಆಕಾರ ಇಲ್ಲದಿರುವುದರಿಂದ ಹೇಳಲಿಲ್ಲ. ಆದ್ದರಿಂದ ಮಧ್ಯವರ್ತಿಯಾಗಿ ಭಗವಂತನೆಂಬ ಪಾತ್ರವನ್ನು ದೇವರೇ ಪೋಷಿಸಿ, ತನ್ನ ವಿಧಾನವನ್ನು ತಾನೇ ಹೇಳಿಹೋಗಿದ್ದಾನೆ. ಒಬ್ಬ ದೇವರು ಹೊರತು ಭಗವಂತನು ಯಾರೂ ಆಗಲಾರನು, ಒಬ್ಬ ಭಗವಂತನು ಹೊರತು ದೇವರು ಯಾರೂ ಆಗಲಾರನು. ದೇವರು ಒಬ್ಬನೇ, ಭಗವಂತನು ಒಬ್ಬನೇ. ದೇವರು ಮನುಷ್ಯರೊಂದಿಗೆ ಭಗವಂತನಾಗಿ ಮಾತನಾಡಬಲ್ಲನು. ದೇವರಾಗಿ ಮಾತನಾಡಲಾರನು. ಭಗವಂತನೊಬ್ಬನೇ ಮನುಷ್ಯನೊಂದಿಗೆ ಮಾತನಾಡಿ ದೇವರ ಜ್ಞಾನವನ್ನು ಹೇಳಬಲ್ಲನು. ಭೂಮಿಮೇಲೆ ಭಗವಂತನು ಹೊರತು ಮನುಷ್ಯನಾದವನು ಯಾರೂ ದೇವರ ಜ್ಞಾನವನ್ನು ಹೇಳಲಾರನು. ಭಗವಂತನು ಮನುಷ್ಯ ಆಕಾರದಲ್ಲಿದ್ದರೂ ಮನುಷ್ಯನಲ್ಲ. ಮನುಷ್ಯನ ಶರೀರವನ್ನು ಧರಿಸಿ ಹುಟ್ಟುತ್ತಿದ್ದಾನೆ. ಭಗವಂತನು ಶರೀರವನ್ನು ಧರಿಸಿ ಹುಟ್ಟಲಿಲ್ಲ. ದೇವರಿಗೆ ಹುಟ್ಟುವಿಕೆಯಿಲ್ಲ, ಹಾಗೆಯೇ ಭಗವಂತನಿಗೆ ಹುಟ್ಟುವಿಕೆಯಿಲ್ಲ. ಭಗವಂತನು ಮನುಷ್ಯನಂತೆ ಕಾಣಿಸಿದರೂ ಮನುಷ್ಯನ ಹಾಗೆ ಹುಟ್ಟುತ್ತಿದ್ದಾನೆ ಎಂದು ಯಾರಾದರೂ ಹೇಳಬಲ್ಲಿರಾ? ಭಗವಂತನು ಹುಟ್ಟಿರುವಂತೆ ಶಾಸ್ತ್ರಬದ್ಧವಾಗಿ ಹೇಳಬಲ್ಲಿರಾ?

**ಅವರಪ್ರಶ್ನೆ:- ತ್ರೈತಸಿದ್ಧಾಂತ ಪ್ರಚಾರಕರು ಅಂತಿಮ ದಿನ ತೀರ್ಪನ್ನು ನಂಬುವುದಿಲ್ಲ. ತೀರ್ಪು ದಿನವೇ ಇಲ್ಲವೆನ್ನುತ್ತಿದ್ದಾರೆ. ಖುರಾನ್‌ನಲ್ಲಿ ಒಂದು ಆಯತ್‌ನಲ್ಲಿ "ಓ ಪ್ರವಕ್ತಾ! ಮೊದಲ ಸಲ ಹುಟ್ಟಿಸಿರುವವನೇ ಮತ್ತೊಂದು ಸಲ ಬದುಕಿಸುತ್ತಾನೆ" ಎಂದು ಅವರೊಂದಿಗೆ ಹೇಳು ಎಂದೂ ಕೆಲವು ನೂರು ಸಲ ಹೇಳುವುದು ನಡೆದಿದೆ ಎಂದು ಅವರು ಹೇಳುತ್ತಿದ್ದಾರೆ. ನೀವು ಖುರಾನ್‌ನಲ್ಲಿ ಹೇಳಿರುವ ತೀರ್ಪು ದಿನವನ್ನು ನಂಬುವುದಿಲ್ಲವಾ?**

**ನಮ್ಮ ಉತ್ತರ:–** ತೀರ್ಪು ದಿನವನ್ನು ಕುರಿತು ಅಂತಿಮ ದೈವ ಗ್ರಂಥದಲ್ಲಿಯೇ ಅಲ್ಲದೇ ಐದುಸಾವಿರ ವರ್ಷಗಳ ಕೆಳಗೆ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಕೂಡಾ ಹೇಳುವುದು ನಡೆದಿದೆ. ನಾವು ತೀರ್ಪು ದಿನವನ್ನು ನಂಬುವುದೇ ಅಲ್ಲ, ವಿವರಿಸಿ ಕೂಡಾ ಹೇಳಿದ್ದೇವೆ. ಆದರೇ ತೀರ್ಪು ದಿನವನ್ನು ಕುರಿತು ಸರಿಯಾದ ಅವಗಾಹನೆ ನಿಮಗೇ ಇಲ್ಲವೆನ್ನುತ್ತಿದ್ದೇನೆ. ಯಾವಾಗಲೋ ಪ್ರಳಯದಲ್ಲಿ ತೀರ್ಪು ದಿನದಂದು ದೇವರು ಸತ್ತವರೆಲ್ಲರನ್ನೂ ಸಮಾಧಿಗಳಿಂದ ಎಬ್ಬಿಸಿ ತೀರ್ಪು ನಿರ್ಣಯಿಸುವನು ಎನ್ನುವುದನ್ನೇ ನಾವು ಪೂರ್ತಿಯಾಗಿ ನಿರಾಕರಿಸುತ್ತಿದ್ದೇವೆ. ದೇವರು ಹಾಗೆ ಯಾವಾಗಲೂ ಹೇಳಲಿಲ್ಲ. ಅಲ್ಲಿ ಹೇಳಿರುವ ಪ್ರಳಯವು ಪ್ರಪಂಚಕ್ಕೆ ಸಂಬಂಧಿಸಿರುವುದಲ್ಲ, ನಿನಗೆ ನಿನ್ನ ಶರೀರಕ್ಕೆ ಸಂಬಂಧಿಸಿರುವುದು ಎಂದು ಹೇಳುತ್ತಿದ್ದೇವೆ. ನಿನಗೆ ಪ್ರಳಯ ಏರ್ಪಟ್ಟು ನಿನ್ನ ಶರೀರ ನಾಶವಾದ ದಿನ ದೇವರು ನಿನ್ನನ್ನು ಪುನಃ ಸಮಾಧಿಯಿಂದ ಎಬ್ಬಿಸುವನು ಎಂದು ನಾವು ಕೂಡಾ ಹೇಳುತ್ತಿದ್ದೇವೆ. ಪ್ರಳಯವೆಂದರೇ ನಿನ್ನ ಮರಣವೆಂದೂ, ಪುನಃ ಏಳುವುದು ಎಂದರೇ ಎರಡನೆಯ ಜನ್ಮವೆಂದೂ, ಸಮಾಧಿಯಿಂದ ಎಂದರೇ ಅಪಸ್ಮಾರಕ ಸ್ಥಿತಿಯಿಂದ ಎಂದೂ ದೇವರು ಹೇಳಿರುವಾಗ, ನೀವು ಅದನ್ನು ಬೇರೆ ವಿಧವಾಗಿ ಅರ್ಥಮಾಡಿಕೊಳ್ಳುವುದು ನಡೆದಿದೆ. "ದೇವರು ಸಮಾಧಿ ಸ್ಥಿತಿಯಿಂದ ಮನುಷ್ಯನನ್ನು ಎಬ್ಬಿಸಿದಾಗ ಆತನು ನಗ್ನವಾಗಿ ಶರೀರದ ಮೇಲೆ ಬಟ್ಟೆಗಳಿಲ್ಲದೇ ಎಬ್ಬಿಸಲ್ಪಡುವನೆಂದು" ಮುಹಮ್ಮದ್ ಪ್ರವಕ್ತರವರು ಹೇಳಿದರೇ, ಆತನ ಚಿಕ್ಕ ಹೆಂಡತಿ ಆಯಿಷಾ ಎಂಬ ಹೆಸರಿರುವ ಆಕೆ "ದೇವರು ಪುನಃ ಬದುಕಿಸಿದಾಗ, ಸಮಾಧಿಯಿಂದ ಎಬ್ಬಿಸಿದಾಗ ಬಟ್ಟೆ ಇಲ್ಲದೇ ಇದ್ದರೇ ಹೆಂಗಸರಾದ ನಮಗೆ ನಾಚಿಕೆಗೇಡು ಅಲ್ಲವೇ, ಅವಮಾನವಲ್ಲವೇ' ಎಂದು ಕೇಳಿದಳು. ಆಗ ಮುಹಮ್ಮದ್ ಪ್ರವಕ್ತರವರು ಸಮಾಧಾನ ಹೇಳುತ್ತಾ ಹೀಗೆ ಎಂದನು. **"ಮನುಷ್ಯನನ್ನು ಪುನಃ ಸಮಾಧಿಯಿಂದ ಎಬ್ಬಿಸಿದಾಗ ಆತನಿಗೆ ಪ್ರಪಂಚ ಗಮನವಿರುವುದಿಲ್ಲ. ನಾನು ಹೆಣ್ಣು, ನಾನು ಗಂಡು ಎಂಬ ಜ್ಞಾಪಕವಿಲ್ಲದೇ ಇರುತ್ತಾರೆ"** ಎಂದು ಹೇಳಿದ್ದಾನೆ. ಹಾಗೆ ಹೇಳಿರುವುದರಿಂದ ಮನುಷ್ಯ ತಾಯಿ ಗರ್ಭದಿಂದ ಮತ್ತೊಂದು ಸಲ ಹುಟ್ಟಿದಾಗ ಶಿಶು ದಶೆಯಲ್ಲಿ ಇರುತ್ತಾನೆ, ಆದಕಾರಣ ಆಗ ಹೆಣ್ಣು, ಗಂಡು ಎಂಬ ಜ್ಞಾಪಕ ಇರುವುದಿಲ್ಲವೆಂದೇ ಪ್ರವಕ್ತರವರು ತಿಳಿಸಿದ್ದಾರೆ.

ಅಷ್ಟೇ ಅಲ್ಲದೆ ಮನುಷ್ಯನಿಗೆ ಎರಡನೆಯ ಜನ್ಮ ಎಂದರೇ ಪುನರ್ಜನ್ಮಗಳಿವೆ ಎಂದು ಹೇಳುವುದಕ್ಕೆ ಖುರಾನ್ ಗ್ರಂಥದಲ್ಲಿ ಎಷ್ಟೋ ಸಾಕ್ಷಿಗಳಿವೆ. ಖುರಾನ್ ಗ್ರಂಥದಲ್ಲಿ ಹೇಳಿರುವುದನ್ನು ಅರ್ಥಮಾಡಿಕೊಳ್ಳುವ ಶಕ್ತಿ ಇಲ್ಲದವರು, ಪ್ರವಕ್ತ ತನ್ನ ಹೆಂಡತಿಗೆ ವಿವರವಾಗಿ ಹೇಳಿರುವ ಮಾತುಗಳನ್ನು ಕೇಳಿದ ನಂತರ ಸಹ ಇತ್ತ ಪ್ರವಕ್ತ ಮಾತನ್ನಾಗಲೀ, ಅತ್ತ ಖುರಾನ್ ಗ್ರಂಥದಲ್ಲಿ ಅಲ್ಲಾಹ್ ಹೇಳಿರುವ ಮಾತನ್ನಾಗಲೀ ಲೆಕ್ಕಮಾಡದೆ, ಅವರಿಗೆ ಯಾವುದು ತಿಳಿದರೇ ಅದೇ ನಿಜವೆನ್ನುವವರನ್ನು ನಾನಾಗಲೀ, ಆ ದೇವರಾಗಲೀ ಏನು ಮಾಡಲಾರನು. ಅಂದರೇ ಅವರನ್ನು ಯಾರೂ ಬದಲಾಯಿಸಲಾರರು ಎಂದು ಅನ್ನುತ್ತಿದ್ದೇವೆ. ಖುರಾನ್ ಗ್ರಂಥದಲ್ಲಿ ಈ ವಿಷಯವನ್ನು ಕುರಿತು ಎಲ್ಲಿ ಏನು ಹೇಳಿದ್ದಾರೋ ಸ್ವಲ್ಪ ನೋಡೋಣ.

**(36–68) "ನಾವು ವೃದ್ಧಾಪ್ಯಕ್ಕೆ ಸೇರಿದವರನ್ನು ಮತ್ತೇ ಜನನ ಸ್ಥಿತಿಗೆ ತೆಗೆದುಕೊಂಡು ಹೋಗುತ್ತೇವೆ. ಆದರೂ ಅವರು ಅರ್ಥಮಾಡಿಕೊಳ್ಳುವುದಿಲ್ಲ ಯಾಕೆ?"** ಇಲ್ಲಿ ಈ ವಾಕ್ಯದಲ್ಲಿ ಅಲ್ಲಾಹ್ ಏನಾದರೂ ಮುಚ್ಚಿಟ್ಟು ಹೇಳಿದ್ದಾನಾ? ಏನೂ ಇಲ್ಲ. ಮನುಷ್ಯ ಮುದುಕನಾದ ನಂತರ ಆತನನ್ನು ಪುನಃ ಜನನ ಸ್ಥಿತಿಗೆ ಕರೆದುಕೊಂಡು ಹೋಗುತ್ತೇನೆ ಎಂದಿದ್ದಾನೆ. ಎಲ್ಲಾಕಡೆ ಅದೇ ನಡೆಯುತ್ತಿದೆ. ವೃದ್ಧಾಪ್ಯಕ್ಕೆ ಸೇರಿದ ಮನುಷ್ಯನನ್ನು ದೇವರು ಆತನ ಶರೀರವನ್ನು ಬದಲಾಯಿಸಿ ಪುನಃ ಶಿಶುವಾಗಿ ಹುಟ್ಟಿಸುತ್ತಿದ್ದಾನೆ ಆ ಮಾತನ್ನೇ ಮುದುಕನನ್ನು ಪುನಃ ಜನ್ಮಿಸುವ ಸ್ಥಿತಿಗೆ ತೆಗೆದುಕೊಂಡು ಹೋಗುತ್ತೇನೆ ಎಂದು ಹೇಳಿದ್ದಾನೆ. ಅದನ್ನು ಸಹ ಅರ್ಥಮಾಡಿಕೊಳ್ಳಲಾರದೇ ಪ್ರಳಯ ಕಾಲದಲ್ಲಿ ಎಂದರೇ ಎಲ್ಲಾ ನಾಶವಾಗಿಹೋದ ನಂತರ ದೇವರು ಪುನಃ ಎಬ್ಬಿಸುತ್ತಾನೆಂದು ಹೇಳಿದಂತೆ ಕೆಲವರು ಹೇಳುತ್ತಿರುವಾಗ, ಅದು ದೇವರಿಗೆ ಸರಿಹೋಗದೆ ಈ ವಾಕ್ಯದ ಕೊನೆಯಲ್ಲಿ **'ಆದರೂ ಅವರು ಅರ್ಥಮಾಡಿಕೊಳ್ಳುವುದಿಲ್ಲ ಯಾಕೆ?'** ಎಂದು ಹೇಳಿದ್ದಾನೆ. ದೇವರು ಹಾಗೆ ಪ್ರಶ್ನಿಸಿದ ನಂತರವಾದರೂ ಹಿಂತಿರುಗಿ ಆಲೋಚಿಸದೆ ನಮ್ಮ ಉದ್ದೇಶವು ಸರಿಯಾದುದೇ ಅಂದುಕೊಂಡರೇ ಅವನು ಅಲ್ಲೇ ಇರುತ್ತಾನೆ.

**(40–11) "ನಮ್ಮ ಪ್ರಭೂ! ನೀನು ನಮಗೆ ಎರಡು ಸಲ ಸಾವು ಕೊಟ್ಟಿರುವೆ. ಎರಡು ಸಲ ಬದುಕು ನೀಡಿರುವೆ. ಈಗ ನಮ್ಮ ಪಾಪಗಳನ್ನು ಒಪ್ಪಿಕೊಳ್ಳುತ್ತಿದ್ದೇವೆ. ಮತ್ತು ಈಗ ನಾವು ಹೊರ ಬೀಳುವ ಮಾರ್ಗ ಯಾವುದಾದರೂ ಇದೆಯಾ? ಎಂದು ವಿನಂತಿಸಿಕೊಳ್ಳುತ್ತೇವೆ."** ಈ ವಾಕ್ಯದಲ್ಲಿ 'ಎರಡು ಬಾರಿ ಸಾವು, ಎರಡುಬಾರಿ ಬದುಕು ಕೊಟ್ಟಿರುವೆ' ಎಂದು ಹೇಳಿರುವಾಗ ಪ್ರಳಯ ಕಾಲದವರೆಗು ಇರುವುದು, ಆಗ ಸಮಾಧಿಗಳಿಂದ ಏಳುವುದು ಎಂಬ ಮಾತು ಅಸತ್ಯವೆಂದು ತಿಳಿದುಹೋಗುತ್ತಿದೆ. ಪ್ರಳಯ ಕಾಲದವರೆಗು ಅಂತಿಮ ದಿನದವರೆಗೆ ಇದ್ದು, ದೇವರು ಸಮಾಧಿಗಳಿಂದ ಎಬ್ಬಿಸಿದಾಗ ಎದ್ದಂತಾದರೆ ಒಂದು ಸಲ ಸಾವು, ಒಂದು ಸಲ ಹುಟ್ಟುವಿಕೆಯೇ ಆಗುವುದು. ಇದನ್ನನುಸರಿಸಿ ಬಹಳಜನ ಮುಸ್ಲಿಮ್‌ರು ಹೇಳಿಕೊಳ್ಳುವ ಮಾತು ಅಸತ್ಯವೆಂದು, ಅವರು ತನ್ನ ಜ್ಞಾನವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲವೆಂದು ತಿಳಿಸುವುದಕ್ಕೇ ಈ ವಾಕ್ಯವನ್ನು ದೇವರು ಹೇಳಿದ್ದಾನೆಂದು ತಿಳಿಯುತ್ತಿದೆ. ಈ ಒಂದು ವಾಕ್ಯವನ್ನು ನೋಡಿದ ನಂತರ ಸಹ ಹಳೆಯಹಾಡು ಹಾಡುವವರನ್ನು ದೇವರು ಕೂಡಾ ಏನೂ ಮಾಡಲಾರನು. ಅವರನ್ನು ಗಾಳಿಗೆ ಬಿಟ್ಟುಬಿಡುತ್ತಾನೆ. ಅವರಿಗೆ ಶಾಸ್ತ್ರಬದ್ಧತೆ, ಗ್ರಂಥ ಪ್ರಮಾಣ ಯಾವುದೂ ಇಲ್ಲದಿರುವುದರಿಂದ ಅವರಿಗೆ ಇಷ್ಟ ಬಂದಂತೆ ಅವರು ಹೋಗಬಲ್ಲರು. ಖುರಾನ್ ಗ್ರಂಥದಲ್ಲಿ ಪ್ರಳಯ, ಅಂತಿಮ ದಿನ ಎಂದು ಇದೆ. ಪ್ರಳಯ ದಿನವೆಂದರೇ ಶರೀರ ನಾಶವಾದ ದಿನವೆಂದು, ಅಂತಿಮ ದಿನವೆಂದರೇ ಕೊನೆಯದಿನ ಮರಣವೆಂದು ಯಾಕೆ ಅರ್ಥಮಾಡಿಕೊಳ್ಳಬಾರದು? ಕೆಲವು ಕೋಟಿಗಳ ವರ್ಷಗಳಿಗೆ ಪ್ರಳಯ ಬರುತ್ತದೆ ಎಂದು ಯಾಕೆ ಅಂದುಕೊಳ್ಳಬೇಕು?

**(53–44) "ನಿಶ್ಚಯವಾಗಿ ಆತನು ಮರಣಿಸುವಂತೆ ಮಾಡುವವನು ಮತ್ತು ಜೀವನವನ್ನು ಪ್ರಸಾದಿಸುವವನು"** ಈ ವಾಕ್ಯದಲ್ಲಿ ಅಲ್ಲಾಹ್ ಎನ್ನಲ್ಪಡುವ ದೇವರು ಮನುಷ್ಯನಿಗೆ ಮರಣವನ್ನು ಕೊಡುತ್ತಿದ್ದಾನೆ, ಮನುಷ್ಯ ಮರಣಿಸಿದ ಕೂಡಲೇ ಸ್ವಲ್ಪವಾದರೂ ತಡವಿಲ್ಲದೇ ಅವನಿಗೆ ಹೊಸ ಜೀವನವನ್ನು ಪ್ರಸಾದಿಸುತ್ತಿದ್ದಾನೆ. ಈ ವಿಷಯ ನಿಮಗೆ ಚೆನ್ನಾಗಿ ಅರ್ಥವಾಗಬೇಕೆಂದರೇ

ನಾವು 1980 ರಲ್ಲಿ ಬರೆದಿರುವ ಅಂದರೇ ಇಲ್ಲಿಗೆ 35 ವರ್ಷಗಳ ಹಿಂದೆ ಬರೆದಿರುವ **"ಜನನ ಮರಣ ಸಿದ್ಧಾಂತ"** ಎಂಬ ಗ್ರಂಥವನ್ನು ಓದಿರಿ. ಓದಿದರೇ ಸುಲಭವಾಗಿ ತಿಳಿಯಬಲ್ಲದು. ಒಬ್ಬ ಮನುಷ್ಯನಿಗೆ ಅವನ ಶರೀರದಲ್ಲಿ ಏರ್ಪಟ್ಟ ಪ್ರಳಯದ ಮೂಲಕ, ಅಂದರೇ ಅವಯವಗಳ ನಾಶದ ಮೂಲಕ ಮರಣವು ಸಂಭವಿಸುತ್ತಿದೆ. ಮನುಷ್ಯ ಮರಣಿಸಿದ ಸೆಕೆಂಡಿನಲ್ಲೇ ಮತ್ತೊಂದು ಶರೀರವನ್ನು ಸೇರುತ್ತಿದ್ದಾನೆ. ಮರಣಿಸಿದ ಒಂದು ಸೆಕೆಂಡ್ ಅವಧಿಯಲ್ಲಿಯೇ, ಅವನ ಎರಡನೆಯ ಜನ್ಮಕ್ಕೆ ಬೇಕಾಗಿರುವ ಕರ್ಮವೆಲ್ಲವೂ ಅವನು ಮಾಡಿಕೊಂಡಿರುವ ಕರ್ಮಪತ್ರದಿಂದ ನಿರ್ಣಯಿಸಲ್ಪಡುತ್ತಿದೆ. ಒಬ್ಬ ಮನುಷ್ಯನಿಗೆ ಮರಣ ಕೊಡುವವನು ದೇವರೇ, ಆತನನ್ನು ಕೂಡಲೇ ಜನ್ಮಕ್ಕೆ ಕಳುಹಿಸಿ ಬದುಕಿಸುವವನು ದೇವರೇ. ಇದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಅನೇಕ ಸಲ ಹೇಳಿದ್ದರೂ, ಅಲ್ಲಾಹ್ ಹೇಳಿರುವ ಮಾತನ್ನು ನಿರಾಕರಿಸಿ, ತಮ್ಮ ಹಿರಿಯರು, ತಮ್ಮ ಗುರುಗಳು ಹೇಳಿರುವ ಮಾತನ್ನೇ ಮುಸ್ಲಿಮ್‌ರೆಲ್ಲರೂ ನಂಬುತ್ತಾ, ನಿಜವಾದ ಸತ್ಯವನ್ನು ಅರ್ಥಮಾಡಿ ಕೊಳ್ಳದಂತೆ ಹೋಗುವುದೇ ಅಲ್ಲದೇ, ಅರ್ಥ ಮಾಡಿಕೊಂಡವರನ್ನು ಸಹಿತ ಅಜ್ಞಾನಿಗಳೆಂದು ಹೇಳುತ್ತಿದ್ದಾರೆ. ಯಾರು ಅಜ್ಞಾನಿಗಳಾದರೂ ಮುಳುಗಿ ಹೋಗುವುದು ಏನೂ ಇಲ್ಲ ಆದರೇ, ಒಂದು ಸಲ ನಾವು ತಿಳಿದುಕೊಂಡಿರುವ ಜ್ಞಾನ ಸತ್ಯವೇನಾ? ಎಂದು ಹಿಂತಿರುಗಿ ನೋಡಿಕೊಳ್ಳಿ. ಹಾಗೆ ನೋಡಿಕೊಳ್ಳುವು ದರಿಂದ ನಷ್ಟಹೋಗುವುದು ಏನೂ ಇಲ್ಲ ಅಲ್ಲವೇ! ದೇವರು ಹೇಳಿರುವುದು ಸತ್ಯಬದ್ಧ ವಾಗಿರುವುದರಿಂದ ಅದು ನಡೆದೇ ನಡೆಯುತ್ತದೆ. ಪ್ರತ್ಯಕ್ಷವಾಗಿ ನಮ್ಮ ಮುಂದೆಯೇ ಎಷ್ಟೋ ಜನ ಮರಣವನ್ನು ಹೊಂದುತ್ತಿದ್ದಾರೆ. ಎಷ್ಟೋ ಜನ ಜನನವನ್ನು ಹೊಂದುತ್ತಿದ್ದಾರೆ. ಇವರೆಲ್ಲಾ ಎಲ್ಲಿಗೆ ಹೋಗುತ್ತಿದ್ದಾರೆ? ಎಲ್ಲಿಂದ ಬರುತ್ತಿದ್ದಾರೆ ಎಂದು ನೀವು ಯಾಕೆ ಆಲೋಚಿಸಲಾರದೆ ಹೋಗುತ್ತಿದ್ದೀರ? ಯಾವುದನ್ನು ಮೊದಲು ಕೇಳಿದರೇ ಅದೇ ನಿಜವೆಂದುಕೊಳ್ಳುವ ಸ್ವಭಾವವನ್ನು ಬಿಟ್ಟು, ಯಾವುದು ಸತ್ಯವೆಂದು ಆಲೋಚಿಸುವವರಿಗೇ ದೇವರ ಜ್ಞಾನ ಅರ್ಥವಾಗಬಲ್ಲದು.

ಹಿಂದೂ ಮತದಲ್ಲಿರುವ ದೈವಗ್ರಂಥವಾದ ಭಗವದ್ಗೀತೆಯನ್ನು ತಪ್ಪುದಾರಿ ಹಿಡಿಸುವುದಕ್ಕೆ ಭಗವದ್ಗೀತೆಗಿಂತಲೂ ಮೊದಲೇ ವೇದಗಳು, ಪುರಾಣಗಳು, ಉಪನಿಷತ್ತುಗಳು ತಯಾರಿ ಮಾಡಲ್ಪಟ್ಟಿವೆ. ಆದರೇ ನಾವು ಅವುಗಳನ್ನು ನಿರಾಕರಿಸಿ ಭಗವದ್ಗೀತೆ ಜ್ಞಾನವನ್ನು ಆಶ್ರಯಿಸುತ್ತಿದ್ದೇವೆ. ಹಾಗೆಯೇ ಉಳಿದ ಮತಗಳಲ್ಲಿ ದೈವಗ್ರಂಥದಲ್ಲಿ ವಿಶೇಷವಾದ ಜ್ಞಾನವಿದ್ದರೂ, ಅದನ್ನು ನಿರಾಕರಿಸಿ ಅವರು ಇತರ ಗ್ರಂಥಗಳನ್ನು ಆಶ್ರಯಿಸುತ್ತಿದ್ದಾರೆ. ಅದರಿಂದ ದೈವಗ್ರಂಥಗಳಲ್ಲಿನ ಜ್ಞಾನವನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವುದು ನಡೆಯುತ್ತಿದೆ. ಪ್ರಶ್ನೆ ಬಂದರೆ ಕೇಳಬಾರದೆಂದೂ, ಹೇಳಿದನ್ನೇ ಕೇಳಬೇಕೆಂದು ಕೆಲವರು ಇತರ ಮತಗಳಲ್ಲಿ ಹೇಳುತ್ತಾ, ಪ್ರಜೆಗಳನ್ನು ಜ್ಞಾನದ ಕಡೆ ಹೋಗದಂತೆ ಮಾಡುತ್ತಿದ್ದಾರೆ. ದೈವಗ್ರಂಥದಲ್ಲಿನ ವಾಕ್ಯವನ್ನು ಕೂಡಾ ತಮ್ಮ ಮಾತಿನ ಮುಂದೆ ಬಿಟ್ಟುಹಾಕೆನ್ನುತ್ತಿದ್ದಾರೆ. (15–29) ವಾಕ್ಯದಲ್ಲಿ **"ನಾನು ನನ್ನ ಆತ್ಮವನ್ನು ಊದಿ ಕಳುಹಿಸಿದವನ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿ"** ಎಂದು ಅಲ್ಲಾಹ್ ಹೇಳಿದ್ದರೂ, ಮತ ಧರ್ಮದ ಪ್ರಕಾರ ನಾವು ಯಾರಿಗೂ ನಮಸ್ಕರಿಸಬಾರದೆಂದು ಹೇಳಿಕೊಳ್ಳುವುದನ್ನು ನೋಡಿದರೇ ಮತದ ಮುಂದೆ ದೇವರು ಕೂಡಾ ಅವರ ಲೆಕ್ಕದಲ್ಲಿ ಕಡಿಮೆಯವನೇ ಎಂದು ಅನಿಸುತ್ತದೆ. ದೇವರ ವಾಕ್ಯ ಮತ ನಿಯಮಕ್ಕಿಂತಲೂ ಕಡಿಮೆ ಎಂದು ಅರ್ಥವಾಗುತ್ತಿದೆ. ಒಂದು ಕಡೆ ಅಲ್ಲಾಹ್ ದೊಡ್ಡವನು ಎಂದು ಹೇಳುತ್ತಾ, ಮತ್ತೊಂದುಕಡೆ ಅಲ್ಲಾಹ್ ಮಾತನ್ನು ಕೂಡಾ ಲೆಕ್ಕಮಾಡದೆ, ನಮಗೆ ನಮ್ಮ ಮತವೇ ಮುಖ್ಯವೆನ್ನುವಂತೆ 15–29 ವಾಕ್ಯವನ್ನು ಲೆಕ್ಕ ಮಾಡದಂತಿದ್ದಾರೆ. ಅಂಥವರು ನಮ್ಮನ್ನು ಸಾಲಕ್ಕೆ ತಂದುಕೊಂಡ ಜ್ಞಾನವಿರುವವನು ಎನ್ನುವುದು ಎಂಥದ್ದೋ, ಎಂಥವರು ಆ ಮಾತನ್ನು ಅನ್ನುತ್ತಿದ್ದಾರೋ ಪ್ರಜೆಗಳು ಗ್ರಹಿಸುತ್ತಿದ್ದಾರೆ. ಎಂದಿಗಾದರೂ ಸತ್ಯಬದ್ಧವಾದ ಜ್ಞಾನವು ನಿಲ್ಲಬಲ್ಲದು. ಅಸೂಯೆ ಮಾತುಗಳು ನಿಲ್ಲಲಾರವು.

**(53–46,47) "ಪ್ರಸಾರ ಮಾಡಿಸಿದ ವೀರ್ಯ ಬಿಂದುವಿನಿಂದ ಮತ್ತೊಂದು ಜೀವನವನ್ನು ಪ್ರಸಾದಿಸುವುದು ದೇವರಿಗೇ ಸಲ್ಲುತ್ತದೆ"** ಎಂದು ಇದೆ. ಈ ವಾಕ್ಯದ ಪ್ರಕಾರ ಮನುಷ್ಯ ಸತ್ತುಹೋದರೇ ತಂದೆ ವೀರ್ಯದಿಂದಲೇ ತಾಯಿಗರ್ಭದಿಂದ

ಎರಡನೆಯ ಜನ್ಮ ಉಂಟಾಗುತ್ತಿದೆ ಎಂದು ಸ್ಪಷ್ಟವಾಗಿ ಹೇಳಿದಂತೆ ತಿಳಿಯುತ್ತಿದೆ. ಎರಡನೆಯ ಜನ್ಮ ಕೂಡಾ ವೀರ್ಯ ಬಿಂದುವಿನ ಮೂಲಕವೇ ಉಂಟಾಗುತ್ತಿದೆ ಎಂದು ಎಲ್ಲರಿಗೂ ಅರ್ಥವಾಗುವಂತೆ ದೇವರು ಹೇಳಿದರೂ ಆ ಮಾತನ್ನು ಕೇಳದೆ, ಗ್ರಂಥದಲ್ಲಿ ಇಲ್ಲದ ಮಾತನ್ನು ಹಿಡಿದುಕೊಂಡು ಸತ್ತುಹೋದವನು ಪ್ರಪಂಚ ನಾಶವಾಗುವವರೆಗು ಹುಟ್ಟುವುದಿಲ್ಲ ಎಂದು ಹೇಳುವುದೂ, ಪ್ರಳಯ ಕಾಲದಲ್ಲಿ ಭೂಸಮಾಧಿಯಿಂದ ಎಬ್ಬಿಸಲ್ಪಡುತ್ತಾನೆ ಎಂದು ಹೇಳುವುದೂ, ದೇವರ ಮಾತನ್ನು ಧಿಕ್ಕರಿಸಿದಂತೆ ಅಲ್ಲವೇ! ಮುಹಮ್ಮದ್ ಪ್ರವಕ್ತರವರು ಜಿಬ್ರಯೇಲ್ ಹೇಳಿರುವ ಜ್ಞಾನವನ್ನು ಹೊತ್ತುತಂದು ಹೇಳಿದರೇ, ಆತನು ಹೇಳಿರುವ ವಾಕ್ಯಗಳಿಗೆ ಬೆಲೆಕೊಡದೆ ಹೋಗುವುದು, ಆ ಮಾತನ್ನು ನಿರಾಕರಿಸುವುದರಿಂದ ಒಂದುಕಡೆ ದೇವರನ್ನು ಮತ್ತೊಂದುಕಡೆ ಆ ವಿಷಯವನ್ನು ಹೇಳಿರುವ ಪ್ರವಕ್ತರನ್ನು ಅಗೌರವ ಪಡಿಸಿದಂತೆ ಅಲ್ಲವೇ! ಮುಸ್ಲಿಮ್‌ರಾದವರು 53ನೇ ಸುರಾ 46, 47ನೇ ವಾಕ್ಯಗಳನ್ನು ಏಕೆ ವಿರುದ್ಧವಾಗಿ ಹೇಳುತ್ತಿದ್ದಾರೋ ಅವರಿಗೇ ತಿಳಿಯಬೇಕು? ಎರಡನೆಯ ಜನ್ಮ ತಂದೆ ವೀರ್ಯದ ಮೂಲಕವೇ ಎಂದು ಹೇಳಿದ್ದರೂ, ದೇವರು ಪ್ರಳಯದಲ್ಲಿ ಎಬ್ಬಿಸುತ್ತಾನೆಂದು ಮತ್ತೇ ಮತ್ತೇ ಹೇಳುವುದು ವಿಡ್ದೂರವಾಗಿದೆ.

ವಿಚಿತ್ರವೇನೆಂದರೇ ತಾವು ತಪ್ಪು ದಾರಿಯಲ್ಲಿ ಹೋಗುತ್ತಾ, ಸರಿಯಾದ ದಾರಿಯಲ್ಲಿ ಹೋಗುವವರನ್ನು ನಿಮ್ಮ ದಾರಿ ಒಳ್ಳೆಯದಲ್ಲವೆಂದು ಹೀಯಾಳಿಸಿ ದಂತೆ ನಾವು ಪ್ರತಿ ವಿಷಯವನ್ನು ಎಷ್ಟೋ ವಿವರವಾಗಿ ಹೇಳಿದರೂ, ಶಾಸ್ತ್ರಬದ್ಧವಾಗಿ ಹೇಳಿದರೂ, ದೈವಗ್ರಂಥಗಳಲ್ಲಿನ ಆಧಾರವನ್ನು ತೋರಿಸಿ ಹೇಳಿದರೂ, ನಮ್ಮ ಮಾತನ್ನು ತಪ್ಪೆಂದು ಹೇಳುತ್ತಾ, ಯಾವ ಶಾಸ್ತ್ರಾಧಾರವಾಗಲೀ, ಗ್ರಂಥಾಧಾರವಾಗಲೀ ತೋರಿಸದೆ ಮಾತನಾಡುತ್ತಿದ್ದಾರೆ. ಮೇಲಾಗಿ ಅವರು ತಪ್ಪುದಾರಿಯಲ್ಲಿ ಹೋಗುತ್ತಾ, ನಾವೇ ತಪ್ಪುದಾರಿಯನ್ನು ತೋರಿಸುತ್ತಿದ್ದೇವೆಂದು, ಗ್ರಂಥದಲ್ಲಿನ ವಾಕ್ಯಗಳಿಗೆ ತಪ್ಪು ಅರ್ಥವನ್ನು ಹೇಳುತ್ತಿದ್ದೇವೆಂದು ಆರೋಪಿಸುತ್ತಿದ್ದಾರೆ.

**ಅವರ ಪ್ರಶ್ನೆ :– ಕಪಟ ಯೋಗೀಶ್ವರರು ತೇಪೆಯ ಜ್ಞಾನದಿಂದ, ಸಾಲಕ್ಕೆ ತಂದುಕೊಂಡ ಜ್ಞಾನದಿಂದ ಮಾತನಾಡುತ್ತಾರೆ. ಗತದಲ್ಲಿ ಯಾರೂ ಬೋಧಿಸದ ಜ್ಞಾನವನ್ನು ನಾವು ಬೋಧಿಸುತ್ತಿದ್ದೇವೆ ಎಂದು ದೊಡ್ಡಸ್ತಿಕೆ ಹೇಳಿಕೊಳ್ಳುತ್ತಾರೆ. ತ್ರೈತಸಿದ್ಧಾಂತವನ್ನು ಪ್ರಚಾರ ಮಾಡುವವರು ಏನೆನ್ನುತ್ತಿದ್ದಾರೋ ನೋಡಿರಿ. ತ್ರೈತಸಿದ್ಧಾಂತ ಗ್ರಂಥದಲ್ಲಿ "ಕೃಷ್ಣನು ಹಿಂದೆ ಹೇಳದ ಜ್ಞಾನವನ್ನು ಕೂಡಾ ಯೋಗೀಶ್ವರರು ಹೇಳಿದ್ದಾರೆ" ಇದನ್ನನುಸರಿಸಿ ತ್ರೈತಸಿದ್ಧಾಂತ ಪ್ರಚಾರಕರ ವಂಚನೆ ಸ್ಪಷ್ಟವಾಗಿ ತಿಳಿಯುತ್ತದೆ. ಒಂದು ಕಡೆ ಕೃಷ್ಣನ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡುತ್ತಾ ಪೂಜೆಗಳು ಮಾಡುವುದು, ಮತ್ತೊಂದು ಕಡೆ ಶ್ರೀಕೃಷ್ಣನು ಹೇಳದ ಜ್ಞಾನವನ್ನು ಯೋಗೀಶ್ವರರು ಹೇಳಿದ್ದಾರೆ ಎನ್ನುತ್ತಾ ಕೃಷ್ಣನನ್ನು ಕೀಳಾಗಿ ಮಾಡುತ್ತಿದ್ದಾರೆ. ಇವರ ಪ್ರಚಾರದಲ್ಲಿ ಚಿತ್ತಶುದ್ಧಿ ಇಲ್ಲ ಎನ್ನುವುದಕ್ಕೆ ಇದಕ್ಕಿಂತ ಮತ್ತೊಂದು ಸಾಕ್ಷಿ ಅವಶ್ಯವಾ?**

**ನಮ್ಮ ಉತ್ತರ:–** ಗಂಡ ಬಿಟ್ಟಿರುವ ಹೆಂಡತಿ ಬಯ್ಯುವುದಕ್ಕೇ ಕೈಲಾಗದೆ ಕೊನೆಗೆ ಧೂಳು ಎತ್ತಿಹಾಕಿದಳಂತೆ! ಹಾಗೆಯೇ ನನ್ನನ್ನು ವಿಮರ್ಶಿಸುವುದಕ್ಕೆ ಆಯಾಸಗೊಂಡು ಕೊನೆಗೆ ಕೃಷ್ಣನಿಗು ನನಗು ಬೆಂಕಿ ಇಡಬೇಕೆಂದು ನೋಡುವುದು ಒಳ್ಳೆಯ ಉಪಾಯವೇ ಆದರೂ ನಿನ್ನ ಮಾತುಗಳನ್ನು ಯಾರೂ ನಂಬುವುದಿಲ್ಲ. ನೀನು ಹೇಳುವುದರಲ್ಲಿಯೇ ನಿನ್ನ ಮಾತು ಅಸೂಯೆಯಿಂದ ಕೂಡಿಕೊಂಡಿರುವುದೆಂದು ಎಲ್ಲರಿಗೂ ತಿಳಿದುಹೋಗುತ್ತಿದೆ. ಗತದಲ್ಲಿ ಒಬ್ಬ ಹೆಂಗಸು ನಾನು ಬಲೆ ಇಲ್ಲದೇ ಮೀನುಗಳನ್ನು ಹಿಡುಯುತ್ತೇನೆ ಎಂದು ದೊಡ್ಡದಾಗಿ ಹೇಳಿ ಕೊನೆಗೆ ಸೀರೆ ಬಿಚ್ಚಿ ಕೈಲಾದಷ್ಟು ಮೀನುಗಳನ್ನು ಹಿಡಿದರೂ, ಸೀರೆ ಇಲ್ಲವಾದ್ದರಿಂದ ತನ್ನ ಮರ್ಯಾದೆ ಹೋಯಿತೆಂದು ಆಕೆಗೆ ತಿಳಿಯಲಿಲ್ಲವಂತೆ. ಕೊನೆಗೆ ಎಲ್ಲರೂ ನಕ್ಕು ಹೋದ ನಂತರ ತನಗೆ ಸೀರೆ ಇಲ್ಲವೇ! ಎಂದು ಅಂದುಕೊಂಡಳಂತೆ. ಹಾಗೆಯೇ ಎದುರಿಗಿರುವವರನ್ನು ತಿರಸ್ಕರಿಸಿ ಮಾತನಾಡುವುದೇ ಉದ್ದೇಶವಾಗಿ ಇಟ್ಟುಕೊಂಡವರು, ತನ್ನಮೇಲೆ ತಾನು ಗಮನದಿಂದ ಏನು ಮಾತ ನಾಡುತ್ತಿದ್ದೇವೋ ತಿಳಿದು ಮಾತನಾಡುವುದು ಒಳ್ಳೆಯದು. ಇಲ್ಲದೆ ಹೋದರೇ ಮಾತನಾಡಿದವರ ಮರ್ಯಾದೆಯೆ ಹೋಗುತ್ತದೆ.

ನೀವು ನಮ್ಮನ್ನು ಕಡಿಮೆಯಾಗಿ ಮಾತನಾಡಲು ಹೋಗಿ, ನಾವು ಹೇಳದಿರುವ ಮಾತುಗಳನ್ನು ಹೇಳುವುದರಿಂದ ನಿಮ್ಮಲ್ಲಿನ ದುರ್ಬುದ್ಧಿ ಹೊರ ಬೀಳುತ್ತಿದೆ. ಕೃಷ್ಣನನ್ನು ವಿಗ್ರಹವೆಂದು ನಾವು ಯಾವಾಗಲೂ ಹೇಳಲಿಲ್ಲ. ನೀವೇ ಕೃಷ್ಣನನ್ನು ನಾವು 'ಪ್ರತಿಮೆ' ಎನ್ನುತ್ತಿದ್ದೇವೆ ಎಂದು ಪ್ರತಿಮೆಗು ವಿಗ್ರಹಕ್ಕು ಬಹಳ ವ್ಯತ್ಯಾಸ ಇದೆಯೆಂದು ಅನ್ನುತ್ತಿದ್ದೇವೆಂದು ಒಂದುಕಡೆ ಹೇಳಿದ್ದೀರ. ಆ ಮಾತನ್ನು ಮರೆತುಹೋಗಿ ಈಗ ನಾವು ಕೃಷ್ಣನನ್ನು ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡುತ್ತಾ ಪೂಜೆಗಳು ಮಾಡುತ್ತಿರುವಹಾಗೆ ಹೇಳಿದ್ದೀರ. ನಾವು ಕೃಷ್ಣನ ಪ್ರತಿಮೆಯನ್ನು ನೆಲಗೊಳಿಸಿದ್ದೇವೆ ಆದರೇ, ವಿಗ್ರಹಗಳನ್ನು ಪ್ರತಿಷ್ಠಿಸಲಿಲ್ಲ. ಕೃಷ್ಣನ ಪ್ರತಿಮೆಗಳನ್ನು ನೆಲೆಗೊಳಿಸಿ ಆತನ ಹಿರಿಮೆಯನ್ನು ಕುರಿತು ಹೇಳಿದ್ದೇವೆ ಹೊರತು ನಮ್ಮ ಜೀವನದಲ್ಲಿ ಕೃಷ್ಣನನ್ನು ಇಲ್ಲಿಯವರೆಗು ಎಂದೂ ಪೂಜಿಸಲಿಲ್ಲ. ಇತರರು ಪೂಜಿಸುವುದನ್ನು ನೋಡಿದ್ದೇವೆ. ಇತರರಿಗೆ ಕೃಷ್ಣನನ್ನು ಪೂಜೆ ಮಾಡುವು ದಕ್ಕಿಂತ ಆತನ ಸೇವೆ ಮಾಡುವುದು ಒಳ್ಳೆಯದೆಂದು ಅನೇಕ ಸಲ ಹೇಳಿದ್ದೇವೆ. ಯಾರ ಇಷ್ಟದ ಪ್ರಕಾರ ಅವರು ಪೂಜೆಗಳು ಮಾಡಬಹುದು. ಯಾರನ್ನೂ ಮಾಡಿರೆಂದು ನಾವು ಇಲ್ಲಿಯವರೆಗು ಹೇಳಲಿಲ್ಲ. ಹಾಗೆ ಮಾಡಬಾರದೆಂದು ಸಹ ಹೇಳಲಿಲ್ಲ. ಪೂಜೆ ಮಾಡುವುದು ದೇವರನ್ನು ಹೊಗಳಿದಂತೆಯೇ ಆಗುವುದು. ಅಂತಹ ಪೂಜೆಗಳು ಆತನಿಗೆ ಇಷ್ಟವಿಲ್ಲ. ಆತನು ಭೂಮಿಮೇಲೆ ಹೇಳಿರುವ ಜ್ಞಾನವನ್ನು ಪ್ರಚಾರ ಮಾಡಿದರೇ ಆತನು ಸಂತೋಷಿಸುತ್ತಾನೆಂದು ಸಹ ಹೇಳಿದ್ದೇವೆ. ನಾವು ಏನು ಹೇಳಿರುವುದು, ಏನು ಮಾಡುವುದು ಇಲ್ಲಿನ ಪ್ರಜೆಗಳಿಗೆ ತಿಳಿದಿದೆ, ಎಲ್ಲೋ ಇರುವ ನಿನಗೇನು ತಿಳಿಯುತ್ತದೆ.

ಪ್ರತಿ ಕೆಲಸಕ್ಕು ಕಣ್ಣಿಗೆ ತಿಳಿಯದ ಒಂದು ಫಲಿತವಿರುತ್ತದೆ. ನೀವು ಅದೇಕೆಲಸವಾಗಿ ನಮ್ಮನ್ನು ಮಾತನಾಡಿರುವ ಮಾತುಗಳಿಗೆಲ್ಲಾ ಪಾಪವೋ, ಪುಣ್ಯವೋ ಯಾವುದೋ ಒಂದು ಫಲಿತಾಂಶವಿರುತ್ತದೆ. ನಿನ್ನ ವಿಷಯವು ನನಗೆ ತಿಳಿಯದಿದ್ದರೂ, ನನ್ನ ವಿಷಯ ನಿನಗೆ ತಿಳಿಯದಿದ್ದರೂ, ಇಬ್ಬರಿಗೂ ಮಧ್ಯದಲ್ಲಿರುವ ದೇವರಿಗೆ ಎಲ್ಲಾ ತಿಳಿದಿದೆ. ನಿನಗೆ ದೇವರೇ ಯಾವ ಕರ್ಮವನ್ನು ಅನುಭವಕ್ಕೆ ತರಬೇಕೋ ಆ ಕರ್ಮವನ್ನೇ ಜಾರಿಗೆ ತರುವನು. ಒಟ್ಟಿನಲ್ಲಿ

ಅನವಶ್ಯವಾಗಿ ಮಾತನಾಡಿ ನೀವು ಸ್ವಲ್ಪ ಕರ್ಮವನ್ನು ಸಂಪಾದಿಸಿ ಕೊಂಡಂತಾಗುತ್ತದೆ. ಅದು ಒಳ್ಳೆಯದೋ ಕೆಟ್ಟದೋ ಆದರೇ ಒಟ್ಟಿನಲ್ಲಿ ಕರ್ಮವನ್ನು ಮೂಟೆಕಟ್ಟಿಕೊಂಡಂತೆ, ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ನಮ್ಮನ್ನು ಕುರಿತು ನಾಲ್ಕು ನೂರು ವರ್ಷಗಳ ಹಿಂದೆಯೇ ಬರೆಯುತ್ತಾ, ನನ್ನನ್ನು ಕುರಿತು ವಿಮರ್ಶಿಸಿ ಮಾತನಾಡಿದವರಿಗೆ ಏನು ನಡೆಯುವುದೋ ಸಹ ಆದಿನವೇ ಹೇಳಿದ್ದಾನೆ. ಇಲ್ಲಿಯವರೆಗು ನಾವು ಮೂರು ಗ್ರಂಥಗಳ ಜ್ಞಾನ ವಾಕ್ಯಗಳಿಗೆ ವಿವರ ಹೇಳಿದ್ದೇವೆ. ಪ್ರಬೋಧಾನಂದ ಗುರು ನನಗೂ ಗುರುವೇ ನಿಮಗು ಗುರುವೇ ಎಂದು ಹೇಳಿರುವ ಬ್ರಹ್ಮಯ್ಯನವರು ಒಂದು ಕಡೆ ಎಲ್ಲಾ ಮತಗಳನ್ನು ಏಕಮಾಡುವವರೆಂದು ಕೂಡಾ ಹೇಳಿದ್ದಾನೆ. ನಿನಗೆ ತಿಳಿಯದೆ ಹೋದರೇ ಇಂದಿಗೂ ಭದ್ರವಾಗಿರುವ ಬ್ರಹ್ಮಯ್ಯನವರ ಏಷ್ಯಕಾಲಜ್ಞಾನವನ್ನು ನೋಡಿದರೇ ತಿಳಿಯುತ್ತದೆ. ಆದಿನವೇ **'ಪ್ರಬೋಧಾಶ್ರಮ ಉನ್ನತವಾದ ಜ್ಞಾನವಿರುವುದು'** ಎಂದು ಬರೆದಿಟ್ಟಿದ್ದಾರೆ. ಆತನು ಹೇಳಿರು ವಂತೆಯೇ ನಮ್ಮ ಬಳಿಗೆ ಹಿಂದೂಗಳು, ಕ್ರೈಸ್ತರು, ಮುಸ್ಲಿಮ್‌ರು ಬರುವುದು ನಮ್ಮ ಜ್ಞಾನವನ್ನು ಮೂವರು ಆಶ್ರಯಿಸುವುದು, ಅವರು ತಿಳಿದುಕೊಂಡಿರುವ ಜ್ಞಾನವನ್ನು ಪ್ರಚಾರ ಮಾಡುವುದು ನಡೆಯುತ್ತಿದೆ. ಇಲ್ಲಿ ಮೂರು ಮತದವರು ಒಂದೇ ದಾರಿಯಲ್ಲಿ ನಡೆಯುತ್ತಿದ್ದಾರೆಂದು ಲೋಕದಲ್ಲಿ ಎಲ್ಲರಿಗೂ ತಿಳಿದಿದೆ. ನಾನು ಜ್ಞಾನವನ್ನು ಸಾಲಕ್ಕೆ ತಂದುಕೊಂಡವನೇ ಆದರೇ ನಾಲ್ಕು ನೂರು ವರ್ಷಗಳ ಹಿಂದೆ ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಅದನ್ನೇ ಬರೆಯುತ್ತಿದ್ದನಲ್ಲವೇ! ಹಾಗೆ ಯಾಕೆಬರೆಯಲಿಲ್ಲ? ನನ್ನನ್ನು ಮೂರು ಮತಗಳ ಗುರುವೆಂದು ಯಾಕೆ ಹೇಳಿದ್ದಾನೋ?

ಕಿವುಡನ ಮುಂದೆ ಶಂಖ ಊದಿದರೂ ಅವನಿಗೆ ಏನು ಕೇಳಿಸದ ಹಾಗೆ ಅಸೂಯೆ ಭಾವದಿಂದ ತುಂಬಿರುವ ನಿನಗೆ ನನ್ನ ಮಾತುಗಳು ರುಚಿಸುವುದಿಲ್ಲವೆಂದು, ನಿನ್ನ ಬುರುಡೆಗೆ ಏರುವುದಿಲ್ಲವೆಂದು ತಿಳಿದಿದೆ. ನೀವು ನನ್ನನ್ನು ಪ್ರಶ್ನಿಸಿದ ಪ್ರತಿ ಪ್ರಶ್ನೆಗು, ವಿಮರ್ಶಿಸಿದ ಪ್ರತಿ ವಿಮರ್ಶೆಗು ನಾವು ಉತ್ತರವಾಗಿ ಒಂದು ಗ್ರಂಥವನ್ನು ವಿವರವಾಗಿ ಬರೆದು ಕೊಟ್ಟಿದ್ದೇವೆ. ಆದರೂ

ನೀವು ಅವುಗಳನ್ನು ಜ್ಞಾನ ದೃಷ್ಠಿಯಿಂದ ನೋಡದೇ, ಕೇವಲ ಅಸೂಯೆ ಗುಣದಿಂದ ನೋಡುತ್ತಾ ಅರ್ಥವಿಲ್ಲದ ವಿಮರ್ಶೆಗಳು ಮಾಡುತ್ತಿದ್ದೀರ. ಬಜಾರಿನಲ್ಲಿ ಆನೆ ಹೋಗುತ್ತಿದ್ದರೇ ಬೀದಿಯಲ್ಲಿ ನಾಯಿಗಳು ಬೊಗಳುತ್ತಿರುತ್ತವೆ. ಬಜಾರು ದೊಡ್ಡದು, ಬೀದಿ ಚಿಕ್ಕದು. ಬೀದಿ ನಾಯಿಗಳು ಬಜಾರಿಗೆ ಬರಬಹುದು ಆದರೇ, ಬಜಾರಿನಲ್ಲಿನ ಆನೆ ಬೀದಿಯೊಳಗೆ ಹೋಗಲಾರದು ಅಲ್ಲವೇ! ಬಜಾರು ದೊಡ್ಡದು ಆದಕಾರಣ ಬೀದಿನಾಯಿಗಳು ಬಜಾರಿನೊಳಗೆ ಬರಬಾರದೆಂದು ಯಾರೂ ಹೇಳಲಾರರು. ಆದರೇ ಬೀದಿ ಚಿಕ್ಕದಾದ್ದರಿಂದ ಆನೆಯನ್ನು ಬೀದಿಯೊಳಗೆ ಬಾ ಎಂದರೂ ಹೋಗಲಾರದು. ಆದ್ದರಿಂದ ಆನೆ ನಾಯಿಗಳ ಬಗ್ಗೆ ತಲೆ ಕೆಡಿಸಿಕೊಳ್ಳದೇ ತನ್ನ ದಾರಿಯಲ್ಲಿ ತಾನು ಹೋಗಬೇಕಾಗಿರುತ್ತದೆ. ಅದೇ ವಿಧವಾಗಿ ಕೆಲವರು ಯಾವ ಗುರುತಿಲ್ಲದ ಅನಾಮಿಕರು ಮಾತನಾಡುವ ಮಾತುಗಳನ್ನು ವಿಜ್ಞರಾದವರು ತಲೆ ಕೆಡಿಸಿಕೊಳ್ಳುವುದಿಲ್ಲ. ಆದ್ದರಿಂದ ಅರ್ಥಹೀನವಾಗಿ ಮಾತನಾಡುವವರ ಮಾತುಗಳನ್ನು ನಾವು ಕೂಡಾ ತಲೆ ಕೆಡಿಸಿಕೊಳ್ಳುವುದಿಲ್ಲ. ಇನ್ನುಮುಂದೆ ಅಂಥವರ ಮಾತುಗಳಿಗೆ ಎಂತಹ ಉತ್ತರ ನಾವು ಕೊಡುವುದಿಲ್ಲ.

ನಾನು ಎಲ್ಲರಹಾಗೆ ಜ್ಞಾನವನ್ನು ಕಲಿತವನಲ್ಲ, ನನ್ನ ಸ್ವಂತವಾಗಿ ನಾನು ಜ್ಞಾನವನ್ನು ಹೇಳುವವನು. ಮೂರು ಗ್ರಂಥಗಳಲ್ಲಿರುವ ಜ್ಞಾನವನ್ನು ನಾನು ಎಂದೂ ಕಲಿತುಕೊಳ್ಳಲಿಲ್ಲ. ನನ್ನಲ್ಲಿರುವ ಜ್ಞಾನವೇ ಮೂರು ಗ್ರಂಥಗಳಲ್ಲಿ ಇದೆಯೆಂದು ಹೇಳಿದ್ದೇನೆ. ನಾನು ಯಾವಾಗಲೋ 35 ವರ್ಷ ವಯಸ್ಸಿರುವಾಗ ಯಾವ ಗ್ರಂಥ ನೋಡದೇ ಹೇಳಿರುವ ಜ್ಞಾನವು ಈ ನಡುವೆ ಗ್ರಂಥಗಳಲ್ಲಿ ಕಾಣಿಸಿದೆ. ಆದ್ದರಿಂದ ಈದಿನ ನನಗೆ ಮೂರು ಮತಗಳಲ್ಲಿನ ಜ್ಞಾನವು ಸುಲಭವಾಯಿತು. ಈದಿನ ಒಂದು ಮತದಲ್ಲಿ ಇರುವವನು, ಉಳಿದ ಮತ ಗಳಲ್ಲಿರುವ ಎಂತಹ ಜ್ಞಾನಿಯನ್ನಾದರೂ ಅಸೂಯೆಯಿಂದಲೇ ನೋಡುತ್ತಿದ್ದಾನೆ. ಮೇಲ್ನೋಟಕ್ಕೆ ಎಲ್ಲರಿಗೂ ದೇವರು ಒಬ್ಬನೇ ಎನ್ನುತ್ತಾ, ಒಳಗಡೆ ನಿಮ್ಮ ದೇವರು ಬೇರೆ, ನಮ್ಮ ದೇವರು ಬೇರೆ ಎಂಬ ಭಾವನೆ ಹೊಂದಿದ್ದಾರೆ. ಮೂರು ಮತಗಳಿಗು ಸಮ್ಮತವಾಗಿರುವ ನನ್ನನ್ನು ಕೂಡಾ ಅಸೂಯೆಯಿಂದ

ನೋಡುತ್ತಿದ್ದಾರೆಂದರೇ, ಒಂದು ಮತವನ್ನು ಕುರಿತು ಹೇಳುವವರ ಮೇಲೆ ಪೂರ್ತಿ ಅಸೂಯೆಯನ್ನು ಹೊಂದಿರುತ್ತಾರೆ. ನನ್ನ ಭಾವನೆಯಲ್ಲಿ ನಾನೆಷ್ಟು ದೊಡ್ಡವನೋ, ಎಷ್ಟು ಚಿಕ್ಕವನೋ ನನಗೆ ತಿಳಿದಿದೆ. ಆದರೇ ಇತರರನ್ನು ನಾನು ಜ್ಞಾನಿಗಳಾಗಿ ಮಾಡುವ ನಿಮಿತ್ತ, ಈ ಪ್ರಪಂಚದಲ್ಲಿ ನಾನು ಕೂಡಾ ಕೆಲವು ಮಾತುಗಳನ್ನು ಮಾತನಾಡಬೇಕಾಗಿ ಬಂದಿದೆ. ಇಲ್ಲದೇ ಹೋದರೇ ದೈವಜ್ಞಾನವೆನ್ನುವುದು ಯಾವ ಗುರುತಿಲ್ಲದೇ ಹೋಗಬಲ್ಲದು. ನಾನು ಹೇಳುವ ಮಾತುಗಳು ಸಾಧಾರಣವಾಗಿದ್ದರೂ ಆಲೋಚಿಸುವವರಿಗೆ ಎಷ್ಟು ಸಾರಾಂಶ ವನ್ನಾದರೂ ಕೊಡಬಲ್ಲವು.

ಈ ದಿನ ನಾನು ಹೇಳುವ ಜ್ಞಾನವನ್ನು ನೋಡಿ, ಆಲೋಚಿಸುವ ಪ್ರತಿಯೊಬ್ಬನು ಅವರಿಗೆ ತಿಳಿದಿರುವ ವಿಧಾನವನ್ನು ಬಿಟ್ಟು, ಅದು ಸರಿಯಾದ ವಿಧಾನವಲ್ಲವೆಂದು ತಿಳಿದು ನನ್ನಕಡೆ ಬರುವುದು ನಡೆಯುತ್ತಿದೆ. ಲೋಕದಲ್ಲಿ ಎಷ್ಟೋ ಜನ ಗುರುಗಳು, ಮತ್ತೆಷ್ಟೋ ಸ್ವಾಮೀಜಿಗಳು ಯಾವುದೊ ಒಂದು ಪ್ರಚಾರ ಮಾಡುತ್ತಿರುತ್ತಾರೆ. ಅಂತಹ ಪ್ರಚಾರಗಳೇನೂ ಮಾಡದೇ, ಕೇವಲ ಗ್ರಂಥ ರಚನೆಗಳಿಂದ ಮಾತ್ರವೇ ನಾವು ನಮ್ಮ ಜ್ಞಾನವನ್ನು ಇತರರಿಗೆ ತಿಳಿಸುತ್ತಿದ್ದೇವೆ. ನಮ್ಮ ಜ್ಞಾನವನ್ನು ನೋಡಿರುವ ಪ್ರತಿಯೊಬ್ಬನು ನಮ್ಮಕಡೆ ಬರುವುದು ನಡೆಯುತ್ತಿದೆ. ನಾನು ಹಿಂದೂ ಸಮಾಜದಲ್ಲಿ ಹುಟ್ಟಿರುವುದರಿಂದ ಕೆಲವರು ನನ್ನನ್ನು ಹಿಂದೂ ಗುರುವಾಗಿ ಲೆಕ್ಕಿಸಿಕೊಂಡರೂ, ಬಹಳ ಜನರಿಗೆ ನಾನು ಒಂದು ಮತಕ್ಕೆ ಸಂಬಂಧಿಸಿದ ಗುರುವಾಗಿ ಅಲ್ಲದೇ, ಮೂರು ಮತಗಳ ಗುರುವಾಗಿ ಕಾಣಿಸುತ್ತಿರುವುದರಿಂದ, ಮೂರು ಮತಗಳ ಜ್ಞಾನಿಗಳು ನನ್ನ ಕಡೆ ಬಂದಿದ್ದಾರೆ. ಬಂದಿರುವವರು ಮೂರು ಮತಗಳಿಗೆ ಸಂಬಂಧಿಸಿರುವವರಾಗಿ, ಅವರವರ ಮತಗಳಲ್ಲಿ ಜ್ಞಾನಿಗಳಾಗಿ ಇರುವವರೇ, ನಮ್ಮ ಜ್ಞಾನವನ್ನು ನೋಡಿ ಇದು ದೊಡ್ಡ ಜ್ಞಾನವೆಂದು ತಿಳಿದು ನನ್ನ ಪಕ್ಕಕ್ಕೆ ಬಂದು ಇನ್ನೂ ಸ್ವಲ್ಪ ಜ್ಞಾನವನ್ನು ತಿಳಿದು, ಸಂಪೂರ್ಣ ಜ್ಞಾನಿಗಳಾಗಿದ್ದಾರೆ. ಯಾವ ಮತದಲ್ಲಿರುವವರು ಆ ಮತದಲ್ಲಿಯೇ ಇದ್ದು ಎಲ್ಲಾ ಮತಗಳಿಗು ಸಂಬಂಧಿಸಿದ ದೇವರ ಜ್ಞಾನವನ್ನು ಪ್ರಚಾರ ಮಾಡಬೇಕೆಂದು ಹೇಳಿರುವ ನನ್ನ ಮಾತಿನ ಪ್ರಕಾರ, ಎಲ್ಲಾ ಮತದವರು

ಅವರವರ ಮತಗಳ ಹೆಸರಿನ ಮೇಲೆಯೇ ಪ್ರತ್ಯೇಕ ಸಂಘಗಳನ್ನು ಸ್ಥಾಪಿಸಿ, ದೇವರ ಜ್ಞಾನವನ್ನು ಪ್ರಚಾರ ಮಾಡುತ್ತಿದ್ದಾರೆ. ಈ ವಿಧವಾಗಿ ಹಿಂದೂಗಳು **"ಇಂದೂ ಜ್ಞಾನವೇದಿಕೆ"** ಮೂಲಕ, ಕ್ರೈಸ್ತರು **"ಸುವಾರ್ತೆ ಕ್ರೈಸ್ತವ ಸಂಘ"**ದ ಮೂಲಕ, ಮುಸ್ಲಿಮರು **"ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ"** ಮೂಲಕ ಅವರವರ ಗ್ರಂಥಗಳಲ್ಲಿನ ಜ್ಞಾನವನ್ನು ಅವರವರ ಮತಗಳಲ್ಲಿ ತಿಳಿಸುತ್ತಿರುವಾಗ ಈದಿನ ಎಲ್ಲಾ ಮತಗಳಲ್ಲಿ ಸಂಶಯರಹಿತ ಜ್ಞಾನವು ತಿಳಿಯುತ್ತಿದೆ. ಯಾವ ಮತದಲ್ಲಿ ಸಂಶಯವಿದ್ದರೂ ಆ ಮತಕ್ಕೆ ಸಂಬಂಧಿಸಿರುವ ಸಂಘವು ತನ್ನ ಜ್ಞಾನವನ್ನು ತಿಳಿಸಿ ಆ ಸಂಶಯವನ್ನು ಇಲ್ಲದೇ ಮಾಡುತ್ತಿದೆ.

ವಿಶಾಲ ದೃಷ್ಠಿಯಿಂದ, ವಿವೇಕದಿಂದ ನೀವೇ ಆಲೋಚಿಸಿರಿ. ನಾವು ಮಾಡುತ್ತಿರುವ ಕೆಲಸ ಒಳ್ಳೆಯದೋ, ಅಲ್ಲವೋ ಹೇಳಿರಿ. ಈ ದಿನ ಮೂರು ಮತಗಳ ಸಂಘಗಳು ಒಬ್ಬ ಗುರುವಿನ ಮಾರ್ಗದರ್ಶಕದಲ್ಲಿ ಎಲ್ಲಾದರೂ ಇವೆಯಾ? ಇಲ್ಲಿ ಹೊರತುಪಡಿಸಿ ಎಲ್ಲೂ ಇಲ್ಲ. ಮೂರು ಮತಗಳ ಸಮನ್ವಯ ಜ್ಞಾನವು ಎಲ್ಲಾದರೂ ಇದೆಯಾ? ಇಲ್ಲಿ ಹೊರತುಪಡಿಸಿ ಎಲ್ಲೂ ಇಲ್ಲ. ಒಂದೇ ವೇದಿಕೆಯ ಮೇಲೆ, ಒಂದೇ ಜ್ಞಾನದ ಬಳಿ ಮೂರು ಮತಗಳ ಪ್ರಜೆಗಳು ಎಲ್ಲಾದರೂ ಬೆರೆಯುತ್ತಿದ್ದಾರಾ? ಇಲ್ಲಿ ಹೊರತುಪಡಿಸಿ ಎಲ್ಲೂ ಬೆರೆಯುವುದಿಲ್ಲ. ಯಾವ ಮತಕ್ಕು ಸಂಬಂಧವಿಲ್ಲದ ದೇವರ ಗುರುತನ್ನು ಎಲ್ಲ ಮತದವರು ಅನುಮಾನವಿಲ್ಲದೇ ತಮ್ಮ ಹಣೆಯ ಭಾಗದಲ್ಲಿ ಎಲ್ಲಾದರೂ ಧರಿಸುತ್ತಿದ್ದಾರಾ? ಇಲ್ಲಿ ಹೊರತು ಎಲ್ಲೂ ಧರಿಸುತ್ತಿಲ್ಲ. **ಪರಮಾತ್ಮ** ಎಂದರೇ ನಮ್ಮ ದೇವರೆಂದು ಕ್ರೈಸ್ತರು, ಮುಸ್ಲಿಮ್‌ರು ಎಲ್ಲಾದರೂ ಅನ್ನುತ್ತಿದ್ದಾರಾ? ಇಲ್ಲಿ ಹೊರತು ಎಲ್ಲೂ ಅನ್ನುತ್ತಿಲ್ಲ. **ಪರಿಶುದ್ಧಾತ್ಮ** ಎಂದು ಕ್ರೈಸ್ತರ ಗ್ರಂಥದಲ್ಲಿನ ದೇವರ ಹೆಸರು ಹೇಳಿದರೇ ಆತನು ನಮ್ಮ ದೇವರೆಂದು ಹಿಂದೂಗಳಾಗಲೀ, ಮುಸ್ಲಿಮ್‌ರಾಗಲೀ ಎಲ್ಲಾದರೂ ಹೇಳುತ್ತಿದ್ದಾರಾ? ಇಲ್ಲಿ ಹೊರತು ಎಲ್ಲೂ ಹೇಳುತ್ತಿಲ್ಲಾ. ಹಾಗೆಯೇ **ಅಲ್ಲಾಹ್** ಎಂದು ಖುರಾನ್ ಗ್ರಂಥದಲ್ಲಿನ ದೇವರ ಹೆಸರು ಹೇಳಿದರೇ ನಮ್ಮ ದೇವರೆಂದು ಹಿಂದೂಗಳು, ಕ್ರೈಸ್ತರು ಎಲ್ಲಾದರೂ ಸಂತೋಷಿಸುತ್ತಿದ್ದಾರಾ? ಇಲ್ಲಿ ಹೊರತು ಎಲ್ಲೂ ಇಲ್ಲ. ಪ್ರಪಂಚದಲ್ಲಿ ಎಲ್ಲರಿಗೂ ಒಂದೇ ದೇವರಾಗಿರುವಾಗ, ಎಲ್ಲರೂ

ಎಲ್ಲಿ ಯಾವ ಹೆಸರು ಹೇಳಿದರೂ ಅದು ಒಂದೇ ದೇವರ ಹೆಸರೆಂದು ತಿಳಿದಾಗ, ಮನುಷ್ಯರಲ್ಲಿ ಭೇದಾಭಿಪ್ರಾಯಗಳು ಯಾಕಿರುತ್ತವೆ. ಭಗವದ್ಗೀತೆಯಲ್ಲಿ ಹೇಳಿರುವ ಜ್ಞಾನವನ್ನು ಕೊನೆಯಲ್ಲಿ ಬಂದಿರುವ ಖುರಾನ್ ಸಮ್ಮತಿಸುತ್ತಿರುವಾಗ, ಅದರ ಪ್ರಕಾರ ಭಗವದ್ಗೀತೆ ಜ್ಞಾನವನ್ನು ಮುಸ್ಲಿಮ್‌ರು ಸಹ ಸಮ್ಮತಿಸಬಹುದು. ಹಾಗೆಯೇ ಭಗವದ್ಗೀತೆ ಒಂದರ ಸೂತ್ರಗಳೇ ಖುರಾನ್‌ನಲ್ಲಿ ಕಾಣಿಸಿದಾಗ, ಹಿಂದೂಗಳು ಖುರಾನ್‌ನನ್ನು ಸಮ್ಮತಿಸಬಹುದು ಅಲ್ಲವೇ! ಹಾಗೆಯೇ ಬೈಬಲ್ ಗ್ರಂಥದಲ್ಲಿ ಎಂದರೇ ನಾಲ್ಕು ಸುವಾರ್ತೆಗಳಲ್ಲಿ ಭಗವದ್ಗೀತೆ, ಖುರಾನ್ ಜ್ಞಾನವಿರುವಾಗ ಹಿಂದೂಗಳು, ಮುಸ್ಲಿಮ್‌ರು ಸುವಾರ್ತೆ ಬೈಬಲ್‌ನನ್ನು ಸಮ್ಮತಿಸಬಹುದು ಅಲ್ಲವೇ! ಈ ವಿಧವಾಗಿ ಮೂರು ಮತ ಗ್ರಂಥಗಳಲ್ಲಿ ಇರುವ ಸೂತ್ರಗಳೆಲ್ಲ ಒಂದೇ ಎಂದು ತಿಳಿಯುವಹಾಗೆ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿನ ಜ್ಞಾನವನ್ನು ಮನುಷ್ಯನ ಜೀವನದಲ್ಲಿ ಆಚರಿಸದೆ ಹೋದರೇ ಅವನು ಯಾವ ಮತಕ್ಕು ಸೇರಿದವನಲ್ಲ ಎಂದು ಖುರಾನ್‌ನಲ್ಲಿಯೇ (5–68) ರಲ್ಲಿ ಹೇಳಿದ್ದಾರೆ. ಅದನ್ನು ಮರೆತುಹೋಗಿ ನಮ್ಮ ಗ್ರಂಥವು ಒಂದೇ ನಮಗೆ ತಿಳಿದಿದೆ, ನಮ್ಮ ಮತ ಒಂದೇ ನಮಗೆ ತಿಳಿದಿದೆ ಎಂದರೇ, ಅವರು ಯಾವ ಮತಕ್ಕೆ ಸಂಬಂಧಿಸಿದವರಲ್ಲ. ಹಾಗೆಯೇ ಯಾವ ಗ್ರಂಥಕ್ಕು ಸಂಬಂಧಿಸಿರುವವನಲ್ಲ ಎಂದು ಹೇಳಬಹುದು.

ನನ್ನದು ತೇಪೆಯ ಜ್ಞಾನ, ಸಾಲಕ್ಕೆ ತಂದುಕೊಂಡಿರುವ ಜ್ಞಾನ ವೇಯಾದರೇ ನಿಮ್ಮದು ತೇಪೆಯ ಜ್ಞಾನವಲ್ಲವೆಂದೇ ಅಲ್ಲವೇ ಅರ್ಥ. ಸರೀ! ನನ್ನದು ತೇಪೆಯ ಜ್ಞಾನವೇ, ಸಾಲಕ್ಕೆ ತಂದುಕೊಂಡ ಜ್ಞಾನವೇ ಎಂದು ನಿನಗೆ ಕಾಣಿಸಿದ್ದರೆ ಅದಕ್ಕೆ ಯಾವ ಶಕ್ತಿ ಇಲ್ಲವೆಂದೇ ಅಲ್ಲವೇ ನೀವು ಹೇಳುವುದು. ಹಾಗಿರುವಾಗ ನಿಮ್ಮ ಬಳಿ ಇರುವುದು ಶಕ್ತಿವಂತವಾದ ಜ್ಞಾನವಾಗಿರಬೇಕು. ಮಾತುಗಳ ರೂಪದಲ್ಲಿ ನೀವು ಹೇಗೆ ಮಾತನಾಡಿದರೂ ಫರವಾಗಿಲ್ಲ. ಅದು ಹೊರಗೆ ಕಾರ್ಯ ರೂಪವಾಗಿ ಕಾಣಿಸಬೇಕಲ್ಲವೇ! ದೇವರು ತನ್ನ ಜ್ಞಾನವನ್ನು ಸತ್ಯವಾದದ್ದು ಎಂದು ಹೇಳಿದ್ದಾನೆ, ಆದಕಾರಣ ಅದು ಪ್ರತ್ಯಕ್ಷವಾಗಿ ಕಾರ್ಯರೂಪದಲ್ಲಿ ಕಾಣಿಸುತ್ತದೆ. ನಿಮ್ಮ ಬಳಿ ಮಾತುಗಳ ರೂಪದಲ್ಲಿ ಅಡ್ಡವಾಗಿ

ಮಾತನಾಡುವ ಜ್ಞಾನವಿರುವುದರಿಂದ ಅದು ಎಲ್ಲಿಯೂ ಜ್ಞಾನ ರೂಪವಾಗಿ ಕಾಣಿಸಲಿಲ್ಲವೇ! ನಮ್ಮನ್ನು ವಿಮರ್ಶಿಸುವ ನಿಮ್ಮ ಮಾತನ್ನು ಯಾವ ದೇವತೆಯಾಗಲೀ, ಯಾವ ದೆವ್ವವಾಗಲೀ ಕೇಳಿಸಿಕೊಂಡಿವೆಯಾ ಎಂದು ಕೇಳುತ್ತಿದ್ದೇವೆ. ನೀವು ಹೇಳಿದಂತೆ ನಮ್ಮದು ತೇಪೆಯ ಕೌದಿ ಜ್ಞಾನವೇ ಆದರೂ, ನಮ್ಮ ಮಾತನ್ನು ದೇವತೆಗಳಾಗಲೀ, ದೆವ್ವಗಳಾಗಲೀ ಮಾತು ಮೀರಿಲ್ಲ. ನಾವು ಹೇಳಿದಂತೆ ಕೇಳುತ್ತಿವೆ, ನಮಗೆ ಭಯಪಡುತ್ತಿವೆ. ನಮ್ಮ ಬಳಿ ವಿನಯ ವಿಧೇಯತೆಗಳಿಂದ ಭಕ್ತಿಯಿಂದಿವೆ. ಇದಕ್ಕೆ ನೀವೇನು ಅನ್ನುತ್ತೀರೋ? ದೇಶದಲ್ಲಿ ಭಯಂಕರ ರೋಗಗಳಾಗಿ ಹೆಸರುಪಡೆದ ದೊಡ್ಡ ರೋಗಗಳು ಕೂಡಾ ನಮ್ಮ ಮಾತನ್ನು ಕೇಳಿ ಅವರಿಂದ ದೂರವಾಗಿ ಹೋಗುತ್ತಿವೆ. ಪಾಪದಿಂದ ಪೀಡಿಸಲ್ಪಡುವವನನ್ನು ಸಹಿತ ಕ್ಷಮಿಸಿ ರೋಗಗಳು ದೂರವಾಗಿ ಹೋಗುತ್ತಿವೆ. ಇದೆಲ್ಲಾ ನಮ್ಮ ಮಾತಿನ ಮೇಲೆ ನಡೆದಿವೆಯೆಂದರೇ ನಮ್ಮದು ತೇಪೆಯ ಜ್ಞಾನವೆಂದು ಹೇಳಬಹುದಾ? ನಮ್ಮ ಜ್ಞಾನವನ್ನು ಕೇಳಿ ಆಚರಿಸಿ ಎಷ್ಟೋ ಜನ ಜ್ಞಾನಶಕ್ತಿ ಇರುವವರಾಗಿ ಅವರ ಕರ್ಮಗಳನ್ನು ಸುಟ್ಟುಕೊಳ್ಳುತ್ತಿದ್ದಾರೆಂದರೇ ನಮ್ಮದು ತೇಪೆಯ ಜ್ಞಾನವೆಂದು ಹೇಳಬಹುದು. ನಮ್ಮ ತೇಪೆಯ ಜ್ಞಾನಕ್ಕೆ ಇಷ್ಟು ಶಕ್ತಿ ಇರುವಂತೆ ಪ್ರತ್ಯಕ್ಷವಾಗಿ ತಿಳಿಯುತ್ತಿದ್ದರೇ, ನಿಮ್ಮ ಸಕ್ರಮವಾದ ಜ್ಞಾನಕ್ಕೆ ಎಷ್ಟೋ ಶಕ್ತಿ ಇರುತ್ತದೆ. ಆದರೇ ನಿಮ್ಮ ಜ್ಞಾನಕ್ಕಿರುವ ಶಕ್ತಿ ಇನ್ನೂ ದೊಡ್ಡದಾಗಿರಬಹುದು. ನಿಮ್ಮ ಜ್ಞಾನಶಕ್ತಿಯಿಂದ ಪ್ರತ್ಯಕ್ಷವಾಗಿ ಏನು ನಡೆದಿವೆಯೋ ಹೇಳಬಲ್ಲಿರಾ? ಹೇಳಲಾರರು. ಏಕೆಂದರೆ ಯಾವುದೂ ನಿಮ್ಮ ಮಾತು ಕೇಳುವುದಿಲ್ಲ. ಯಾವ ಕರ್ಮ ನಿಮ್ಮ ಜ್ಞಾನದಿಂದ ಕ್ಷಮಿಸಲ್ಪಡುವುದಿಲ್ಲ.

ದೇವರ ಜ್ಞಾನವು ಎಲ್ಲಿದ್ದರೂ ಅದು ಕ್ಷಮಾಶೀಲತೆ ಹೊಂದಿರುತ್ತದೆ. ಕ್ಷಮಾಶೀಲತೆ ಇಲ್ಲದಿರುವುದು ಅದು ದೇವರ ಜ್ಞಾನವು ಅಲ್ಲವೇ ಅಲ್ಲ. **'ಅಗ್ನಿಯಲ್ಲಿ ಕಟ್ಟಿಗೆಗಳು ಸುಟ್ಟು ಹೋದಂತೆ, ಜ್ಞಾನವೆಂಬ ಅಗ್ನಿಯಲ್ಲಿ ಕರ್ಮಗಳೆಂಬ ಕಟ್ಟಿಗೆಗಳು ಸುಟ್ಟುಹೋಗುವವೆಂದು'** ಭಗವದ್ಗೀತೆಯಲ್ಲಿ ಭಗವಂತನ ರೂಪದಲ್ಲಿ ದೇವರೇ ಹೇಳಿದ್ದಾನೆ. ಬೈಬಲ್‌ನಲ್ಲಿ **"ಪಾಪಕ್ಷಮಾಪಣೆ ಜ್ಞಾನದಿಂದ ಇರುವುದು"** ಎಂದು ಹೇಳಿದ್ದಾರೆ. ಖುರಾನ್ ಗ್ರಂಥದಲ್ಲಿ **"ದೇವರು ಕ್ಷಮಾಶೀಲನು"** ಎಂದು ಹೇಳಿದ್ದಾರೆ.

ಅದನ್ನನುಸರಿಸಿ ದೇವರಿಗಿರುವ ಶಕ್ತಿಯೇ ದೇವರ ಜ್ಞಾನಕ್ಕಿರುತ್ತದೆ ಎಂದು ತಿಳಿಯುತ್ತಿದೆ. ದೇವರ ಜ್ಞಾನವು ಎಲ್ಲಿದ್ದರೂ ಅದರ ಶಕ್ತಿ ಹೊರಬೀಳುತ್ತದೆ. ದೇವರ ಜ್ಞಾನವು ಪ್ರತ್ಯಕ್ಷ ಶಕ್ತಿಯಿರುವುದಾಗಿ ಪ್ರತ್ಯಕ್ಷವಾಗಿರುವ ಕರ್ಮಗಳನ್ನು ಸುಟ್ಟುಹಾಕುತ್ತಿರುವುದರಿಂದ ಸತ್ಯವಾದಿಗಳು ಯಾರೋ, ಅಸತ್ಯವಾದಿಗಳು ಯಾರೋ ಪ್ರತ್ಯಕ್ಷ ಜ್ಞಾನದಬಳಿ ಹೊರಗೆ ಬಿದ್ದುಹೊಗುವರು. **ಎಲ್ಲಿ ದೈವಜ್ಞಾನವಿರುವುದೋ ಅಲ್ಲಿ ಕ್ಷಮಾಶೀಲತೆ ಎಂದರೇ ಕರ್ಮ ನಾಶನವಿರುತ್ತದೆ.** ಎಲ್ಲಾದರೇ ದೇವರ ಜ್ಞಾನವಿಲ್ಲವೋ ಅಲ್ಲಿ ಕ್ಷಮಾಶೀಲತೆ ಇರುವುದಿಲ್ಲ. ನಮ್ಮಬಳಿ ಇರುವ ಜ್ಞಾನವು ಕ್ಷಮಾಶೀಲತೆ ಇರುವ ಶಕ್ತಿಯಿರುವುದಾಗಿ ಇರುವಾಗ, ಯಾವುದು ಕೈಲಾಗದವರು ನಮ್ಮ ಜ್ಞಾನವನ್ನು ತೇಪೆಯ ಜ್ಞಾನವೆಂದರೇ ಅವರನ್ನು ದೇವರು ಚೆನ್ನಾಗಿ ಗುರುತು ಇಟ್ಟುಕೊಳ್ಳುವನು. ಅಂಥವರಿಗೆ ಕ್ಷಮಿಸಲಾರದ ಪಾಪವನ್ನು ಉಂಟುಮಾಡುವನು.

ಪ್ರಸ್ತುತ ಕಾಲದಲ್ಲಿ ನಾವು ಹೇಳುವ ಜ್ಞಾನವು ದೊಡ್ಡ ರಹಸ್ಯಗಳಿಂದ ಕೂಡಿಕೊಂಡಿರುವುದಾಗಿದೆ. ಕೆಲವು ಸಂದರ್ಭಗಳಲ್ಲಿ ಹೊಸದಾದ ಜ್ಞಾನವನ್ನು ಹೇಳಿ ಇದನ್ನು ಇಲ್ಲಿಯವರೆಗು ಯಾರೂ ಹೇಳದ ಜ್ಞಾನವೆಂದು ಹೇಳುವುದು ಕೂಡಾ ನಡೆದಿದೆ. ಅದು ಭೂಮಿಮೇಲೆ ಹೊಸದಾಗಿ ಹೇಳಲ್ಪಟ್ಟಿರುವ ದೈವಜ್ಞಾನವಾಗಿ ಇದ್ದರೂ, ಅದರ ಮೂಲ ಮೂರು ದೈವಗ್ರಂಥಗಳಲ್ಲಿ ಯಾವುದೋ ಒಂದರಲ್ಲಿ ಇರುತ್ತದೆ. ಆದರೇ ಅದು ಇಲ್ಲಿಯವರೆಗು ಅರ್ಥವಾಗದೆ ಹೋಗಿರುವುದರಿಂದ ಅದು ಹೊಸದಾದ ಜ್ಞಾನವಾಗಿರುತ್ತದೆ. ಇಲ್ಲಿಯವರೆಗು ನಾಲಕ್ಕು ಯುಗಗಳಲ್ಲಿ ತಿಳಿಯದ ಜ್ಞಾನವು ತಿಳಿಯಲ್ಪಡುತ್ತಿದೆಯೆಂದು ನಾವು ಕೂಡಾ ಹೇಳುತ್ತಿದ್ದೇವೆ. ಆ ಮಾತು ನಾವು ಹೇಳಿರುವುದರಿಂದ ಮೇಲ್ನೋಟಕ್ಕೆ ಕಾಣಿಸುವ ಪ್ರಬೋಧಾನಂದಸ್ವಾಮಿ ಹೇಳುತ್ತಿದ್ದಾನೆಂದು ಕೆಲವರು ಅಂದು ಕೊಳ್ಳುವುದು ನಡೆದಿದೆ. ಆದರೇ ಇಲ್ಲಿ ಎಲ್ಲರೂ ತಿಳಿಯಬೇಕಾಗಿರುವುದು ಏನೆಂದರೇ! ನನಗೆ ತಿಳಿದಿರುವ ಸ್ವಲ್ಪ ಜ್ಞಾನವನ್ನು ನಾನು ಹೇಳಿರುವುದು ನಿಜವೇ. ಆದರೂ ಇಲ್ಲಿಯವರೆಗು ಭೂಮಿಮೇಲೆ ಯಾರಿಗೂ ತಿಳಿಯದ ಜ್ಞಾನವನ್ನು ನನ್ನ ಹಿಂದೆಯಿದ್ದು ನನ್ನನ್ನು ನಡೆಸುತ್ತಿರುವ ದೇವರೇ ಸ್ವತಃವಾಗಿ

ಹೇಳುವುದರಿಂದ ಅನೇಕ ರಹಸ್ಯಗಳು ಹೊರಬೀಳುತ್ತಿವೆ. ಆದ್ದರಿಂದ ಇಲ್ಲಿ ಹೇಳುವ ಜ್ಞಾನವು ಲೋಕದಲ್ಲಿ ಯಾರೂ ಎದುರಾಡದ ಜ್ಞಾನವೆಂದು ನಾವು ಅನೇಕ ಸಲ ಹೇಳಿದ್ದೇವೆ. ಮೂರು ಗ್ರಂಥಗಳನ್ನು ಯಾರಾದರೇ ಹೇಳಿದ್ದಾರೋ, ಆ ಶಕ್ತಿಯೇ ನನ್ನ ಶರೀರದಿಂದ ಹೇಳುತ್ತಿದೆಯೆಂದು ನನಗೆ ಚೆನ್ನಾಗಿ ತಿಳಿದಿದೆ. ದೇವರು ಯಾವಾಗಲೋ ಒಂದುಕಾಲದಲ್ಲಿ ಹಾಗೆ ಹೇಳುವ ಅವಕಾಶವಿದೆ. ಈ ಗ್ರಂಥದ ಪ್ರಾರಂಭದಲ್ಲಿಯೇ **'ಶರೀರದಲ್ಲಿನ ದೇವರು, ಶರೀರದ ಹೊರಗಿನ ದೇವರು'** ಇಬ್ಬರೂ ಇದ್ದಾರೆಂದು ಹೇಳಿದ್ದೇವೆ. ಶರೀರದಲ್ಲಿನ ದೇವರು ಶರೀರ ಹೊರಗಿರುವ ದೇವರನ್ನು ಕುರಿತು ಹೇಳುತ್ತಿದ್ದಾನೆಂದು ನನಗೆ ಚೆನ್ನಾಗಿ ತಿಳಿದಿದೆ. ಹೊರಗೆ ಕಾಣಿಸುವ ನಾನು ಹೇಳುತ್ತಿದ್ದರೂ, ಜ್ಞಾನವೆಲ್ಲವೂ ಕಾಣಿಸದವನು ಹೇಳುತ್ತಿದ್ದಾನೆಂದು ನಾನು ಬಹಳ ಸಲ ಉಪನ್ಯಾಸಗಳಲ್ಲಿ ಕೂಡಾ ಹೇಳಿದ್ದೇನೆ.

ಇದೆಲ್ಲವೂ ಗಮನಿಸಿದರೇ **ಗುರುವು ಗುಟ್ಟಾಗಿ ಯಾರಿಗೂ ತಿಳಿಯದೇ ತನ್ನ ಜ್ಞಾನವನ್ನು ಹೊರಗೆ ಹೇಳುತ್ತಿದ್ದಾನೆಂದು, ಆದಕಾರಣ ಮೂರು ಗ್ರಂಥಗಳಲ್ಲಿ ಇಲ್ಲಿಯವರೆಗು ಅರ್ಥವಾಗದೆ ರಹಸ್ಯವಾಗಿ ಉಳಿದುಹೋದ ಎಷ್ಟೋ ರಹಸ್ಯಗಳು ಹೊರಗೆ ಬೀಳುತ್ತಿವೆ ಎಂದು ಅರ್ಥವಾಗುತ್ತಿದೆ.** ಇಂತಹ ಸಮಯದಲ್ಲಿ ಮನುಷ್ಯರು ತಮ್ಮಲ್ಲಿನ ಅಹಂಅನ್ನು ಬಿಟ್ಟು, ತಿಳಿಯಲ್ಪಡುವ ಸ್ವಚ್ಛವಾದ ಜ್ಞಾನವನ್ನು ತಿಳಿದುಕೊಳ್ಳುವುದು ಒಳ್ಳೆಯದು. ಹಾಗಲ್ಲದೇ ಹೇಳುವವನು ನಮ್ಮಂಥ ಮನುಷ್ಯನೇ ಅಲ್ಲವೇ! ಎಂದು ಅಸೂಯೆ ಹೊಂದಿದ್ದರೇ ನಿಮಗೆ ಏನೂ ಪ್ರಯೋಜನೆ ಇರುವುದಿಲ್ಲ. ನಷ್ಟಹೋಗುವವರು ನೀವೇ. ನಾನು ಸಾಧಾರಣ ಮನುಷ್ಯನೇ ಯೆಂದು ನಾನೇ ಹೇಳುತ್ತಿದ್ದೇನೆ. ಆದರೇ ಒಳಗಿನಿಂದ ನಾನು ಜ್ಞಾನವನ್ನು ಹೇಳುತ್ತಿಲ್ಲ. ಹೇಳುವವನು ನನ್ನ ಹಾಗೆ ನನ್ನಜೊತೆಯಿರುವವನು ಎಂದು, ನಾನಲ್ಲವೆಂದು ಗ್ರಹಿಸಬೇಕು. ನಿನ್ನಹಾಗೆ ನಿನ್ನ ಪಕ್ಕದಲ್ಲಿರುವವನಂತೆ, ನನ್ನ ಹಾಗೆ ಇರುವ ನನ್ನ ಪಕ್ಕದವನು ಹೇಳುವ ಪ್ರತೀ ಮಾತು ನನ್ನದಲ್ಲ ಆತನದೇ. ನಿನ್ನ ಶರೀರದಲ್ಲಿ ಪೂರ್ಣ ಹೃದಯವಾಗಿರುವವನು, ಪೂರ್ಣ ಆತ್ಮವಾಗಿ ರುವವನು, ಪೂರ್ಣ ಮನಸ್ಸಾಗಿರುವವನು ಒಬ್ಬನೇಯೆಂದು, ಆ ಒಬ್ಬನು ತಿಳಿಸುವುದೇ ನಿಜವಾದ ಜ್ಞಾನವೆಂದು ತಿಳಿದಾಗ ಯಾರಾದರೂ ಧನ್ಯನಾಗಬಲ್ಲನು.

ದೇವರು ನಮ್ಮೊಂದಿಗೆ ಪ್ರತ್ಯಕ್ಷವಾಗಿ ಮತನಾಡುವುದಿಲ್ಲ. ಆತನು ಯಾರೂ ನೋಡದಂತೆ ಮುಸುಗಿನಲ್ಲಿಯೇ ಎಲ್ಲಾ ಮಾಡುವನು. ನಿನಗೆ ಮುಸುಗು ತಿಳಿದಿಲ್ಲ, ಮುಸುಗಿನೊಳಗಿರುವವನು ತಿಳಿದಿಲ್ಲ, ತಿಳಿಯುವುದು ಆತನ ಜ್ಞಾನ ಒಂದೇ, ಅದನ್ನೇ ತಿಳಿದುಕೋ!...

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರವು ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರವು ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲಗಳೆದರೂ ಅದು ಅಸತ್ಯವಲ್ಲ.**

Sakshi News pepar, 12-10-2015

# ‘ಹಿಂದೂ ಪದಕ್ಕೆ ನಿರ್ವಚನ ತಿಳಿದಿಲ್ಲ’

ಇಂಡೋರ್ : ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧ ಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿ ಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀ ಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

# ಪ್ರತಿಮೆ X ವಿಗ್ರಹ
# ದೈವ X ದೆವ್ವ

| ಮನುಷ್ಯನಲ್ಲಿಯೇ | ಮನುಷ್ಯನಲ್ಲಿಯೇ |
| --- | --- |
| ಜೀವಾತ್ಮ → ದೆವ್ವ | ಜೀವಾತ್ಮ → ಶಿಷ್ಯನು |
| ಆತ್ಮ → ದೈವ | ಆತ್ಮ → ಗುರು |
| ಪರಮಾತ್ಮ → ಯಾವುದೂಅಲ್ಲ | ಪರಮಾತ್ಮ → ಯಾವುದೂಅಲ್ಲ |


Author :

The Only GURU of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**



**www.thraithashakam.org**